ಶ್ರೀ

# ಶ್ರೀ ಫಕೀರೇಶ್ವರ ಪುರಾಣ.

ಲೇಖಕ.

ಗಂಗಾಧರ ಗಣೇಶ ಜಾಧವ



ಬೆಲೆ.) (ರೂಪಾಯಿ

# ಶ್ರೀ ಫಕೀರೇಶ್ವರ ಪುರಾಣ.



ಇದು

ಶ್ರೀ ಗುರ್ವಾಜ್ಞೆಯಿಂದ

ಗಂಗಾಧರ ಗಣೇಶ ಜಾಧವ,

ಮಾಜಿ ಗರ್ಲಸ್ಕೂಲ ಮಾಸ್ತರ, ಹಾವೇರಿ,

ಇವರಿಂದ

ವಿರಚಿತವಾಗಿ, ಪ್ರಸಿದ್ಧಿಸಲ್ಪಟ್ಟಿತು.



---



---

ಬೆಲೆ [illegible] ರೂಪಾಯಿ [illegible] ಆಣೆ.





# ಅರ್ಪಣಪತ್ರಿಕೆ.

ಜಗದ್ಗುರು ಶ್ರೀ ಫಕೀರೇಶ್ವರ ಪುರಾಣವು

ಇದು

ಶಿರಃಪುರ ಶೂನ್ಯಸಿಂಹಾಸನಸ್ಥಾಪನಾಚಾರ್ಯಶ್ರೀಚೆನ್ನವೀರ

ಸ್ವಾಮಿಗಳವರ ಕರಕಮಲಸಂಜಾತರಾದ

ಶಿನೇ ಶ್ರೀ ಸಿದ್ಧರಾಮಫಕೀರಸ್ವಾಮಿಗಳವರ

ಪಾದಾರವಿಂದಗಳಿಗೆ

ಆಜ್ಞಾಧಾರಕ ಗ್ರಂಥಕರ್ತನಿಂದ

ಭಕ್ತಿಪುರಸ್ಸರವಾಗಿ ಅರ್ಪಿಸಲ್ಪಟ್ಟಿದೆ.




# ಪ್ರಸ್ತಾವನೆ.

---

ಈ ಪ್ರಾಸಾದಿಕಗ್ರಂಥವನ್ನು ರಾ. ರಾ. ಗಂಗಾಧರ ಗಣೇಶ ಜಾಧವ, ಪೆನಶನರ ಸ್ಕೂಲಮಾಸ್ತರ ಇವರು ಶ್ರೀ ಗುರುಪ್ರೇರಣೆಯಿಂದ ಬರೆದಿರುವರೆಂದು ಹೇಳಬೇಕಾಗುವದು. ಸ್ಫೂರ್ತಿಯಾದಾಗ ಊದಿನಕಡ್ಡಿಯನ್ನು ಹಚ್ಚಿ, ಶ್ರೀಗುರುಸ್ಮರಣದಿಂದ ರಚಿತವಾದ ಪದ್ಯಗಳನ್ನು ಬರೆದಿಟ್ಟು, ಒಟ್ಟುಗೂಡಿಸುವದರಿಂದ ಈ ಪುರಾಣವಾಗಿರುತ್ತದೆಂದು ಗ್ರಂಥಕರ್ತರು ಹೇಳುವ ಮಾತು ವಿಶ್ವಸನೀಯವಾಗಿ ತೋರುತ್ತದೆ. ಇದರಲ್ಲಿ ಮೂಲಕರ್ತರಿಂದ ಅಂದರೆ, ಮೂಲಶ್ರೀಫಕೀರಸ್ವಾಮಿಗಳಿಂದ, ಈಗ ಸಿಂಹಾಸನಾಧಿಷ್ಠಿತರಾಗಿರುವ ೭ನೇ ಪಟ್ಟದ ೩ನೇ ಸಿದ್ಧರಾಮಸ್ವಾಮಿಗಳ ವರೆಗೆ ಎಂಟುಜನ ಮಹಾಪುರುಷರ ಚರಿತ್ರವರ್ಣನಗಳು ಬಹು ಅರ್ಥಪೂರ್ಣವಾಗಿ ಬರೆಯಲ್ಪಟ್ಟಿರುತ್ತವೆ. ಅವನ್ನು ಓದುವ ಭಾವಿಕರ ಭಕ್ತಿಯು ಉಕ್ಕೇರುವದೆಂದು ಅನುಭವದಿಂದ ಹೇಳುವೆನು. ಗ್ರಂಥಕರ್ತರು ತಪಗಟ್ಟಿಲೆ ಸತ್ಸಮಾಗಮ ಮಾಡಿದ್ದು ಸಾರ್ಥಕವಾಗಿರುತ್ತದೆಂದು ಗ್ರಂಥಾವಲೋಕನದಿಂದ ಒಡಂಬಡಬೇಕಾಗುತ್ತದೆ.

ಈ ಪುರಾಣವನ್ನು ಬರೆಯುವದಕ್ಕಾಗಿ ೬ನೇಪಟ್ಟದ ಎರಡನೇ ಶ್ರೀ ಚನ್ನವೀರಸ್ವಾಮಿಗಳು ನಮ್ಮ ಮಾಸ್ತರರನ್ನು ಕರೆದು ಆಜ್ಞಾಪಿಸಿದರಂತೆ. ಮುಂದೆ, ಏಳನೆಯಪಟ್ಟದ ಅಂದರೆ ಪ್ರಕೃತದ ೩ನೇ ಶ್ರೀಸಿದ್ಧರಾಮಸ್ವಾಮಿಗಳು ಆಶೀರ್ವದಿಸಿ ಪುರಾಣವನ್ನು ಬರೆಯಹಚ್ಚಿ ಪೂರ್ಣಮಾಡಿಸಿದರಂತೆ! ಇಧರಲ್ಲಿಮೂಲಕರ್ತರು ದುರ್ಗದ ಸ್ವಾಮಿಗಳ ಮಠದಲ್ಲಿ ಗೋಪಾಲಕರಾಗಿದ್ದು, ಮುಂದೆ ವಿಜಾಪುರದ ಬಾದಶಹನಲ್ಲಿಯೂ, ದಿಲ್ಲಿಯ ಅಕಬರಬಾದಶಹನಲ್ಲಿಯೂ ಅಗಾಧಮಹಿಮೆಗಳನ್ನು ತೋರಿಸಿ, ಅವರಿಂದ ಕ್ರಮವಾಗಿ, ಸಿಕ್ಕಾ-ಕಠಾರಿ ಹಾಗು ರಣಬಿಲ್ಲಿಗಳನ್ನು ಸಂಪಾದಿಸಿದ ವೃತ್ತಾಂತವೂ, ಡಂಬಳ ರಾಜಪುರೋಹಿತಬ್ರಾಹ್ಮಣಬಾಲಕನಿಗೆ ಅಗಾಧಪಾಂಡಿತ್ಯವನ್ನು ದಯಪಾಲಿಸಿದ ವೃತ್ತಾಂತವೂ, ಅವ್ವಲಿಂಗವ್ವನ ಸಂಬಂಧದಿಂದಲೂ, ಡಂಬಳ ಸೆಟ್ಟರ ಸಂಬಂಧದಿಂದಲೂ, ಕೋಳಿವಾಡದ ಗ್ರಾಮದೇವತೆಯ ಸಂಬಂಧ

ದಿಂದಲೂ, ಮಹಾಮಹಿಮೆತೋರಿಸಿದ ವೃತ್ತಾಂತವೂ, ಬೇರೆ ಮಹಿಮೆಗಳೂ ಸರಸವಾಗಿ ವಿವರಿಸಲ್ಪಟ್ಟಿರುತ್ತವೆ. ಇವಲ್ಲದೆ ಮೊದಲನೇಪಟ್ಟದವರು ಮಠದ ಭಾವಿಯಲ್ಲಿ ಕೃಷ್ಣಾನದಿಯ ಸಾನ್ನಿಧ್ಯವನ್ನುಂಟುಮಾಡಿದ್ದೂ, ಎರಡನೇಪಟ್ಟದವರು ಸ್ತ್ರೀವಿಷಯಕವಾದ ಜನಭ್ರಾಂತಿಯನ್ನು ನಿವಾರಿಸಿದ್ದೂ, ಮೂರನೇಪಟ್ಟದವರು ಮಿರಜಿಯ ಕಾರಾಗೃಹದಲ್ಲಿರುವಾಗ ಮಹಾಮಹಿಮೆಯನ್ನು ತೋರಿಸಿ, ಧೋಂಡಜಿವಾಘನೊಡನೆ ಬಂಧಮುಕ್ತರಾದದ್ದೂ, ೪ನೇಪಟ್ಟದವರು ಸವನೂರ ನವಾಬನಲ್ಲಿಮಹಿಮೆತೋರಿದ್ದೂ, ೫ನೇಪಟ್ಟದವರು ಮೈಸೂರ ಕೃಷ್ಣರಾಜೇಂದ್ರಒಡೆಯರನ್ನು ಅನುಗ್ರಹಿಸಿದ್ದೂ, ೬ನೇಪಟ್ಟದವರು, ಆರುವರ್ಷಪಟವರ್ಧನಸರಕಾರದವರು ಬಹುಪ್ರಯತ್ನಪಟ್ಟು ಎಳೆಸಿದರೂ ಎಳೆಯದೆಯಿದ್ದ ತೇರನ್ನು, ಆಣೆಪಟ್ಟಮೂಘಮಾಡಿಸಿ ಹುಡುಗರಿಂದ ಎಳಿಸಿದ್ದೂ, ೭ನೇಪಟ್ಟದವರು, ತಮ್ಮಹಿಂದಿನವರು ಎಂದೂ ಸಂಚಾರಮಾಡದೆಯಿದ್ದ ಬೆಟಗೇರಿ, ಗದಗ, ಹುಬ್ಬಳ್ಳಿ ಮುಂತಾದ ಸ್ಥಳದಲ್ಲಿ ಸಂಚರಿಸಿ ಮಹಿಮರೆನಿಸಿ, ಗದಗಿನಲ್ಲಿ ಮಠವನ್ನು ಕಟ್ಟಿಸಿದ್ದೂ ಇದರಲ್ಲಿ ವಿವೇಚಿಸಲ್ಪಟ್ಟಿರುತ್ತವೆ.

ಇದಲ್ಲದೆ ಈ ಪುರಾಣದಲ್ಲಿ ಸತ್ಪುರುಷರ, ಹಾಗು ನಿಜವಾದ ಗುರು-ಶಿಷ್ಯರ ಧರ್ಮಗಳು, ಲಕ್ಷಣಗಳು, ನಡತೆಗಳು, ಅತಿಥಿಸತ್ಕಾರದ ಪದ್ಧತಿಯು ಮೊದಲಾದ ಮಹತ್ವದವಿಷಯಗಳು ಯಥಾರ್ಥವಾಗಿ ವಿವೇಚಿಸಲ್ಪಟ್ಟಿರುವವು. ಪದ್ಯಗಳು ಓದುತ್ತಹೋದಂತೆ ತಿಳಿಯುವಷ್ಟು ಸುಲಭವಾದವೂ, ಸವಿಯಾದವೂ ಇರುತ್ತವೆ. ಪದ್ಯಗಳ ಭಾಷಾಸರಣಿಯೂ, ರಚನೆಯೂ ಸದ್ಯದ ವ್ಯಾವಹಾರಿಕಭಾಷೆಯನ್ನು ಅನುಸರಿಸಿದ್ದರೂ, ಬಂಧದಲ್ಲಿ ಎಲ್ಲಿಯೂ ಶೈಥಿಲ್ಯವೂ ಕೃತ್ರಿಮತನವೂ ಕಂಗೊಳಿಸುವದಿಲ್ಲ. ಗ್ರಂಥಕರ್ತರು ತಾವು ಪೀಠಿಕೆಯಲ್ಲಿ ಹೇಳಿದಂತೆ ಕ್ವಚಿತ್ತಾಗಿ ಗ್ರಾಮ್ಯಶಬ್ದಗಳನ್ನು ಉಪಯೋಗಿಸಿದ್ದರೂ, ಶಬ್ದಗಳ ಪೋಣಿಕೆಯು ಹಸಗೆಟ್ಟಿರುವದಿಲ್ಲ. ಪ್ರಾಸಾದಿಕವಾದ ಇಷ್ಟು ದೊಡ್ಡ ಪುಸ್ತಕವನ್ನು ಇಷ್ಟು ಸುಂದರವಾಗಿ ಬರೆದವರು ಆಧುನಿಕರಲ್ಲಿ ನಮ್ಮ ಪ್ರಾಂತದಲ್ಲಂತು ವಿರಲವೆಂತ ಹೇಳಬಹುದು.

ಪುರಾಣವನ್ನು ಬರೆಯುವವರ ಹೃದಯವು ಪಾಂಡಿತ್ಯದಿಂದ ಪ್ರಗಲ್ಭವಾಗಿರುವದಕ್ಕಿಂತ,ಸತ್ಸಮಾಗಮದಿಂದ ಪರಿಪಕ್ವವಾಗಿರುವದು ಅತ್ಯಂತಹಿತ

ಕರವಾಗಿರುತ್ತದೆ. ನಮ್ಮ ಸನ್ಮಾನನೀಯ ವ್ಯವಸಾಯಬಂಧುಗಳೂ, ನನಗಿಂತ ಎಲ್ಲಬಾಬುಗಳಿಂದ ಶ್ರೇಷ್ಠರೂ ಆದ ಸತ್ಸಮಾಗಮ ಧನ್ಯರೆನಿಸುವ ಅತ್ಯಂತವಿನಯಶಾಲಿಗಳಾದ ಗಂಗಕವಿಗಳ ಹೃದಯವು ಸತ್ಸಮಾಗಮದಿಂದ ಪರಿಪಕ್ವವಾದದ್ದೆಂದು, ಅವರ ಪ್ರತ್ಯಕ್ಷ ಸಮಾಗಮವನ್ನು ಪಡೆದವರು ಒಡಂಬಡದೆ ಇರಲಾರರು. ಗಂಗಕವಿಗಳ ಸಮಾಗಮ, ಅವರ ಮಾತುಗಳು, ಅವರ ಪುರಾಣ ಇವುಗಳಿಂದ ನನಗಂತು ಬಹಳಲಾಭವಾಗಿರುತ್ತದೆ. ಅಂಥ ಲಾಭವು ಕನ್ನಡಿಗರಿಗೆ, ವಿಶೇಷವಾಗಿ ಶ್ರೀಫಕೀರೇಶ್ವರಭಕ್ತರಿಗೆ, ಪುರಾಣವಾಚನದಿಂದ ಆಗುವ ಯೋಗಬಡಗಿದ್ದಕ್ಕಾಗಿ ನನಗೆ ಬಹಳ ಸಂತೋಷವಾಗಿರುತ್ತದೆ. ಈ ಪುರಾಣಕ್ಕೆ ಪ್ರಸ್ತಾವನೆಬರೆಯಲು ಅರ್ಹನಲ್ಲದ ನಾನು, ಇದೆಲ್ಲ ಶ್ರೀಫಕೀರೇಶ್ವರನ ಆಟವೆಂದು ಭಾವಿಸಿ, ಗ್ರಂಥಕರ್ತರಿಗೆ ಕೃತಜ್ಞತೆಯನ್ನು ಸಮರ್ಪಿಸುವೆನು.

ಈ ಪುರಾಣವನ್ನು ಮುದ್ರಿಸಹತ್ತಿದಂದಿನಿಂದ ಎರಡುಸಾರೆ ಉಂಟಾದ ಪ್ಲೇಗಿನಭಯವನ್ನೂ, ಆ ಪ್ಲೇಗಿನಭಯವನ್ನು ಲೆಕ್ಕಿಸದೆ ನಮ್ಮ ಛಾಪಖಾನೆಯ ಜನರು ಯಮನ ದವಡೆಯಲ್ಲಿ ನಿಂತು ಕೆಲಸಮಾಡಿದಂತೆ ಕೆಲಸಮಾಡಿ, ಪುರಾಣವನ್ನು ನಿಯಮಿತಅವಧಿಯೊಳಗೆ ಮುಗಿಸಿದ್ದನ್ನೂ ನೋಡಿದರೆ, ಶ್ರೀಫಕೀರೇಶನೇ ನಿಂತು ಕೆಲಸಮಾಡಿಸಿದನೆಂದು ಹೇಳಬೇಕಾಗುವದು. ಒಟ್ಟಿಗೆ ಶ್ರೀಶೇಷಾಚಲಸದ್ಗುರುವು ಇಂಥ ಕಠಿಣಕಾಲದಲ್ಲಿ ಕೈಕೊಂಡ ದೊಡ್ಡ ಕೆಲಸವನ್ನು ಬಡವರಿಂದ ಪೂರ್ಣಮಾಡಿಸಿ ಕೀರ್ತಿಶಾಲಿಯಾದದ್ದು ಬಹು ಸಮಾಧಾನದಸಂಗತಿಯು !

ಪುರಾಣವನ್ನು ಮುದ್ರಿಸುವ ಕೆಲಸವು ಅವಸರದಿಂದಾದದ್ದರಿಂದ ಕೆಲವು ದೋಷಗಳು ಉಳಿದಿರಬಹುದು; ಆದರೆ ಅವನ್ನೂ, ಶ್ರೀಸ್ವಾಮಿಗಳಸಂಬಂಧದ ಬೇರೆ ಚರಿತ್ರಗಳನ್ನೂ ಸೂಜ್ಞರುತಿಳಿಸಿದಲ್ಲಿ, ಎರಡನೆಯ ಆವೃತ್ತಿಯಲ್ಲಿ ಅವಶ್ಯವಾಗಿ ಅವುಗಳ ವಿಚಾರಮಾಡುವೆವೆಂದು ಗ್ರಂಥಕರ್ತರು ವಿನಯದಿಂದ ತಿಳಿಸಿರುತ್ತಾರೆ. ಈಗಿನ ಪುರಾಣ ಮುದ್ರಣದ ಕಾರ್ಯಕ್ಕೆ ಬಂದದ್ದೊಂದು ಅಗಂತುಕ ಮಹಾವಿಘ್ನವೆಂದರೆ, ಯುರೋಪದ ಮಹಾಯುದ್ಧದ ಮೂಲಕ ನಮ್ಮ ಸಾರ್ವಭೌಮಸರಕಾರಕ್ಕೆ ಒದಗಿದ ತೊಂದರೆಯು! ನಮ್ಮ ಸರಕಾರದ ಈ ತೊಂದರೆಯು ಪ್ರಜೆಗಳಾದ ನಮ್ಮ ಪ್ರತಿಬಂಧು ಕಾರ್ಯ-

ದಲ್ಲಿ ಭಾಸವಾಗುತ್ತಿರುವದು. ಶ್ರೀಫಕೀರೇಶನು ನಮ್ಮ ಸಾರ್ವಭೌಮಪ್ರಭು ಗಳಿಗೊದಗಿದ ಈ ತೊಂದರೆಯನ್ನು ಬೇಗನೆ ದೂರಮಾಡಿ, ಅವರಿಗೆ ಅಕ್ಷಯ ವಾದಜಯವಿತ್ತು, ತದ್ದ್ವಾರಪ್ರಜೆಗಳಸುಖಶಾಂತಿಗಳನ್ನು ಹೆಚ್ಚಿಸಲೆಂದು ಆ ಸದ್ಗುರುವನ್ನು ಅನನ್ಯಭಾವದಿಂದ ಪ್ರಾರ್ಥಿಸಿ, ಪ್ರಸ್ತಾವನೆಯನ್ನು ಮುಗಿ ಸುವೆನು.

ಆನಂದವನ, ವಿಧೇಯ,

ತಾ॥ ೨೮ನೇ ಮಾರ್ಚ ೧೯೧೬. ಗಳಗನಾಥ,



# ವಿಷಯಾನುಕ್ರಮಣಿಕೆ.



॥ ಶ್ರೀ ಗುರು ಬಸವಲಿಂಗಾಯ ನಮಃ ॥

# ಶ್ರೀ ಫಕೀರೇಶ್ವರ ಪುರಾಣ.

## ಪೀಠಿಕಾಸಂಧಿ.

ಶ್ರೀ ಗುರುವೆ ಜಗದಾದಿಬೀಜನೆ। ಶ್ರೀ ಗುರುವೆ ಬ್ರಹ್ಮಾಂಡರೂಪನೆ।
ಶ್ರೀ ಗುರುವೆ ರವಿಕೋಟಿ ತೇಜೋಮಯನೆ ಮಾಪ್ರಭುವೆ ॥
ಶ್ರೀ ಗುರುವೆ ನಿಗಮಾಳಿವಂದ್ಯನೆ। ಶ್ರೀ ಗುರುವೆ ಭಕ್ತೈಕಬಂಧುವೆ ॥
ಯೋಗಿಹೃತ್ಕಮಲಾರ್ಕಕರ್ತನೆಸಲಹು ಭಕ್ತರನು ॥ ೧ ॥
ಭೂರಿಕಮಲಭವಾಂಡತೋರುವೆ। ಮೂರುಮೂರ್ತಿಗೆ ತಾಯಿಯೆನಿಸುವೆ।
ಸಾರಸದ್ಗುರುಚನ್ನವೀರನಶಕ್ತಿಪರದೇವಿ ॥
ಪಾರಮಾರ್ಥದ ಸತ್ಯಭಕ್ತ್ಯಾ। ಚಾರವನು ಬಿಡದಿತ್ತುಮಹಿಮಾ।
ಧಾರೆನೀಸಲೆರಕ್ಷಿಸೌ ಶಿಶುವೆಂದು ತಿಳಿದೆನಗೆ ॥ ೨ ॥

ದೇವನೀನೇಸಕಲಲೋಕವ । ಕಾವಕರುಣಾಕರನುನೀನೇ ।
ದೇವದೇವರದೇವನೀನೇಕರ್ತಮುಧಿಪಾಜ್ಞಾ ॥
ಈ ವಸುಂಧರೆಯಲ್ಲಿಗಡನೀ । ನೀವಿವಿಧಲೀಲೆಯಲಿತೋರಿರ ।
ಲಾವಗುರ್ತವಸಿಡಿವ ನಿಮ್ಮಂಶಿಕರ ಹೊರತಾಗಿ ॥ ೩ ॥
ಹರಿಗೆವಿಾರಿದ ಹರಗೆವಿಾರಿದ। ಸರಸಿಜಾಸನವಿಧಿಗೆ ವಿಾರಿದ।
ಭರಿತಮಾಯಾತೀತಶಂಭುಜ್ಯೋತಿತಾನಿಂತು॥
ಧರಣಿಯಲಿ ಶಿವಸಾಂಬನೆನ್ನಿಸಿ। ಪರಮಲೀಲಾಮೂರ್ತಿಯಾಗಿಹ।
ಗುರುವೆನೀಕಡೆಹಾಯಿಸೀಸಂಸಾರದೊಳಗೆಮಗೆ ॥೪॥
ಗುರುನಿರಂಜನನಾದಕರ್ತನೆ। ಗುರುಪರಾತ್ಪರನಾದಕರ್ತನೆ।
ಗುರುಮಹೋನ್ನತನಾದಕರ್ತನೆಭಕ್ತವತ್ಸಲನೆ॥
ಗುರುಮಹಾತ್ಮಕನಾದಕರ್ತನೆ। ಗುರುದಿಗಂಬರನಾದಕರ್ತನೆ ।
ಕರುಣಿಸೈ ಹೊರಗೊಳಗೆನಿಜವೊಂದಾಗಿನಡೆಯುವದಾ ॥೫॥
ಧರೆಗೆ ಯೋಗಿಯರೂಪಪಾವನ । ಕರವು ತಾನೆನಿಸಿರಲು ಯೋಗೀ ।
ಶ್ವರನ ರೂಪಂಗೊಂಡು ನೀ ನವತರಿಸಿಭುವನದಲಿ ॥
ಸ್ಮರಿಪ ಭಕ್ತರ ಪೊರೆವೆ ನಾನಾ । ತರದಲೀಲೆಯೊಳಿರುವೆ ನಿಜ ಸ ।
ದ್ಗುರುವೆ ನೀಕೊಡು ನಮಗೆ ನಿತ್ಯಾನಂದ ಸಂಪದವ ॥೬ ॥
ಮನದೊಳಗೆ ಮನೆಮಾಡಿದಾತನು । ಮನದಕೊನೆಯಲಿ ಮಿನಗುವಾತನು ।
ಮನದೊಳಗೆ ನಿಜಸಾಕ್ಷಿಯಾಗಿಯೆ ನಿಂತುನೋಡುವನು ॥
ಚಿನುಮಯಾತ್ಮಾರಾಮನೀನೇ । ಘನದಿಗಂಬರದೇವದತ್ತನೆ ।
ನನಗೆ ಕರುಣಿಸುಮೋಹಜಾಲಕೆ ಸಿಲುಕದಂದದಲಿ ॥ ೭ ॥
ಆರನೆಯ ಪಟ್ಟಕ್ಕೆ ಶೋಭಿಪ । ಮಾರಹರಸಮನೆನಿಪಸದ್ಗುರು ।
ವೀರನಡಿದಾವರೆಗೆ ಸಾರಿರೆ ದರುಶನಾರ್ಥದಲಿ ॥
ಆರಯಿದುಗುರುಸಾಂಬಲೀಲೆಯ । ನೋರಣಿಸಿಕೃತಿಗೈವುದಾಪರಿ ।
ತೋರಿಪೆನು ನಿನಗೆಂದು ಹರಸಿದನಾನಿರಂಜನನು ॥ ೮ ॥
ಗುರುವೆನನ್ನಿಂದಾಗದಾಗದು । ದುರಿತಸಂಸಾರಿಕನು ನಾನೆನೆ ।
ಗುರುಫಕೀರೇಶ್ವರನು ನುಡಿಸುವನೊಳಗ ನಜೆಯಂದ ॥

ಗುರುಕೃಪೆಯುನನಗಾದರಾಗಲಿ। ಗುರುಪುರಾಣವುಲೋಕದೊಳಗೆಂ।
ದೆರಗಿ ವಾಸಸ್ಥಾನಕಾಂ ಸೊರಟೂರಿಗೈತಂದೆ ॥ ೯ ॥
ಮೃಡನಭಕ್ತರೆಕೇಳಿರಾಗುರು। ಪೊಡನೆಶಿವಸಾಯುಜ್ಯಸಂಪದ।
ಕಡರಿದನುಗಡ ಬಳಿಕ ಕೇಳಿರಿ ಸಾಧುಸಜ್ಜನರು ॥
ಪೊಡವಿಯುಲಿ ಗುರುಮಠಕೆಪಟ್ಟ। ಕೊಡೆಯನಾದನು ಸಿದ್ಧರಾಮನು।
ಬಿಡದೆಕರೆಯಿಸಿ ಹರಸಿದನು ಗಡವರಕಟಾಕ್ಷದಲಿ ॥ ೧೦ ॥
ಮದನಹರವರಕುವರಕರಿಮುಖ।ಚದುರಚನ್ನಿಗಸಕಲವಿದ್ಯಾ।
ಸದನ ಸದ್ಗುಣ ಭರಣ ಗಣಪತಿ ನಿನಗೆ ವಂದಿಸುವೆ ॥
ಹೃದಯಕಮಲದೊಳೆಸೆದುನೀನತಿ। ಮೃದುಮಧುರತರವಾಗಿನುಡಿಯಿಸು।
ಸದಮಲಾತ್ಮನ ಕರ್ತನೀಕೃತಿಯೆಂದು ತಿಳಿದೊಳಗೆ ॥ ೧೧ ॥
ವಾಣಿಜಗದಾ ಜಾಣೆಬ್ರಹ್ಮನ। ರಾಣಿವಿದ್ಯದಚೂಣಿಸುಗುಣ।
ಶ್ರೇಣಿಘನಕಲ್ಯಾಣಿವರದಸುಪಾಣಿಫಣಿವೇಣಿ ॥
ಮಾಣದಾಂ ಮಣಿದಪೆನು ನೀ ನೀ। ಕ್ಷೋಣಿಯಲಿಕೃತಿಪಥವನುರೆ ಕ।
ಣ್ಗಾಣಿಸೌಜಗದಾದಿಕರ್ತನಲೀಲೆಯೆಂದೊಸೆದು ॥ ೧೨ ॥
ಹರಿಯೆಹರನೇ ಬ್ರಹ್ಮನೇನೀ। ವರಿತುನಿಜಕೃತಿಯೆಂದು ಸಮ್ಮುದ।
ವೆರೆದು ನಿಲ್ಲುವದೆಂದು ಧ್ಯಾನಂಗೈವೆನಡಿಗಡಿಗೆ ॥
ಮೆರೆವ ದಿಕ್ಪಾಲಕರೆ ಪರಮೇ। ಶ್ವರನ ಕೃತಿಯೆಂದೊಲೆದು ಸಂತಸ।
ವಿರಿಸಿ ಕರುಣಿಪುದೆಂದು ವಿನಮಿತನಾಗಿ ಪ್ರಾರ್ಥಿಪೆನು ॥ ೧೩ ॥
ಮಾರಹರನಪ್ಪಳಿಸೆಜಡೆಗವ। ತಾರವಾಡಿಯೆ ಫಾಲನೇತ್ರಗೆ।
ಮೀರಿರೌದ್ರಾವೇಶಕೋಪಾಟೋಪದೇಳ್ಗೆಯಲಿ ॥
ಸಾರಿ ದಕ್ಷಬ್ರಹ್ಮನಿಗೆ ಸಂ। ಹಾರಗೈದಾವಿಶ್ವರೂಪನೆ।
ವೀರಭದ್ರನೆ ಬೆಳಗಿಕೃತಿಗುರೆ ಮಾಡುಮಂಗಳವ ॥ ೧೪ ॥
ಎಸೆವ ಷಣ್ಮುಖಸ್ವಾಮಿಯೇ ಶ್ರೀ। ಬಸವಲಿಂಗನೆ ಚನ್ನಬಸವನೆ।
ವಸುಧೆಯಲಿ ಕೃತಿ ತಮ್ಮದೆಂದೇ ಬೆಳಗಿರಾತ್ಮದಲಿ ॥
ರಸೆಯೊಳಾಡಿದ ಶಿವಕವೀಂದ್ರರೆ। ಶಿಶುವುಹೌದೆಂದೊಸೆದು ಹೃದಯದೊ।
ಳೆಸೆದು ಪೂರ್ಣಂಗೈಸಿರೆಂದಾಳ ಪಾದಕೆರಗುವೆನು ॥ ೧೫ ॥

ಮೇದಿನಿಯೊಳಾ ಮಿಶ್ರಿಕೋಟಿಯ । ಜಾಧವೇತ್ಯುಪನಾಮಧಾರಕ ।
ನಾದ ಶ್ರೀ ಗಣಪತಿಯ ನರಸವ್ವ ವ್ವ ನಾತ್ಮಜನು ॥
ಸಾಧುಸಜ್ಜನಭಕ್ತಜನಕುಲ । ಪಾದಗಳ ಧೂಳಿಯಲಿ ನಲಿವವ ।
ನಾದ ಗಂಗಾಧರನು ನುತಿಸುವನಾತ್ಮಗುರುವರನ ॥ ೧೬ ॥
ಕೇಳಿರೈ ಪದಿನಾಲ್ಕುಲೋಕದ । ಮೇಳವದು ಬ್ರಹ್ಮಾಂಡವೊಂದದು ।
ಕೇಳಿರೈ ನೀವ್ ಮೇಣುಬ್ರಹ್ಮಾಂಡಗಳ ಸಂಖ್ಯೆಯಲಿ
ಮೇಳಗೊಂಡಿಹವರರೆ ಪರಶಿವ । ಲೀಲೆಯಲಿ ಶ್ರೀ ಶಕ್ತಿದೇವಿಯ ।
ಲೀಲೆಯಲಿ ನಡೆದಿಹುವು ಸೃಷ್ಟ್ಯಾದ್ಯಖಿಳಕಾರ್ಯಗಳು ॥ ೧೭ ॥
ತಿಳಿಯಿರಾ ಪದಿನಾಲ್ಕುಲೋಕದ । ಕುಲದೊಳೀನವಖಂಡಪೃಥ್ವಿಯು ।
ಹೊಳೆವುದೊಂದದರಲ್ಲಿ ಕಾಣುವವೈದುಖಂಡಗಳು ॥
ಇಳೆಯೊಳಿನ್ನುಳಿದಿರ್ಪನಾಲ್ಕವು । ಪೊಳೆಯುವೀನರಜನಕೆ ಮಾಯದೊ ।
ಳೊಳವುಗಡಜಗದೇಕಕರ್ತನ ಸೂತ್ರಮಾತ್ರವಲಾ ॥ ೧೮ ॥
ಇರುವರೈ ತ್ರೈಮೂರ್ತಿಗಳು ಗಡ । ಪರಿಕಿಸಲ್ಬ್ರಹ್ಮಾಂಡವೊಂದ ।
ಕ್ಕಿರುವವೈ ತ್ರೈಮೂರ್ತಿಯೆಡೆಗಳು ಬೇರೆಬೇರೆನಿಸಿ ॥
ಇರುವದೈ ಗಡಬ್ರಹ್ಮಲೋಕವ । ದಿರುವದೈ ವೈಕುಂಠಹರಿವಿಡಿ ।
ದಿರುವದಾ ಕೈಲಾಸವೆಂಬುದು ಸಾಂಬಲೋಕವದು ॥ ೧೯ ॥
ಸರಸಿಜೋದ್ಭವ ಸೃಜಿಸುತಿರುವನು । ಹರಿಯುಪೋಷಣೆಗೈಯುತಿರುವನು ।
ಹರನು ಸಂಹರಿಸುತ್ತಲಿರುವನು ಸಕಲ ಜೀವಿಗಳ ॥
ಅರಿಯಲಾಪರಿಮೂವರೆಡೆಗಳ । ಗಿರುವರೈ ಬಹುವಿಧದಮುನಿಗಳು ।
ಸುರರು ದೈತ್ಯರು ಮೆರೆವರಾ ಸ್ತ್ರೀ ಪುರುಷರೂಪದಲಿ ॥ ೨೦ ॥
ಪರಿಕಿಸಲಿಕೊಂದೊಂದುಖಂಡದೊ । ಳಿರುವವೈ ಬಹುದೇಶಗಳುಗಡ ।
ತರತರದ ದೇಶದಲಿ ಭಾಷೆಯು ಲಿಪಿಯು ಬೇರೆನಿಸಿ ॥
ಇರುವದತಿಶಯಜನಸಮೂಹವು । ಪರಮಧರ್ಮಾಚಾರಪದ್ಧತಿ ।
ವೆರಸಿಪಾಲಿಪ ಭೂಪರೆಸೆವರು ಬಹಳ ಸಂಪದದಿ ॥ ೨೧ ॥
ಪೊಡವಿಯಲಿ ಗಡಸುಪ್ರಸಿದ್ಧವು । ಸಡಗರದೊಳೀಹಿಂದುದೇಶವು ।
ಮೃಡನಮಹಿಮರಬೀಡು ಸಿರಿಸಂಪದದ ತವರ್ಮನೆಯು ॥

ಕಡಲುಗಳು ಬಳಸಿಹವು ಮೂಡಣ । ಪಡುವತೆಂಕಣ ದಿಕ್ಕುಗಳಿಗೆನೆ ।
ಬಡಗಣೆಡೆಗುರೆ ರಂಜಿಸುವ ದೈಘನಹಿಮಾಚಲವು ॥ ೨೨ ॥
ಪರಮಯೋಗೀಶ್ವರರ ತಾಣವು । ಸುರಮುನೀಂದ್ರರ ಠಾವು ನಿಜ ಸ ।
ತ್ಪುರುಷ ಸಾಧುವಿತಾನ ಸುಸ್ಥಳವೂರ್ಯರಾಸ್ಥಾನ ॥
ವರಕವೀಶ್ವರಪಂಡಿತರ ಭಾ । ಸುರದ ಶಾಲೆಯು ಭಕ್ತಜನರಾ ।
ಗರವು ತಾನೆಂದೆನಿಸಿ ಹಿಂದುಸ್ಥಾನವೆಸೆಯುವದು ॥ ೨೩ ॥
ಧರಣಿಯಲಿ ಮೇಲೆನಿಸಿರಾಜಿಪ । ಗಿರಿಗಳಿಂದಂ ದರಿಗಳಿಂದಂ ।
ಪರಿವ ನದಿಗಳಿನಾ ನದಂಗಳನೈದೆ ಸ್ಸೈಯೆನಿಸಿ ॥
ತರತರದ ನವನಂದನಂಗಳ । ಸುರುತರದ ಪಶುಪಕ್ಷಿಕುಲದಿಂ ।
ಮೆರೆಗುವುರೆ ಕಣ್ಮನಕೆ ಹಿಂದುಸ್ಥಾನದೇಶವಿದು ॥ ೨೪ ॥
ಪರಿಪರಿಯ ಫಲಪುಷ್ಪಗಳಘನ । ತರುಲತಾದಿಗಳಾಳಿಯಲಿಬಹು ।
ತರದ ಧಾನ್ಯವ್ರಾತಮಣಿಕನಕಾದಿಸಂಗ್ರಹದಿ ॥
ಸರಸನಿಗಮಾಗಮ ಸುಶಾಸ್ತ್ರೋ । ತ್ಕರಗಳಲಿ ಮಿಗಿಲೆನಿಸಿ ತಾನಿಂ ।
ತರದೆ ಹಿಂದುಸ್ಥಾನ ವೆಸೆವುದು ಭೂತಳಾಗ್ರದಲಿ ॥ ೨೫ ॥
ಉಡುಪು ತೊಡಪುಗಳಲ್ಲಿ ಪಾಕದ । ಸಡಗರದಸಾಧನದಿ ಭೋಜನ ।
ಕೊಡವೆಡೆವ ಸೌಕರೆಯೊಳಾತಾಂಬೂಲ ವಿಧಿಗಳಲಿ ॥
ಪಡಲ್ಪಡುವ ಸೌಗಂಧತೈಲದ । ವಡಿಗಳಲಿ ಗಡಹಿಂದುದೇಶವು ।
ಪೊಡವಿಗುನ್ನತವೆನಿಸುತೆಸೆಗುಂ ಸರ್ವಸಿರಿಯೊಡನೆ ॥ ೨೬ ॥
ಪರಮಕಾಶೀಕ್ಷೇತ್ರವೆಂಬುವ । ದಿರುವ ದುತ್ತರಕೆನೆಲು ದಕ್ಷಿಣ ।
ಕಿರುವದೈ ಸಲೆ ರಾಮಲಿಂಗೇಶ್ವರನ ಸುಕ್ಷೇತ್ರ ॥
ಅರರೆ ವಿಂಧ್ಯಾಚಲವು ಮಧ್ಯದೊ । ಳಿರುವದದರಾ ದಕ್ಷಿಣಾಶೆಗೆ ।
ಮೆರೆವುದಾ ಮಾರಾಷ್ಟ್ರದೇಶವು ಸಕಲಸಂಪದದೆ ॥ ೨೭ ॥
ಹರನ ಭಕ್ತರೆ ಕೇಳಿರೀಪರಿ । ಯಿರುವ ದಕ್ಷಿಣ ಹಿಂದುದೇಶಕೆ ।
ಗಿರಿಗಳಿರುವವು ಪೂರ್ವ ಪಶ್ಚಿಮ ಘಟ್ಟವೆಂದೆನಿಸಿ ॥
ಮೆರೆಗು ಮವುಗಳಮಧ್ಯಭಾಗದಿ । ತರತರದ ಬಹುಸೀಮೆಗಳುಸಿರಿ ।
ವೆರೆದು ಕಣ್ಗೆಸೆದಿರ್ಪುವವುಗಳ ಮಧ್ಯಭಾಗವದು ॥ ೨೮ ॥

ಅರಿಯಿರೈ ಕರ್ನಾಟದೇಶವು । ಮೆರೆಗುವುದರೊಳಹೊರಗೆ ಸಿರಿಸಡ ।
ಗರದ ಸಂಸ್ಥಾನಗಳು ರಂಜಿಸುತಿಹವು ಬಹುವಿಧದೆ ॥
ಮಿರಜಿ ಸಾಂಗ್ಲಿ ಕುರಂದವಾಡವ । ದಿರುವದಾ ಜಮುಖಂಡಿ ಮೇಣಿವೆ ।
ಪರಮ ಪಟವರ್ಧನರ ಸಂಸ್ಥಾನಗಳು ಶೋಭಿಪವು ॥ ೨೯ ॥
ಏನು ಹೇಳಲಿ ಸಾಂಗ್ಲಿಯಾಸಂ । ಸ್ಥಾನವದು ಸಿರಹಟ್ಟಿ ಪರಗಣೆ ।
ಕ್ಷೋಣಿಯಲಿ ರಂಜಿಪುದು ನಯಭಯಭಕ್ತಿನೀತಿಯಲಿ ॥
ಸ್ವಾನುಭಾವದ ಜ್ಞಾನಮೂರ್ತಿಯು । ಸ್ಥಾಣುವೆನಿಪ ಫಕೀರಪಾಜ್ಜಗೆ ।
ಮೌನಪಾಜ್ಜಗೆಹೊಂದಿ ಸಂಭ್ರಮಗೊಂಬುದೊಳಹೊರಗೆ ॥ ೩೦ ॥
ಅರರೆ ಜಗದಾಂಬಿಕೆಯ ಪರ್ವತ । ವಿರುವದೆನಲುತ್ತರಕೆ ದಕ್ಷಿಣ ।
ಕಿರುವದೈ ಮೈಲಾರಲಿಂಗನ ಪರ್ವತಾವಳಿಯು ॥
ಧರೆಗೆ ಮೆರೆವ ಕಪೋತಪರ್ವತ । ವಿರುವದೈ ಪೂರ್ವಕ್ಕೆ ಪಶ್ಚಿಮ ।
ಕಿರುವ ದುಳಿವೆಯ ಕ್ಷೇತ್ರದಾಪಾಮುನೆಯ ಪರ್ವತವು ॥ ೩೧ ॥
ಇಂತುನಾಲ್ದೆಸೆಗಳೆಗೆಗಿರಿಗಳು । ನಿಂತುಶೋಭಿಸೆಮಧ್ಯದಲಿ ವಿ ।
ಶ್ರಾಂತಿ ಸುಸ್ಥಳವೆನಿಸಿ ರಂಜಿಪುದೈ ಶಿರಃಪುರವು ॥
ಅಂತಕಾರಿಗೆ ಮೀರಿಮಹಿಮೆಯ । ನಾಂತುಬೆಳಗುವ ಸದ್ಗುರುವಿಗೇ ।
ಕಾಂತವಾಸಸ್ಥಾನವೆನೆ ಮೆರೆದಪುದು ಶ್ರೀ ಮಠವು ॥ ೩೨ ॥
ಸರಸಭಕ್ತರೆ ಕೇಳಿರೈ ಸಲೆ । ಮೆರೆವಭದ್ರಾಸಹಿತ ತುಂಗೆಯು ।
ಹರಿವಳೈ ಪೂರ್ವಕ್ಕೆ ಪಶ್ಚಿಮಕಿಹಳು ಶಾಲ್ಮಲೆಯು ॥
ವರ ಮಲಪ್ರಭೆಯುತ್ತರಕ್ಕೆ ನೆ। ವರದೆಧರ್ಮಾಸಹಿತವಾಗಿಯೆ ।
ಹರಿವಳೈ ದಕ್ಷಿಣಕೆ ಜಗಕುಪಕಾರಿಯೆಂದೆನಿಸಿ ॥ ೩೩ ॥
ಧರೆಯೊಳೀಬಗೆಯಲ್ಲಿ ನದಿಗಳು । ಹರಿವವೆಂದೆನೆ ಮಧ್ಯಸೀಮೆಯೊ ।
ಳಿರುವದಲ್ಲಮುಕರ್ತನಾಡುವ ಪಳಶಿರಃಪುರವು ॥
ಪರಮಕಾಲಜ್ಞಾನದಾಟದ । ಕುರುಹುತೋರುತೆ ಭಕ್ತಜನರನು ।
ಪೊರೆವಶಂಕರ ದಿವ್ಯಪೀಠವು ಶೋಭಿಸುವದಮವಾ ॥ ೩೪ ॥
ಧರೆಯೊಳಾ ಶಿವಲೀಲೆದೋರುತೆ । ಪರಮಭಕ್ತವ್ರಾತದಲಿಗಡ ।
ಪಂಶಿವನ ಸೂತ್ರದಲಿ ಬೆಳಗುವ ಗುರುಪರಾತ್ಪರನ ॥

ಅರರೆ ಹುಟ್ಟಿಫಕೀರಜಂಗಮು । ನಿರುವನೆಂದೇ ಬಿರುದುಹೊಗಳಿಸು ।
ತಿರುವ ಕರ್ತನ ಶೂನ್ಯಸಿಂಹಾಸನವು ಶೋಭಿಪುದು ॥ ೩೫ ॥
ಕುಂತುಕೇಳಿರಿ ಭಕ್ತರೆಲ್ಲ ನಿ । ತಾಂತಶಿವಗುಣನಿಳಯಸದ್ಗುರು ।
ಶಾಂತಮಹಿಮಾ ಕಥೆಯನೊರೆಯುವೆ ನೊಡೆಯನಾಜ್ಞೆಯಲಿ ॥
ಅಂತಕಾಂತಕ ಲೀಲೆಯನು ಮಹಿ । ಮಾಂತರಂಗವನರಿವರಾರೈ ।
ಹೊಂತಕಾರಿಗಳೆಲ್ಲರರಿಯಿರಿ ಗುರುಪುರಾಣದಲಿ ॥ ೩೬ ॥
ಗುರುಮಹತ್ವದ ನಿಜಪುರಾಣವು । ಗುರುವಿನಾಜ್ಞೆಯೊಳೆಸೆದುಪುಟ್ಟಿತು ।
ಜರಿದವಂ ಗಡದ್ರೋಹಿ ಶ್ರೀಗುರುಲಿಂಗಜಂಗಮಕೆ ॥
ಜರಿದಪಾಪದಫಲವು ಬಿಡದಾ । ನರಕತಪ್ಪದು ಮುಂದೆನಿಶ್ಚಯ ।
ವರಿಯಿರೈ ಬಲುಜೋಕೆಯೆಂದಾಡಿಸುವನಾಕರ್ತಾ ॥ ೩೭ ॥
ಧರಣಿಯಲಿ ಪೌರಾಣವೆಂದೊಡೆ।ಸರಸಮೃದುಮಧುರೋಕ್ತಿಮಯಮದು
ನರರು ನಂಬಲಿಕಾಗದೆಂದಿಗು ಮತಿಶಯೋಕ್ತಿಯದು ॥
ಮರುಳು ಭಾವಿಕತನವು ಸೈಯೆಂ । ದೊರೆವರೈ ಪಂಡಿತರು ಕೆಲವರು ।
ಹರಹರಾ ಕಲಿಬಲಿಮಹತ್ವವ ನರಿಯದವರವರು ॥ ೩೮ ॥
ಗುರುಪುರಾಣದೊಳೆಸೆವರೈ ಗುರು ।ವರನು ಬಸವನು ಚನ್ನಬಸವನು ।
ಶರಣರೊಂದಿಗೆ ನಲಿವರರ್ಚಿಸೆ ಗುರುಪುರಾಣವನು ॥
ಜರಿವಜನರಿಗೆ ಶಕ್ತಿಮಾಹೇ । ಶ್ವರರು ನಾನಾವಿಧದೆಕಾಡುವ ।
ರರಿಯಿರೈ ನೀವ್‌ಜರಿಸಬೇಡಿರಿ ನಿಮ್ಮ ಜಾಣ್ಮೆಯನು ॥ ೩೯ ॥
ದುರಿತಮನದಿಂ ಮುಟ್ಟಲಾಗದು । ಜರಿಯಲಾಗದು ಕೆಟ್ಟಸ್ಥಳದೊಳ ।
ಗಿರಿಸಲಾಗದು ಗುರುಪುರಾಣಕೆ ಭಕ್ತರರ್ಚಿಸಲು ॥
ಬರುವ ಕಂಟಕಳೈಸುವದು ತಾ । ಸಿರಿಯುಪೆರ್ಚುಗುಮೆಲ್ಲಬಾಳ್ವೆಯ ।
ಪರಿಯುಸುಖಕರವೆನಿಸುವದುಗಡ ಕರ್ತನೊಲುಮೆಯಲಿ ॥ ೪೦ ॥
ಗುರುಫಕೀರೇಶ್ವರನಭಕ್ತರೆ । ಶಿರವಬಾಗಿರಿ ನಿಜಪುರಾಣಕೆ ।
ಜಯಿಯದಲೆ ಸಲೆಪೂಜೆಮಾಡಿರಿ ಭಕ್ತಿಭಾವದಲಿ ॥
ದುರಿತಭಾವರು ಪಳಿದರವಗೆ । ಗುರುದಿಗಂಬರಕರ್ತಮುಳಿವನು ।
ಭರದೆ ಬೀಳ್ವವು ಹೊಡತಗಳು ಗಡ ಮಾಯದಾಟದಲಿ ॥ ೪೧ ॥

ಅರಿತುಕೊಳ್ಳಿರಿ ಗುರುಪುರಾಣದೊ। ಳಿರುವಲೀಲಾಮೃತಕೆನಲಿಯಿಂ।
ಬರಿದೆ ಕುಲಛಲವಿಡಿದುಮತ್ಸರಬುದ್ಧಿಯಿಂ ಪಳಿಯೆ॥
ಪರಮಕರ್ತನ ಸಿದ್ಧರಾಮೇ। ಶ್ವರನ ಶ್ರೀ ಶಿವಯೋಗಿಸ್ವಾಮಿಯ।
ತ್ವರಿತ ಶಾಪದ ಬೇಗೆ ಬಿಡದೈ ದೇಹದೊಳಹೊರಗೆ ॥ ೪೨ ॥
ಗುರುಚರಿತ್ರವು ಶ್ರವಣವಾದೊಡೆ। ದುರಿತಮನಳೈಸುವದು ಪುಣ್ಯಂ।
ಕುರಿತಬುದ್ಧಿಯು ಬೆಳಗಿಜ್ಞಾನೋತ್ಪನ್ನವಾಗುವದು॥
ನರಶರೀರಪುರಾಂತರಾಳದೊ। ಳರರೆ ಜ್ಞಾನದ ಜ್ಯೋತಿನೋಡು।
ತ್ತಿರುವದದರೊಳಗೆಲ್ಲ ಕಾಣುವದಾತ್ಮದನುಭವವು ॥ ೪೩ ॥
ಭಕ್ತಿಯಿಂ ಗುರುದೇವನೊಲುಮೆಯು। ಭಕ್ತಿಯಿಂದಿಷ್ಟಾರ್ಥಸಿದ್ಧಿಯು।
ಭಕ್ತಿರತ್ನವು ಬೆಳಗಲಾತ್ಮಜ್ಞಾನನೇತ್ರದಲಿ॥
ಭಕ್ತನಿಗೆತಾಂ ಸತ್ಯಲೋಕವು। ಭಕ್ತನಿಗೆ ವೈಕುಂಠಲೋಕವು।
ಭಕ್ತನಿಗೆ ಕೈಲಾಸಕಾಣುವದಾತ್ಮದೊಳಹೊರಗೆ ॥ ೪೪ ॥
ಬಸವನೀನೇ ನನಗೆ ತಂದೆಯು। ಬಸವನೀನೇನನಗೆ ತಾಯಿಯು।
ಬಸವನೀನೇ ನನಗೆ ಬಂಧುವು ನೀನೆ ಬಳಗವದು॥
ಬಸವನೀನೇನನಗೆ ಸಾಂಬನು। ಬಸವನೀನೇ ಸಕಲದೈವವು।
ಬಸವನೀನೇ ನನಗೆಸೈ ಸೌಭಾಗ್ಯವಾರೋಗ್ಯ ॥ ೪೫ ॥
ಬಸವನೀನೇ ಸೌಖ್ಯದಾತನು। ಬಸವನೀನೇ ಭಕ್ತಿಕಾರಣ।
ಬಸವನೀನೇ ಮುಕ್ತಿದಾಯಕ ನೀನೆ ಸದ್ಗುರುವು॥
ಬಸವ ಬಸವಾ ಬಸವ ಬಸವಾ। ಬಸವನೀನೇ ಮತಿಯು ಗತಿಯೆಂ।
ದಸಮಭಕ್ತಿಯೊಳಿರಗುತಿರೆಗುರುತೋರ್ಪನೊಳಹೊರಗೆ ॥ ೪೬ ॥
ಪರಮಸಂಸ್ಕೃತಶಬ್ದಗಳುಪೊಸ। ತರದಕನ್ನಡಶಬ್ದಗಳು ಮು।
ನ್ನಿರುವ ಕನ್ನಡ ಶಬ್ದಗಳು ತದ್ಭವದ ಶಬ್ದಗಳು॥
ಗುರುಪುರಾಣದಿ ಗ್ರಾಮ್ಯರೂಢಿಯೊ। ಳಿರುವಶಬ್ದಗಳೆಲ್ಲಬಂದಿವೆ।
ಜರಿಯದಲೆ ಗುರುಲೀಲೆಯರಿದೇ ಸುಖಿಸಿರೆಂಬುವೆನು ॥ ೪೭ ॥
ಸಹಜತಿಳಿಯುವಹಾಗೆ ಶ್ರೀಗುರು।ಸಹಜಲೀಲಾಸಾರವನುಸಲೆ।
ಸಹಜವಾಗಿಯೆ ನುಡಿಸಿದನು ಭೂಜನಹಿತಾರ್ಥದಲಿ॥

ಮಹಿಗೆಮಂಗಲವಾದ ಕಥೆಯಿದು । ಮಹಿತ ಮಹಿಮನ ದಿವ್ಯಕಥೆಯಿದು ।
ವಿಹಿತವಾಗಿದೆ ಕೇಳ್ದು ನಂಬಿರಿ ಸಕಲಕುಲದವರು ॥ ೪೮ ॥
ಭಕ್ತಜನರಿಗೆ ರತ್ನದರ್ಪಣ । ಭಕ್ತಜನಘನಗೂಢನಿಧಿನಿಜ ।
ಭಕ್ತಜನಚಿಂತಾಪಹಾರದಮಂತ್ರಪುಂಜವಿದು ॥
ಭಕ್ತಜನರಾನಂದದೆಡೆ ಸ । ದ್ಭಕ್ತಜನರಮೃತದಕೊಳಂಗಡ ।
ಭಕ್ತವತ್ಸಲ ಸಾಂಬಸದ್ಗುರು ವರಪುರಾಣಗಡಾ ॥ ೪೯ ॥
ಅಸಮಸದ್ಗುರು ಕರ್ತಭಕ್ತಿಯು । ರಸವನಿಚ್ಛಿಪನುಂಬನದರಿಂ ।
ಬಿಸುಟ ಸಿಂಗಾರಾದಿ ರಸಗಳ ಕಡೆಗೆ ನೋಡದಲೆ ॥
ರಸೆಯೊಳುನ್ನತಮುಕ್ತಿಮಾರ್ಗದೊ । ಳೆಸೆವ ಭಕ್ತ್ಯಾಚಾರದಂದವ ।
ನೊಸೆದು ನುಡಿಸಿದನೆಂದು ಮನ್ನಿಪುದೆಲ್ಲ ಪಂಡಿತರು ॥ ೫೦ ॥
ನಂಬಿದವರಿಗೆ ಸಾಂಬನಗಲದ । ಲಿಂಬನೀವನು ನಂಬದವರಿಗೆ ।
ಸಾಂಬನಿಂಬನು ಕೊಡನು ಸಲಹನು ಮೂರುಲೋಕದಲಿ ॥
ನಂಬಿಗೆಗೆ ಕೇಡಿಲ್ಲ ಜಗದೊಳು । ಹಂಬಲವು ಪಾಡಲ್ಲ ಗುರುವಿಗೆ ।
ನಂಬಿಕೆಟ್ಟವರುಂಟೆ ಹೇಳಿರಿ ಕೇಳಿರೈ ನೀವು ॥ ೫೧ ॥
ಪ್ರಾರಬುಧವೇ ಮುಖ್ಯವೆಂದಾ । ಧೀರರೆಲ್ಲರು ನುಡಿಯುವರು ಗಡ ।
ಸಾರುವದು ಗಡ ಶ್ರುತಿಯು ಸತ್ಯವದಾದೊಡಂಜಗಕೆ ॥
ಪ್ರಾರಬುಧವಿದು ನ್ಯೂನವಧಿಕವು । ತೋರುವದುಗಡಸಬಲಶ್ರುತಿಯಿದು ।
ಧಾರುಣಿಯೊಳಿದನರಿತು ನಡೆಯಿರಿ ಭಕ್ತರೆಂಬುವರು ॥ ೫೨ ॥
ಪರಮ ಭಕ್ತರೆ ಕೇಳಿರೈಸಲೆ । ಗುರುಫಕೀರೇಶ್ವರನು ಮೌನೇ ।
ಶ್ವರನು ವಿಧಿಲಿಖಿತವನು ತೊಡೆದಾ ತನ್ನ ಭಕ್ತರಿಗೆ ॥
ಹರಸಿ ಶಿವಲಿಪಿಬರೆದರಂದಿಗೆ । ಬರೆವರಿಂದಿಗು ಮುಂದಿಗಾದೊಡ ।
ಮರಿತುಕೊಳ್ಳಿರಿ ನಿಶ್ಚಯವು ಶತನಿಶ್ಚಯವುನಿಜವು ॥ ೫೩ ॥
ದುರಿತಕರ್ಮವನೇನುಮಾಡದ । ಲಿರುವಸತ್ಕಾರ್ಯವನು ಮಾಡದ ।
ಲಿರುವತಾಂ ಪ್ರಾಲಬ್ಧವೇಗತಿ ಯೆಂದುನಡೆವವಗೆ ॥
ದುರಿತಕುಗ್ಗದು ಪುಣ್ಯಹೆಚ್ಚದು । ಹರನುಮುನಿಯನು ಗುರುವ್ರಕಾಯನು ।
ಧರೆಯೊಳಾಪ್ರಾಲಬ್ಧವಿದ್ದಂತಾಗುವದು ನಿಜವು ॥ ೫೪ ॥

ಸಿರಿಯಮದದಲಿ ಬೆರತುಪರರಿಗೆ । ಜರಿದುಸತ್ಪುರುಷರಿಗೆ ನೋಯಿಸಿ ।
ಬರಿದೆ ಲೌಕಿಕದಲ್ಲಿ ಮೆರೆಯುವಲಂಡಭಂಡರಿಗೆ ॥
ಹರಣವಾಗುವದವರ ಪುಣ್ಯವು । ಭರಿತವಾಗುವದಯ್ಯೊಪಾಪವು ।
ಗುರುವುಮುನಿವನು ಕೆಡುವದಾಪ್ರಾಲಬ್ಧಮಧ್ಯದಲಿ ॥ ೫೫ ॥
ಶರಣರೆಡೆಯಲಿ ಸೇವೆಮಾಡುತೆ । ನಿರುತಸತ್ಕಾರ್ಯದಲಿ ನಲಿವುತೆ ।
ಗುರುವೆನೀಗತಿಯೆಂದು ನಡೆಯುವ ಪರಮಭಕ್ತನದು ॥
ದುರಿತಹರಣವು ಪುಣ್ಯವಧಿಕವು । ಹರನುಮುನಿದರುಗುರುವುಕಾಯುವೆ ।
ನರಿಯಿರಾಪ್ರಾಲಬ್ಧವೇಮಾಡುವದು ಲೋಕದಲಿ ॥ ೫೬ ॥
ಭಕುತರೇ ಲಾಲಿಸಿರಿಪರಮಾ । ರ್ಥಕದಮಾತಿದು ತಿಳಿದುಕೊಳ್ಳಿರಿ ।
ಪ್ರಕಟಗುರುವಿನ ನಿಜಮಹತ್ವದ ಸಾರವಿಂತಿಹುದು ॥
ಮುಕುತಿಪದ್ಧತಿಯರಿದಜಾಣರು । ಸುಖಿಸುವರು ಗುರುಸೇವೆಯಲಿಗಡ ।
ಸಕುಟಲರಿಗಿದು ಯೋಗ್ಯವಲ್ಲವು ಪೇಳ್ದಡೇನಹುದು ॥ ೫೭ ॥
ಗುರುಪದಾಂಬುಜಸೇವೆಶರಣರ । ಚರಣಕಮಲದಸೇವೆ ಯೋಗೀ ।
ಶ್ವರರಪಾದದ ಸೇವೆಯುವಧೂತಾಂಘ್ರಿಸೇವೆಯದು ॥
ಪರಮಸಾಧುವಿನಡಿಯಸೇವೆಯು । ದುರಿತವನು ಪರಿಹರಿಸುವದು ಬಹು ।
ತರದರೋಗವನಳಿಸುವದು ಸಾಧಿಪುದುಸದ್ಗತಿಯ ॥ ೫೮ ॥
ಜ್ವರವುದಾಹವು ಶ್ವಾಸಕಾಸವು । ಶಿರದರೋಗವು ವ್ರಣವುಪೀನಸ ।
ತ್ವರಿತಖಾಸವು ಗುಲ್ಮಕೃಚ್ಛ್ರವುತನುವಿನಾಶೂಲಿ ॥
ವರಭಗಂದರ ಪಾಂಡುಕುಷ್ಟವು । ಧರೆಯೊಳನ್ನಿರುತಿರುವರೋಗಗ ।
ಳರರೆ ಪೋಪವು ಗುರುಫಕೀರನಪಾದಕರುಣದಲಿ ॥ ೫೯ ॥
ಸಕಲತೀರ್ಥಸ್ನಾನಸತ್ಫಲ । ಸಕಲದಾನವಿತಾನಸತ್ಫಲ ।
ಸಕಲಯಜ್ಞಪ್ರಾಪ್ತಸತ್ಫಲ ನಿಜತಪಃಫಲವು ॥
ಸಕಳಜಗದಧಿನಾಥನೆನಿಸುವ । ಪ್ರಕಟಗುರುವಿನಪಾದದೆಡೆಯಲಿ ।
ಭಕುತಿಗೈದಾಫಲಕದೇಂ ಸರಿಯಲ್ಲ ಲೋಕದಲಿ ॥ ೬೦ ॥
ಚರಿಸಿಜಗದೊಳಗೆಲ್ಲ ಭಕ್ತಿಯ । ಪರಿಯಪುಟ್ಟಿಸಿ ದುರಿತವನು ಪರಿ ।
ಹರಿಸಿಪಾಪಾಡುಗಳ ತೋರಿಯೆ ಮೆಟ್ಟನಿಂದಕರ ॥

ಅರರೆ ಶಿವನಿಂದಧಿಕರ್ಯೆಶಿವ । ಶರಣರೆಂಬುವ ಬಿರುದುಹೊಗಳಿಸು ।
ತಿರುವ ಲೀಲಾಮೂರ್ತಿಯೇ ಸದ್ಗುರುವು ಪರಶಿವನು ॥ ೬೧ ॥
ಬಹಳವಾತುಗಳಾಡಿನಂಬಿಸಿ । ಬಹಳ ಧನವನು ಸೆಳೆದುಕೊಂಡುರೆ ।
ಬಹಳಜನರಿಗೆ ವೋಸವಾಳ್ಪರು ವೇಷಧಾರಿಗಳು ॥
ಕುಹಕನೇನವನಲ್ಲಸದ್ಗುರು । ಬಹಳಕರುಣಾಶಾಲಿಯಾತನು ।
ಮಹಿಗೆಮಂಗಳಮೂರ್ತಿಭಕ್ತರನೆತ್ತಿಸಲಹುವನು ॥ ೬೨ ॥
ಕರಣಚಯದಾಬಲಿಗೆಬೀಳದೆ । ಪರರವಾತಿಗೆ ಸೇರದೊಪ್ಪದೆ ।
ಸರಸವಿರಸಗಳಾಟದಲಿ ಹೋಗದಲೆ ಲೋಕದಲಿ ॥
ದುರಿತಕರ್ಮಿಯುನಾನು ನೀನು । ದ್ಧರಿಸುನನಗೆಂತೆಂದು ಶ್ರೀ ಗುರು ।
ಚರಣಸೇವೆಯೊಳಾವನಲಿವನೊಧನ್ಯನವಶಿಷ್ಯ ॥ ೬೩ ॥
ಕೆಡಕರೊಂದಿಗೆ ಹೋಗದಿರುವನು । ಸೆಡವುಸಿಟ್ಟನುಹಿಡಿಯದಿರುವನು ।
ಬಡವರಿಗೆ ಬಳಲಿಸದಲಿರುವನು ಪರಮಶಿಷ್ಯನವ ॥
ನಡಿಸದಿರುವನು ತನ್ನ ಬಲುಮೆಯ । ನೊಡೆಯನಂಜಿಕೆಬಿಡದಲಿರುವನು ।
ಪೊಡವಿಗಿಂತಿಪ್ಪವರು ಬಗೆದಡೆ ಬಹಳ ದುರ್ಮಿಲರು ॥ ೬೪ ॥
ಮನದ ಹವಣಿಕೆ ಸಾಕುಸಾಕೀ । ಜನದಸಂಗತಿಸಾಕುಸಾಕೀ ।
ಜನನಮರಣದ ಬಾಧೆಸಾಕೈಸಾಕುಸಾಕೆನುತಾ ॥
ಮನಸಿನಿಚ್ಛೆಗೆ ಹರಿಯದಲೆತಾ । ಜನರ ಹವ್ಯಾಸಕ್ಕೆಬೀಳದೆ ।
ಚಿನುಮಯಾತ್ಮನ ನಂಬಿಸೇವಿಸುವವನೆಮರಿದೇವ ॥ ೬೫ ॥
ಭಿನ್ನಭೇದಗಳೇನುಮಾಡದ । ಉನ್ನತಾಶೆಯೊಳೇನು ಸುಳಿಯದೆ ।
ಕುನ್ನಿಮನುಜರ ಮಾತುಹಿಡಿಯದೆ ಸಕಲವಿಷಯದಲಿ ॥
ಬನ್ನಬಟ್ಟರು ಮಿಸುಕದಳ್ಕದೆ । ಚನ್ನಸದ್ಗುರು ವೀರನೇಗತಿ ।
ಯೆನ್ನುತಲಿ ಮೈಮರೆವನವ ಸಂಸಾರಶಿವಯೋಗಿ ॥ ೬೬ ॥
ನಿನ್ನಲೀಲಾಮಾತ್ರದಲಿ ಜಗ । ನಿನ್ನಮಹಿಮಾತಿಶಯದಲಿ ಸಿರಿ ।
ನಿನ್ನ ಸೂತ್ರಾಧಾರದಲಿ ಬಹುತರದ ರೂಪಗಳು ॥
ನಿನ್ನೊಳೆಲ್ಲವು ತೋರುತಡಗುವ । ವಿನ್ನುಭ್ರಾಂತಿಯಿದೇಕೆನನಗೆಂ।
ದೆನ್ನುತಲಿಸಂಸಾರದಲಿ ಸುಖಿಸುವನು ಶಿವಯೋಗಿ ॥ ೬೭ ॥

ಕರುಣವಿಡಿದಿರಬೇಕುಗುರುಪದ । ಹರುಷಗೊಂಡಿರಬೇಕುನಿತ್ಯದೊ ।
ಳುರೆ ಪ್ರಸಾದದಿಭೇದವಮಾಡದೆ ನೀಡುತಿರಬೇಕು ॥
ಹೊರಗೊಳಗುವೊಂದಾಗಿನಿರ್ಮಲ । ಚರಿತರಾಗಿರಬೇಕುಸೇವಕ ।
ರಿರುವರೀಪರಿಯಿದ್ದವರೆ ಬಹುಧನ್ಯರವನಿಯಲಿ ॥ ೬೮ ॥
ನುಡಿಯತಪ್ಪನುಹಿಡಿಯಬಾರದು । ನುಡಿಯಬಾರದು ಕೆಟ್ಟನುಡಿಯನು ।
ನಡಿಸಬಾರದು ಸೆಡವುಸಿಟ್ಟನು ಲೋಕದಂದದಲಿ ॥
ಕೆಡುಕುಯಾರಿಗುಬಯಸಬಾರದು । ಸಡಗರಕೆ ಮರುಳಾಗಬಾರದು ।
ಮೃಡನಗುರುವನು ಬಿಡಲಿಬಾರದು ಭಕ್ತರೆಂಬವರು ॥ ೬೯ ॥
ಚಾಡಿಯೆಂಬದ ಚಲ್ಲಿಬಿಡುವದು । ಖೋಡಿತನವನು ಕಳೆದುಬಿಡುವದು ।
ಮೂಢತನವನು ಮಾರಿಬಿಡುವದು ಲೋಕದೊಳಗಿನ್ನು ॥
ದೂಡಿಬಿಡುವದು ದುರಿತವನು ಹೋ । ಗಾಡಿಬಿಡುವದು ಕಾಕುಗುಣವನು ।
ಪಾಡುಪಂಥವಹರಿದು ಬಿಡುವದು ಸೇವೆಮಾಡುವರು ॥ ೭೦ ॥
ಬಂದೆಗುರುಪಾದದಲಿ ಸೇವೆಯೊ । ಳೊಂಧಿಕೊಂಡಿರುತಿರುವಕಿಂಕರ ।
ರೊಂದುಗೂಡಿಯೆನಡೆದುಕೊಂಬುದು ತಮ್ಮತಮ್ಮೊಳಗೆ ॥
ಬಂದತೊಂಡರೆತೊಡರುಗಳ ಬಲಿ । ಗೆಂದಿಗುಂ ಸಿಲ್ಕದಲೆ ಗುರುವಿನ ।
ಮುಂದೆ ದೂರದೆ ತಿದ್ದಿಕೊಂಬುದುಸದ್ವಿಚಾರದಲಿ ॥ ೭೧ ॥
ಗುರುಮಹತ್ವದ ಲೀಲೆಯಿಂದಲೆ । ಭರಿತವೈಭವದೇಳ್ಗೆಯಲಿ ಸುಖ ।
ವೆರಡುತನುಸಿರಿಯೋಜೆಯಲಿಮಿಗೆಮೆರೆವ ಸೇವಕರು ॥
ಗುರುವಿನಪ್ಪಣೆಯಂತೆಸರ್ವವ । ನರಿತುನಡಿಸಲಿಬೇಕು ಬಿಡದೆ ।
ಚ್ಚರಿಕೆಯಲ್ಲಿರಬೇಕುಪಗಲಿರುಳವರು ತಮ್ಮೊಳಗೆ ॥ ೭೨ ॥
ಕೆಲರುಚಾಡಿಯಪೇಳ್ವರೈಸಲೆ ।ಕೆಲರು ಹುಸಿಯನು ನುಡಿವರೈಮಿಗೆ ।
ಕೆಲರುಪೇಳ್ವರು ಹೆಚ್ಚುಗುಣಿಸಿಯೆಹೊಟ್ಟೆಕಿಚ್ಚಿನಲಿ ॥
ಕೆಲರುಕೇಡನು ಬಗೆವರಕ್ಕಟ । ಕೆಲರುಪಿಡಿವರು ಹ್ಯಾವಪಂಥವ ।
ನಿಳೆಯೊಳೇನಿದು ಸಲ್ಲದೈಗುರುಸೇವೆಮಾಳ್ಪರಿಗೆ ॥ ೭೩ ॥
ಅರುವಿನಾಗುರುಪಾದಸೇವೆಯೊ । ಳಿರುವರಾಪಥವಲ್ಲದುರ್ಜನ ।
ದುರಿತಪಥವಿದುಬಿಡುವದೈಧಿಕ್ಕರಿಸಿ ದುರ್ಗುಣವ ॥

ನೆರೆದಸಂತೆಯತೆರದಬಾಳ್ವೆಯ । ಪರಿಯುಮಾಯಾಬಲಿಗೆಬೀಳದ ।
ಲರುವಿನಲಿನಡಕೊಂಬುವದೆ ಸದ್ಗತಿಗೆ ಸಾಧನವು ॥ ೭೪ ॥
ಬುದ್ಧಿವಂತರಬದುಕುಪುಣ್ಯದ । ಮುದ್ದೆ ಸೌಖ್ಯದಕಣಿಯುತಾನದು ।
ಬುದ್ಧಿವಂತರು ಭಕ್ತಿಪಥದಲಿ ಮುಕ್ತಿಹೊಂದುವರು ॥
ಬುದ್ಧಿಹೀನರ ಬದುಕುಪಾಪದ । ಮುದ್ದೆ ದುಃಖದಠಾವುತಾನದು ।
ಬುದ್ಧಿಹೀನರು ಭ್ರಾಂತಿಯಿಂದಲೆನರಕಹೊಂದುವರು ॥ ೭೫ ॥
ತಂದೆಸಾಂಬನು ತಾಯಿಪಾರ್ವತಿ । ಯೆಂದು ತಿಳಿದೇ ಲೋಕದಲಿ ತಾವ್ ।
ತಂದೆತಾಯ್ಗಳ ಸೇವೆಮಾಳ್ಪುದು ಪುತ್ರಧರ್ಮವಿದು ।
ಇಂದುಧರನಾಲೀಲೆಯೆಂದೇ । ಬಂದಕಷ್ಟಂಗಳಿಗೆ ಹೆದರದ ।
ಲಂದದಲಿಬಾಳ್ವೆಯನು ಮಾಳ್ಪುದು ಲೋಕಧರ್ಮವಿದು ॥ ೭೬ ॥
ಅರಿಯದವರುರೆ ಕೇಳಿಕೊಳ್ಳುವ । ದರಿತವರುಮಿಗೆತಿಳಿಸಿಪೇಳ್ವುದು ।
ಶರಣರಿಟ್ಟಹವಾಕ್ಯದಂತೆಯೆ ನಡೆದುಕೊಳ್ಳುವದು ॥
ಹಿರಿಯರಿಗೆ ಸನ್ಮಾನಕೊಡುವದು । ಪರಮಧರ್ಮವುಲೋಕದೊಳಗೀ ।
ತರವನರಿದಾಚರಿಸದವರೇಂ ನರರೆವಾನರರು ॥ ೭೭ ॥
ಎಲ್ಲ ಶಾಸ್ತ್ರಗಳೇನುಹೇಳುವ । ವೆಲ್ಲಶ್ರುತಿಸ್ಮೃತಿಯೇನು ತಿಳಿಸುವ ।
ವೆಲ್ಲಸಿಂಗಾರಾದಿರಸಗಳವೇನುಕೊಟ್ಟಪವೊ ॥
ಎಲ್ಲ ಜಾಣ್ಮೆಗಳೇನುಮಾಡುವ । ವಿಲ್ಲದಿರೆನಿಜಭಕ್ತಿಭಾವವ ।
ದೆಲ್ಲನಿಷ್ಫಲಚತುರತೆಯಿನೇಂ ಮುಕ್ತಿದೊರೆಯುವದೆ ॥ ೭೮ ॥
ಏನು ಪಠಿಸಿದರೇನು ತನ್ನೊಳ । ಗೇನುತೋರಿದರೇನುಲೋಕದೊ ।
ಳೇನು ನಡಿಸಿದರೇನುಸದ್ಗತಿಗಿಲ್ಲಸಾಧನವು ॥
ಏನುಮಾಡಿದರೇನುಫಲವದು । ಸ್ವಾನುಭವದಾನಂದಶಿವಸುಖ ।
ವೇನುದೊರಕದು ಪರಮಗುರುಪಾದವನು ಹಿಡಿಯದಲೆ ॥ ೭೯ ॥
ಧರಣಿಗುಪಕೃತಿ ಗೆಯ್ಯಲೆಂದಾ । ಧರಣಿಯಲಿ ಕಲ್ಯಾಣಮುನಿವರು ।
ಗುರುತಿಗೇ ಗಂಟಕ್ಕಿ ಶಿವವಾಕ್ಯಗಳನಿಟ್ಟಹರು ॥
ಅರಿದರಿದು ನಿಜಧರ್ಮದಂತಾ । ಚರಿಸದಲೆ ದುಷ್ಕರ್ಮದಲಿಮನ ।
ಹರಿದುಹಲವರು ಕೆಟ್ಟುಹೋಗುವರಯ್ಯೊ ಯಮಪುರಕೆ ॥ ೮೦ ॥

ಕಿರಿಯರೆಲ್ಲರು ಕೇಳಿಕೊಳ್ಳಿರಿ । ಹಿರಿಯರೆಲ್ಲರು ನಡೆದುಪಡೆಯಿರಿ ।
ಸಿರಿಗರೆಲ್ಲರು ತಿಳಿದುನಡೆಯಿರಿ ಗುರುಪುರಾಣದಲಿ ॥
ಅರಸರೆಲ್ಲರು ಲಕ್ಷ್ಯವಿರಿಸಿರಿ । ಧರೆಗೆ ಕ್ಷಣಭಂಗುರವುತನುಸಿರಿ ।
ಗುರುಚರಣದಲಿ ನಂಬಿಸೇವಿಸೆಜನುಮಸಾರ್ಥಕವು ॥ ೪೧ ॥
ಹರಿಹರರ್ಕಳು ತಪ್ಪಿಸಿದರುಂ । ಗುರುವುತಪ್ಪಿಸಿಕೊಂಬನಲ್ಲವು ।
ಹರನು ಮುನಿದರು ರಕ್ಷಿಪನುಸದ್ಗುರುವು ದೊಡ್ಡವನು ॥
ಗುರುವುಮುನಿದರೆ ಕಾಯಲರಿಯನು । ಹರನುಜಗದೊಳಗೆಂದುತಿಳಿದೇ ।
ಪರಮಭಕ್ತರುಬಿಡದಲಿರುವರು ಗುರುವಿನಂಘ್ರಿಯನು ॥ ೪೨ ॥
ನಡಿಸಿಕೊಡುವನು ಭಕ್ತಿಯೆಡೆಗಡಿ । ಗಡಿಗೆನಿಲ್ಲುವನೆಲ್ಲವೂತಿಗೆ ।
ಪೊಡವಿಯಲಿ ಪ್ರತ್ಯಕ್ಷನಾಗುತೆ ತೋರುತಡಗುವನು ॥
ಗುರುದಿಗಂಬರದತ್ತಕರ್ತನು ಹಿಡಿವನಲ್ಲವುಹಿಡಿದಬಳಿಕೇಂ ।
ಬಿಡುವನಲ್ಲವು ತನ್ನಭಕ್ತರನೆತ್ತಿಸಲಹುವನು ॥ ೪೩ ॥
ಇಂದಿಗಿವನೇ ನಮ್ಮ ಶ್ರೀ ಗುರು । ವೆಂದು ಬಣ್ಣಿಸುತವಗೆ ಬಗೆಬಗೆ ।
ಯಿಂದೆಸೇವೆಯ ಮಾಡುತಿರುವರು ನಾಳಿಗೇನಿಲ್ಲ॥
ಇಂದಿಗಿವರೇಭಕ್ತರೆನುತಲಿ । ಮಂದಿಯಲಿ ಬಣ್ಣಿಸುತೆತನ್ನಾ ।
ನಂದವನು ತೋರುವರು ಗುರುಗಳು ನಾಳಿಗೇನಿಲ್ಲ ॥ ೪೪ ॥
ಮಂದಮತಿಮಾನವರು ಗಡ ನಿಜ । ವೊಂದುಹಾದಿಯಹಿಡಿವರಲ್ಲಿವ ।
ರೊಂದುಕಡೆ ವಿಶ್ವಾಸದಲಿ ನಡಕೊಳ್ಳುವವರಲ್ಲ ॥
ಹಿಂದಿನಾತಮೊಡೆಯರಂತೆಯೆ । ಮುಂದೆನಡೆಯುವರಲ್ಲಮನಹರಿ ।
ದಂದದಲಿಹಾರಾಡಿ ಮೆರೆಯುವರಿವರೆವಾನರರು ॥ ೪೫ ॥
ಸತ್ಯಸಾಧುಗಳಿಲ್ಲಜಗದಲಿ । ಸತ್ಯಯೋಗಿಗಳಿಲ್ಲ ಭುವನದಿ ।
ಸತ್ಯಸಂತರುಮಿಲ್ಲಭಕ್ತರುಮಿಲ್ಲ ನಾಡಿನಲಿ ॥
ಸತ್ಯಶರಣರುಮಿಲ್ಲಮಿಳೆಯೊಳ । ಸತ್ಯರಾಗಿಹರೆಲ್ಲರುಂ ಗಡ ।
ಮೃತ್ಯುಹರ ಶಿವಶರಣರೆಲ್ಲರು ಗುಪ್ತಮಿಹರರರೆ ॥ ೪೬ ॥
ಬಡತನಕೆ ಮನಕುಗ್ಗದಿರುವರು । ಸಡಗರಕೆಬಲುಹಿಗ್ಗದಿರುವರು ।
ನಡುವಿನೆಡರಿಗೆಹೆದರದಿರುವರು ಭಕ್ತರೆಂಬವರು ॥

ಮಡದಿಮಕ್ಕಳುಸಿರಿಯಸಂಪದ। ದೊಡವೆಯಲಿಭ್ರಮೆಗೊಳ್ಳದಿರುವರು।
ಪೊಡವಿಯೊಳಗಪರೂಪರ್ಶೈನಿಜಭಕ್ತರೆಂಬವರು ॥ ೪೭ ॥
ಶರಧಿಮೇರೆಯನೊತ್ತಿಜಗದಲಿ। ಹರಿದೊಡಂ ದಿಗ್ದಂತಿಗಳುಮಿಗೆ।
ಧರೆಯನೊಮ್ಮೆಗೆ ಚಲ್ಲಿದೊಡವಾಪರ್ವತಾಳಿಗಳು ॥
ಧರಣಿಯೊಳಗೋಡಾಡಿದೊಡವಾ। ಪರಮಭಾಸ್ಕರನಿಳೆಗೆಬಿದ್ದೊಡ।
ಮರರೆಭಕ್ತರಬಿಡುವದಿಲ್ಲವು ಕರ್ತಗುರುವೌನ ॥ ೪೮ ॥
ವರಶಿರಃಪುರಮೂಲಪೀಠವು। ಪರಮಕರ್ತನಮಹಿಮೆಯೆಡೆಯದು।
ಗುರುಸದರು ನಗಾರಿಖಾನಿಯುಸ್ವಾರಿಮೊಚ್ಚೇಲು ॥
ಅರರೆಮಹಿಮಾಕರವುಮಂಗಲ। ಕರವುತಾವೆನಿಸಿಕರ್ಜವಾಗುರು।
ವರನಲೀಲಾಮಾತ್ರದಲಿ ತಿಳುಕೊಳ್ಳಿರೆಲ್ಲವನು ॥ ೪೯ ॥
ಒಂದೆಮನದಲಿಮಠಕೆಪೋಗುವ। ದೊಂದೆಮನದಲಿ ವಾಚ್ಛೆಗೆರಗುವ।
ದೊಂದೆಮನದಲಿ ಸ್ವಾಮಿಯಂಘ್ರಿಯ ಸೇವೆಮಾಡುವದು ॥
ಒಂದೆಮನದಲಿ ಬೇಡಿಕೊಳ್ಳುವ। ದೊಂದೆಮನವತಿಘನವದೆರಡಾ।
ದಂಡುಹಾನಿಯು ತಪ್ಪದಿಹಪರವೆರಡುಲೋಕದಲಿ ॥ ೫೦ ॥
ನೆರಳುನಿಜವೆಂದೆಣಿಸಿನಾಯ್ಬಾ। ಯ್ದ್ದರದುಮಾಂಸವಕಳೆದುಕೊಂಡಾ।
ತೆರದಿಕೆಲವರುಕೆಡುವರಕ್ಕಟಬಿದ್ದು ಭ್ರಾಂತಿಯಲಿ ॥
ನರಿಯುದ್ರಾಕ್ಷೆಯಗೊನೆಗೆ ಮಿಗೆ ಧಿ। ಕ್ಕರಿಸಿದಾಪರಿಯಂತೆಪಲವರು।
ಜರಿವರಕಟಾತವ್ಮೊಳೀನುಂತ್ರಾಣವಿಲ್ಲದಲೆ ॥ ೫೧ ॥
ನೀವುಕೇಳಿರಿಗುರುಪುರಾಣವ। ನೀವುತಿಳಿಯಿರಿಗುರುಮಹತ್ವವ।
ನೀವುಹಿಡಿಯಿರಿ ಭಕ್ತಿಮಾರ್ಗವನೆಲ್ಲಕುಲದವರು ॥
ನೀವುನಂಬಿರಿಗುರುವನಗಲದೆ। ನೀವುಪಡೆಯಿರಿ ಕೃಪೆಯನಿಹದಲಿ।
ನೀವುಸುಖಿಸಿರಿಯೆಂದು ನಾಂಸೆರಗೊಡ್ಡಿಪ್ರಾರ್ಥಿಸುವೆ ॥ ೫೨ ॥
ವರಪುರಾತನರಂಘ್ರಿಗಾಶಿವ। ಶರಣಕಾರಣಪುರುಷಪದಕುರು।
ತರದಶಿವಯೋಗೀಶರಾಪಾದಕ್ಕೆ ಭಕ್ತಿಯಲಿ ॥
ಪರಮದೇವಿಯ ಭಕ್ತರಡಿಗನು। ಸರಿಸಿನಿತ್ಯನವೋನವೋಯೆನು।
ತೆರಗಿ ಸೇವಿಪುದಿತ್ತುರಕ್ಷಿಸುಗುರುನಿರಾಕಾರ ॥ ೫೩ ॥

ಬೇಡಭಕ್ತಿಯುಮಾರ್ಗವೆಂಬಗೆ । ಬೇಡಸುಜನರಸಂಗವೆಂಬಗೆ ।
ಬೇಡ ಶರಣರಪಾದದರುಶನವೆಂಬಮೂರ್ಖನಿಗೆ ॥
ಖೋಡಿಸಾಧುವಿನಾಟವೆಂಬಗೆ । ಪಾಡುಪಂಥವಹಿಡಿದುನಡೆವಗೆ ।
ಮೂಢಜನರಿಗೆ ಹೇಳಬಾರದು ಗುರುಪುರಾಣವನು ॥ ೯೪ ॥
ಗುರುವಿನೀಗ್ರಂಥವನುಬರೆದಡೆ । ಗುರುಪುರಾಣವಬರಿಸಿದರೆಪರಿ ।
ಹರಣವಾಗುತ್ತಿಹವು ಜನ್ಮದಕಂಟಕಾದಿಗಳು ॥
ಗುರುಪುರಾಣದಿಭಕ್ತಿಯಿಟ್ಟರೆ । ಹರಿದುಹೋಗುವದವರ ಪಾಪವು ।
ಗುರುಪದಾಂಬುಜಭಕ್ತನಾದೊಡೆ ಧನ್ಯನವನಿಳೆಗೆ ॥ ೯೫ ॥
ಧರೆಯೊಳತಿ ಲೀಲೆಯಲಿಬೆಳಗುವ । ಗುರುವಿಗಗಲದಶಕ್ತಿದೇವಿಯೆ ।
ಶರಣರೆಲ್ಲರತಾಯಿಭಕ್ತರ ತಾಯಿಮಾದೇವಿ ॥
ದುಂತಸಂಹರೆಯೆನಿಸಿಭುವನಕೆ । ಪರಮಮಂಗಳಮೂರ್ತಿಯೆನಿಸುವೆ ।
ಕರುಣದಿಂ ಕೊಡುಸಕಲಭಜಕರಿಗಿಷ್ಟಸಂಪದವ ॥ ೯೬ ॥
ಆದಿಮೂರ್ತಿಗನಾದಿ ಸಿದ್ಧನಿ । ಗಾದಿರಹಿತನಿಗಂತ್ಯರಹಿತಗೆ ।
ವೇದನಿಕರಕೆ ಸಿಲುಕದಾತನಿಗಪ್ರಮೇಯಂಗೆ ॥
ಮೇದಿನಿಯೊಳವತಾರಮಾಡಿದ । ನಾದಿಪರಶಿವಶಂಭುಕರ್ತನಿ ।
ಗೀದಯಾಂಬುಧಿಗೆತ್ತಿಬೆಳಗಿರಿ ಮಂಗಳಾರತಿಯ ॥ ೯೭ ॥
ಪರಮಶಂಭುಪರಾಕುಮಹಿಮಾ । ಪುರುಷಸಾಂಬಪರಾಕು ಯೋಗೀ ।
ಶ್ವರ ಮಹಾತ್ಮಪರಾಕುಕರ್ತಪರಾಕುನಿಜಲಿಂಗ ॥
ಉರಗ ಭೂಷಪರಾಕುಸನ್ನುತ । ಸುರಕುಲಾರ್ಯಪರಾಕು ಶ್ರೀ ಗುರು ।
ವರಫಕೀರಪರಾಕು ದತ್ತಪರಾಕು ಪ್ರಭುಲಿಂಗ ॥ ೯೮ ॥
ಗುರುಮಹತ್ವದ ಸಾರವಿಂತಿದು । ಗುರುಮಹತ್ವಮನಂತಮಿಪ್ಪುದು ।
ಗುರುಮಹತ್ವವನರಿದು ಪೇಳುವರಾರು ಲೋಕದಲಿ ॥
ಗುರುಫಕೀರೇಶ್ವರನುಗಂಗಾ । ಧರನಮುಖದಿಂ ಪೇಳಿಸಿದನೀ ।
ತೆರದಿಮುಗಿದುದು ಸಂಧಿಪೀಠಿಕೆಯೆನಿಸುತಂದದಲಿ ॥ ೯೯ ॥

ಇತಿ ಶ್ರೀ ಶಿರಃಪುರ ಶ್ರೀಭಗವಾನ ವಿಭುವಾತ್ಮೀಜು ಗಂಗನಿಂ ।
ಪೇಳಿಸಿದ ಪೌರಾಣದೊಳ್ ಪೀಠಿಕಾ ಸಂಧಿ ಸಮಾಪ್ತಮಿಂತು
೯೯ ಪದ್ಯಂಗಳಿಗೆ ಮಂಗಲಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ॥

## ೨ನೇ ಸಂಧಿ.

### ಕರ್ತರು ಅವತರಿಸಿದ್ದು.

ಸಂಧಿಸೂಚನೆ—

ಧರೆಗೆ ಶಂಭುಜ್ಯೋತಿತಾನವ । ತರಿಸಿಬಂದುದು ಸಕಲಲೌಕಿಕ ।
ರರಿತುಕೊಳ್ಳಿರಿ ನೀವು ಗುರುಕೃಪೆವಡೆದು ಸುಖಿಯಿಸಿರಿ ॥ ಪಲ್ಲ ॥
ಅರರೆ ಶ್ರೀಗುರುವೆಂಬಶಬ್ದವು । ಪಿರಿದು ಬ್ರಹ್ಮಾಂಡದಲಿ ಶ್ರೇಷ್ಠವು ।
ಗುರುಸಮಾನ ಸು ಶಬ್ದವಿಲ್ಲವು ತಿಳಿದುನೋಡಿದರೆ ॥
ಗುರುವಖಂಡನು ಗುರುವಗೋಚರ । ಗುರುವುನಿರಶನನಾದೊಡಂ ತಾಂ ।
ಧರೆಗೆ ಸಗುಣಾಕಾರದಲಿ ತೋರುವನು ನರರಂತೆ ॥ ೧ ॥
ನಿಗಮನಿಕರಕೆ ನಿಲುಕದಾತನು । ಸಗುಣನಿರ್ಗುಣ ಚಿನ್ಮಯಾತ್ಮನು ।
ಜಗದಮಾಯಾಸತಿಯಸೊಬಗಿಗೆ ಸೋಂಕದವನಾತಾ ॥
ಸೊಗಸುಗಂಧದ ಮೂರ್ತಿಯಾತನು । ಸಗುಣಶರಣರಯೋಗಿಗಳ ಸಾ ।
ಧುಗಳ ಹೃದಯಾಂಭೋಜಹಂಸನು ಪರಮಗುರುರಾಯಾ ॥ ೨ ॥
ಹರಿಹರ ಬ್ರಹ್ಮಮರೇಂದ್ರಾ । ದ್ಯರು ಗುರುವಿನಂಥ್ಯಾನಿಪರು ಶ್ರೀ ।
ಗುರುಕಣಾ ನರನಲ್ಲಪರಶಿವವಿಶ್ವಮಯರೂಪ ॥
ಧರೆಯಭಕ್ತರ ಸಲಹಲೆಂದವ । ತರಿಸುವನು ಜಗದಖಿಳದೇವರ ।
ಗುರುವುನಿಜವಿದು ಹಿಂದೆಮುಂದಿದನರಿತುಕೊಳ್ಳುವದು ॥ ೩ ॥
ಜಗದಕರ್ಮಾತೀತಶೀಲನು । ಸಗುಣನಿರ್ಗುಣನಪ್ಪನಾಗುರು ।
ಸಗುಣರೂಪವನಾಂತು ಬರುವನು ಭಕ್ತಿನೋಡಲಿಕೆ ॥
ಜಗದೊಳಡಗಿಯೆನಿಂತುತೋರ್ವನು । ಬಗೆಯದಾತನಗುರುತುಹಿಡಿಯದೆ ।
ಜಗದಕುಲಛಲವುಳ್ಳಮನುಜರು ಜರಿದುಕೆಟ್ಟಪರು ॥ ೪ ॥
ಗುರುಫಕೀರೇಶ್ವರನಮೂಲವ । ನೊರೆಯಲಸದಳವರಿದುಜಗದಲಿ ।
ನರರು ಪೊಗಳುವರವನ ವೃತ್ತಾಂತವನು ಬಹುವಿಧದಿ ॥
ಗುರುವಿಜಾಪುರದಲ್ಲಿತಾನವ । ತರಿಸಿಬಂದುದು ಸತ್ಯಮತವೆಂ ।
ದರಿಯಿರೈ ಮನದಂದು ಕೇಳಿರಿ ಕರ್ತನುರುಕಥೆಯಾ ॥ ೫ ॥

ಆ ವಿಜಾಪುರದಲ್ಲಿಗಡ ಶ್ರೀ । ಶೈವಮತದವಳೋರ್ವಳಂಗನೆ ।
ಯೌವನದಕಾಲದಲಿ ಸಂತತಿಯಿಲ್ಲವೆನಿಸಿರಲು ॥
ದೈವವನುಪಳಿಪಳಿದು ಗುರುವಿಗೆ । ಭಾವದಲಿ ನೆನೆನೆನೆದು ಬೆಂದಿರೆ ।
ಜೀವನವು ಮಲ್ಮಲನೆಮರಗುವಳಾಕೆಪಗಲಿರಳು ॥ ೬ ॥
ಕುವರನಿಲ್ಲದರಿಂದತನ್ನಯ । ಭವವು ವ್ಯರ್ಥವುಭಾಗ್ಯವ್ಯರ್ಥವು ।
ಶಿವನಭಕ್ತಿವಿಹೀನಜನ್ಮವುವ್ಯರ್ಥಮಪ್ಪಂತೆ ॥
ಕುವರನೆಳೆವರೆಯದಲಿಪಡೆದಾ । ಕುವರನಂಬಿಗಿದಪ್ಪಿಮುದ್ದಿಸು ।
ತವನನಾಡಿಪಪುಣ್ಯಮೆನಗಿಲ್ಲೆಂದು ಚಿಂತಿಪಳು ॥ ೭ ॥
ಫಲವಕಾಣದ ಬಳ್ಳಿಯಂತೆಯೆ । ಫಲವಕಾಣದಬಾಳೆಯೆಂತೆಯೆ ।
ಫಲವಕಾಣದೆಬಂಜೆಯಾದೆನು ನಾನು ಲೋಕದಲಿ ॥
ತಿಳಿಯೆ ಲೌಕಿಕದಲ್ಲಿ ಕೀಳ್ನುಡಿ । ಗಳವುಮುಂದಣಗತಿಗೆಗಡ ತಾ ।
ಮುಳವುಬಿಡದಹುದೆಂದು ಚಿಂತಿಸುತಿಹಳುಮನದೊಳಗೆ ॥ ೮ ॥
ನೀರಜದ ಬೀಡೆನಿಸದಾಕಾ । ಸಾರವದು ಪೂರ್ಣೇಂದುವಿನಶೋ ।
ಭಾರಹಿತಮೆಂದಿನಿಪರಜನಿಯು ಲೋಕದೊಳಗಿನ್ನು ॥
ಚಾರುತರಯೌವನದೆತಾನಾ । ಸಾರಪುತ್ರನಪಡೆಯದೀಸಂ ।
ಸಾರವದು ಸೊಗಯಿಪುದೆಸೊಗಯಿಸದೆಂದು ಮರಗುವಳು ॥ ೯ ॥
ಅಂತಕನ ರೂಪಾದೆನೆನ್ನಯ । ಕಾಂತವಂಶಕೆ ಪ್ರಾಣಕಾಂತನ ।
ಸಂತತಿಯು ತನ್ನಲ್ಲಿಸಾಗದೆ ನಿಂತುದಕಟಕಟಾ ॥
ಭ್ರಾಂತಿಬಿಡುವೆನೆ ಮಗನಹಡಿಯದೆ । ಶಾಂತಿಗೊಂಬೆನೆವಿಷಯದಲಿಸಲೆ ।
ಕಂತುಹರನನಗೇಕೆಮರೆತಿಹನೆಂದುಕೊರಗುವಳು ॥ ೧೦ ॥
ಇಂತುಸುತರಿಲ್ಲೆಂದು ತನ್ನೊಳೆ । ಚಿಂತಿಸುವಸಮಯಕ್ಕೆ ತದ್ದುಣ ।
ವಂತಿಗಂದಿಗೆಮನದಿಸೂಚಿಸಿತೊಂದುಸಂಗತಿಯು ॥
ಅಂತುತತ್ಸಂಗತಿಗೆ ತಾನೇ । ಕಾಂತದೊಳಗೊರೆದೊರೆದುನೋಡಿದ ।
ಳಂತ್ಯದಲಿ ಪರಕಿಸುತೆನಿಶ್ಚಯಿಸಿದಳು ಮನದೊಳಗೆ ॥ ೧೧ ॥
ಇದುವೆದರ್ಗಾದಲ್ಲಿ ಪೆಣ್ಗಳು । ಪದೆದುಮಕ್ಕಳಬೇಡಿಪಡೆವರು ।
ಹದವುಹೌದೆಂದಾಕೆದರ್ಗಾದಲ್ಲಿ ಮನವಿರಿಸಿ ॥

ಸದನದಾರ್ಯರಿಗೇನುತಿಳಿಸದೆ । ಮುದದಿನೇಮಿತಸಮಯದಲಿನಡೆ ।
ದದಕೆಪ್ರಾರ್ಥನೆಗೈಯುತಿರುವಳು ಬಿಡದಲನುದಿನದಿ ॥ ೧೨ ॥
ಗುರುವಿನಲಿ ನಿಜನಿಷ್ಠೆಯಿಟ್ಟುರೆ । ಮೆರೆವದರ್ಗಾದಲ್ಲಿ ನಿತ್ಯದಿ ।
ಹರುಷದಲಿ ಸಲೆನಡೆದುಕೊಳ್ಳುತ್ತಿರಲು ಕೆಲವೆಡೆಗೆ ॥
ಗುರುನಿರಂಜನ ಮೂರ್ತಿನಿನ್ನಯ । ಚರಣವನುನಂಬಿರ್ಪಭಕ್ತರ ।
ಮೊರೆಯಕೇಳೆನ್ನೆಂದು ಪ್ರಾರ್ಥಿಸುತಿಹರು ಸಜ್ಜನರು ॥ ೧೩ ॥
ಗುರುವೆ ನಿಮ್ಮಡಿವರ್ಗರಾಗಿಹ । ಪರಮಭಕ್ತರನೆಲ್ಲ ಕಡೆಯಲಿ ।
ದುರುಳರತಿಬಲವಡೆದು ಬಾಧಿಸುತಿಹರು ಛಲವಿಡಿದು ॥
ದುರಿತಜನರನು ಹೊಡೆದು ಭಕ್ತರ । ಪೊರೆವೆನೆಂಬುವನಿನ್ನ ನಿಜವಹ ।
ಬಿರುದು ಮೆರೆವುದು ಬಿಡದೆ ಸಲಹೆನುತಿಹರು ಸಾಧುಗಳು ॥ ೧೪ ॥
ಈ ಧರಾತಳದಲ್ಲಿ ದುರ್ಜನ । ರೈದೆಪೆಚ್ಚಿಹರೆಂದು ಸಜ್ಜನ ।
ರಾದವರ ಪರಿಣಾಮವಿಲ್ಲೆಂದರಿದು ಯೋಗಿಗಳು ॥
ಕಾದುಕೊಳ್ಳೈಗುರುವೆ ನೀನು ಮ । ಹಾದಯಾಂಬುಧಿರಕ್ಷಿಸೈ ಮಹಿ ।
ಮೋದಯನೆ ನಿಜಲೀಲೆದೋರಿಸು ತೋರಿಸೆನುತಿಹರು ॥ ೧೫ ॥
ಅತ್ತಲಾ ಸದ್ಭಕ್ತಳಾಕೆಯು । ನಿತ್ಯದರ್ಗಾದೆಡೆಗೆ ತಪ್ಪದೆ ।
ಹೊತ್ತುಹೊತ್ತಿಗೆ ಹೋಗಿ ಹಲವಂದದಲಿ ನೆನೆನೆನೆದು ॥
ಅತ್ತುಮೊರೆಯಿಡುತಿಹಳು ತನ್ನಯ । ಹೊತ್ತಿನಲಿ ಹೋಗುವಳು ಮನೆಗಾ ।
ಸತ್ಯಭಕ್ತಳು ಗುರುವೆನೀಗತಿಯೆಂದು ವಂದಿಪಳು ॥ ೧೬ ॥
ಇದೆ ವರುಷದಲಿ ಭವನಶೋಭಾ । ಸ್ಪದನ ಪುತ್ರನಪಡೆದು ಮುಂದೆಯು ।
ಮುದರಫಲವನು ಕ್ರಮದೆ ಕಾಂಬುವಳಾದೊಡಾಂ ನಿನಗೆ ॥
ಮೊದಲು ಹುಟ್ಟಿದ ಮಗನನಿತ್ತಪೆ । ನಿದಕೆ ತಪ್ಪುವಳಲ್ಲ ತಾನೆಂ ।
ದದಕೆವಚನಂಗೊಡುತಲಾಕೆಯು ಬೇಡಿಕೊಳುತಿಹಳು ॥ ೧೭ ॥
ಭೂಮಿಯೊಳಗವತಾರಮಾಡಿದ । ನಾಮರೂಪಕ್ರಿಯೆಗೆ ಮೀರಿ ।
ರ್ದಾಮಹಾತ್ಮಕ ದತ್ತಬಾಜಾಮಿಾನದೀನೆನಿಸಿ ॥
ಆ ಮಹಾದರ್ಗಾದೊಳೆಸೆಯುತ । ಲಾಮನುಜರಲಿ ಗುಪ್ತಭಕ್ತ ।
ಪ್ರೇಮಿಯಿರುವನು ಲೀಲೆಯಾಡುತೆ ಗುರುತು ತೋರದಲೆ ॥ ೧೮ ॥

ಇವರು ಮಹಿಮರು ಬಹಳದೊಡ್ಡವ । ರಿವರು ಲೀಲಾಮೂರ್ತಿಗಳು ತಾ ।
ವಿವರು ಪರಶಿವರೂಪಿಗಳು ನಿಜವೆಂದು ದತ್ತನಿಗೆ ॥
ಭುವನದೊಳಗಿನ್ನಾವಕುಲದೊಳ । ಗಿವರಪೋಲ್ ನಾವ್‌ಕಾಣೆವೆನ್ನು ।
ತ್ತವಗೆ ಕೀರ್ತನೆಗೈಯುತಿರುವರು ಸುಜ್ಞರಾದವರು ॥ ೧೯ ॥
ಕೆಲರು ಭಕ್ತಿಯ ಮಾಡುತಿರುವರು । ಕೆಲರು ಸೇವೆಯಮಾಡುತಿರುವರು ।
ಕೆಲರು ಪೂಜೆಯ ಮಾಡುತಿರುವರು ನಂಬಿದತ್ತನಿಗೆ ॥
ಕೆಲರು ಸುಮ್ಮನೆಯಿರುತಲಿರುವರು । ಕೆಲರು ನಿಂದೆಯಮಾಡುತಿರುವರು ।
ಕೆಲರು ಧ್ಯಾನಿಸುತಿಹರು ಗುರುವಿಗೆ ಪೇಳಲೇನದನು ॥ ೨೦ ॥
ನಿರುತ ಸೇವೆಯ ಮಾಡಿಹೋಗು । ತ್ತಿರುವ ತರುಣಿಯ ಭಕ್ತಿಭಾವಕೆ ।
ಪರಮ ಸದ್ಗುರುದೇವದತ್ತನು ಮೆಚ್ಚಿಮನದಂದು ॥
ಕರೆದನೈ ದಿನವೊಂದರಲಿ ತಾ । ಹರಸುತೆರಡುತ್ತತ್ತಿ ಕೊಟ್ಟಂ ।
ತೊರೆದನಾಬಾಗಿರ್ಪಪುಣ್ಯಪತಿವ್ರತಾಂಗನೆಗೆ ॥ ೨೧ ॥
ನನಗೆ ನೀನೌತಾಯಿಜಗದೊಳು । ನಿನಗೆ ನಿನ್ನಿಷ್ಟಾರ್ಥದೊರೆವುದು ।
ನನಗೆ ನೀಕೊಡು ವಚನದಂದದಿ ನಿನ್ನ ಮೊದಲಿನದ ॥
ಮನಕೆ ಸಂಶಯಗೊಂಡು ಬಿಟ್ಟರೆ । ಚಿನುಮಯಾತ್ಮನು ಗುರುಫಕೀರನು ।
ತನಗೆ ಬರುವದ ಬಿಡುವನಲ್ಲವು ಕೇಳಿದೌಯೆಂದಾ ॥ ೨೨ ॥
ಅಪ್ಪ ತಮ್ಮಯ ಕೃಪೆಯು ನನಗಿಂ । ನಿಪ್ಪುದಾದರೆ ಸಾಕು ಪೆರತೇ ।
ನಿಪ್ಪುದೈಹಿಕದಲ್ಲಿ ಸಂತತಿಯೊದರೆ ಸಗಾಯ್ತು ॥
ತಪ್ಪಿ ನಡೆವವಳಲ್ಲ ತಾನೆಂ । ದೊಪ್ಪಿಕೊಂಡಾಗುರುವಿನಂಘ್ರಿಯೊ ।
ಳಪ್ಪ, ನೀಗತಿಯೆಂದು ವಿನಮಿತಳಾದಳಾವನಿತೆ ॥ ೨೩ ॥
ಘನದಿಗಂಬರದೇವದತ್ತನು । ನಿನಗೆ ಸಕಲವು ನಡಿಸಿಕೊಡುವನು ।
ಮನದಸಂಶಯಬಿಟ್ಟು ನೀನಿರು ನಿನ್ನ ಬಾಳ್ವೆಯಲಿ ॥
ಮನದ ಬಯಕೆಯ ನೀನು ಕಾಣುವೆ । ನನಗೆ ಮರೆಯಲಿಬೇಡಸೈಯೆಂ ।
ದೆನುತಲಪ್ಪಣೆಕೊಟ್ಟು ಕಳುಹಿದನಾಲತಾಂಗನೆಗೆ ॥ ೨೪ ॥
ಮನೆಗೆ ಬಂದಳು ತಡೆಯದಾಗಳೆ । ಮನೆಯ ಹಿರಿಯರಿಗೇನು ತಿಳಸದೆ ।
ಮನೆತನದ ಕೆಲಸದಲಿ ಕಾಲವ ಕಳೆವುತಂಗನೆಯು ॥

ತನುಜರನು ತಾಕಾಂಬೆನೆಂಬುವ । ಮನದ ಬಹಳಾನಂದಲಹರಿಯ ।
ಘನತೆಯಲಿ ಶ್ರೀ ಬಸವಪೂಜೆಯ ಮಾಡತೊಡಗಿದಳು ॥ ೨೫ ॥
ಗುರುವಿನುರುಧ್ಯಾನದಲಿ ತಾನಿರು । ತಿರಲು ಭಕ್ತಳು ಬಸುರುಕಂಡಳು ।
ಪರಮಕಳೆಗಳು ತೋರಹತ್ತಿದವೆಂದು ಶೋಭೆಯಲಿ ॥
ಅರಳ ಶಶಿನಿಭಮುಖವು ಕಾಂತಿಯು । ನಿರದೆ ತೋರಿತು ಭುಜಗಳೆಸೆದವು ।
ಕಿರುನಗೆಯು ಸೊಗಯಿಸಿತು ಶ್ರೀಗುರು ತಂತ್ರಮಾತ್ರದಲಿ ॥ ೨೬ ॥
ಬಲಿದಧ್ಯಾನದೊಳಾಕೆ ಕಾಲವ । ಕಳೆವುತಿರೆ ಬಯಕೆಗಳ ಸುಣ್ಣು ।
ತ್ತೆಳಸಿನವ ಮಾಸಗಳು ತುಂಬಿರಲೊಂದು ದಿವಸದಲಿ ॥
ಬಳಿಯೊಳಾರಾರಿಲ್ಲದಿರೆಮನೆ । ಯೊಳಗೆ ಮಲಗಿರೆ ಹಿರಿಯರೆಲ್ಲರು ।
ಚಲಿಸುತಿರೆನಿಶೆಯೊಕೆ ಹಡೆದಳು ಮಾಯಿಮರ್ದನನ ॥ ೨೭ ॥
ಅಳುತಿರಲ್ ಶಿಶುಹಿರಿಯರೆಲ್ಲರು । ತಿಳಿದು ನಿದ್ರೆಯನಾಗಳೆದ್ದಾ ।
ಲಲಿತಪುತ್ರನ ಕಂಡು ನಡಿಸಿದರೆಲ್ಲ ಕಾರ್ಯಗಳಾ ॥
ಕಳೆಗಳಣ್ಣನು ಪರಮಪುರುಷನು । ನಲಿವುತಾ ಶಿಶುರೂಪದಲಿತಾ ।
ನಿಳೆಯೊಳಭಿವೃದ್ಧಿಸುತೆ ನಡೆದನು ದಿವಸದಿವಸದಲಿ ॥ ೨೮ ॥
ಉರಗರೆಲ್ಲರು ಹರುಷಗೊಂಡರು । ಸುರರು ಸಂತಸಗೊಂಡು ಕುಣಿದರು ।
ಗರುಡಗಂಧರ್ವಾದಿಗಳು ನಲಿದಾಡಿದರು ಬಿಡದೆ ॥
ಶರಣರೆಲ್ಲರು ಮೋದಗೊಂಡರು । ಹರಿಹರಾದ್ಯರು ಕೂಡಿ ನಲಿದರು ।
ಭರದಿ ಭೂದೇವತೆಯು ನೆನೆದಳು ಗುರುಪದಾಂಬುಜವಾ ॥ ೨೯ ॥
ಸೂರನಂಜಿಕೆದೊರೆದು ಸೋಮನು । ಮೀರಿ ತೊಳಗಿದ ನರರೆನಭದೊಳು ।
ತಾರೆಗಳು ಥಳಥಳಿಸಿಹೊಳೆದವು ಬಹಳ ಸಂಭ್ರಮದಿ ॥
ಮೇರೆವರೆದುದು ದೇವಗಂಗೆಯು । ಊರಿದರುಧ್ವಜಗಳನುಗಡಸುರೆ ।
ರಾರಯಿದು ಬಹು ಹರುಷಬಟ್ಟರು ಮನುಮುನೀಶ್ವರರು ॥ ೩೦ ॥
ಅಮರೆಯರು ಪೂಮಳೆಯಕರೆದರು । ವಿಮಲತರವಾದತ್ತುಗಗನವ ।
ದಮಮಭಾಸ್ಕರನು ದಯಗೊಂಡನು ತೇಜದೇಳ್ಗೆಯಲಿ ॥
ಅಮಿತಮಹಿಮನು ತಾನು ಬ್ರಹ್ಮಾಂ । ಡಮಯಸದ್ಗುರುಸಗುಣಲೀಲಾ ।
ಸಮುದಯನು ತಾನಾಗಿ ಜಗಕವತಾರತಾಳ್ದೆಸೆದಾ ॥ ೩೧ ॥

ಕುವರನಾಟಕೆ ತಾಯಿಬಲುಹಿ । ಗ್ಗುವಳು ಲಾಲಿಸಿ ನೋಡುವಳು ತಾ ।
ನವಳು ಮುದ್ದಿಸುತಿಹಳು ನಿಜಸುತನೆಂಬ ಮೋಹದಲಿ ॥
ದಿವಸದಿವಸಕೆ ಬಾಲಶಶಿಹೆ । ಚ್ಚುವಪರಿಯೊಳಾ ಶ್ರೀ ಗುರುವುಕಾ ।
ಯವನು ಪಿಡಿದಭಿವೃದ್ಧಿಸಿದನಾನಿತ್ಯ ನಿರುಪಾಧಿ ॥ ೩೨ ॥
ಕಂದನಾಡುವಬಾಲಲೀಲೆಗೆ । ಕಂದನಾಡುವತೊದಲುಮಾತಿಗೆ ।
ಕಂದನಾಡಂಬರಕೆ ತಾಯ್ಪ್ರತಿನಿತ್ಯನಲಿಯುವಳು ॥
ಮಂದಗಮನೆಯು ತನ್ನಮಗನಿವ । ನೆಂದರಿದು ಗುರುದಯದಿಪುಟ್ಟಿಹ ।
ನೆಂದುತಿಳಿದಾಗುರುವಿನಂ ಮನದೊಳಗೆ ನೆನೆಯುವಳು ॥ ೩೩ ॥
ಮೊಳೆವಪಲ್ಗಳು ಬೀಳ್ವಜೊಲ್ಲದು । ಸುಳಿವದಟ್ಟಡಿತೊದಲುನುಡಿಗಳು ।
ಪೊಳೆವಕಣ್ಗಳು ನಗೆಯಮೊಗವದು ಮಿಸುಪಕದಪುಗಳು ॥
ಸುಳಿಯನಾಭಿಯು ಬಿಂಬದುಟಿಗಳು । ಸುಳಿಗುರುಳುನಳಿನಳಿಪತೋಳ್ಗಳು ।
ಕಲಿತುಸದ್ಗುರುಬಾಲಲೀಲಾನಂದನಾಗಿಹನು ॥ ೩೪ ॥
ಆ ಸಕಲಬೊಮ್ಹಾಂಡಜಾಲ ನಿ । ವಾಸಸರ್ವಾಂತರ್ಯನಿಜ ಚಿ ।
ದ್ಭೂಷಚಿನ್ಮಯುಘನಚಿದಂಬರಭಾಸ್ಕರೋಪಮನು ॥
ಆ ಸಕಲಗುಣಭರಿತಭಕ್ತಾ । ವಾಸಶರಣ್ಯೈಕಾಪ್ತಕರ್ತನು ।
ವಾಸಿಸಿದನಾಭವನದಲಿ ತಾ ಬಾಲರೂಪದಲಿ ॥ ೩೫ ॥
ಎಳೆವರೆಯಮೊದಗಿರಲುಕರ್ತನು । ಕೆಳೆತನದೊಳೋರಿಗೆಯಬಾಲಕ ।
ರೊಳಗೆತಾನಾಡುತ್ತ ದಿನಗಳೆವುತ್ತ ಲೋಕದಲಿ ॥
ಲಲಿತಸದ್ಗುರು ಮೂರ್ತಿಯೇನೀ । ನೆಳೆದುಕೋನಿನ್ನೆಡೆಗೆನನಗೆಂ ।
ದೊಳಗೆಚಿಂತನೆಗೈಯುತಿರುವನು ತನ್ನೊಳಗಲದಲೆ ॥ ೩೬ ॥
ಬಾಲಲೀಲಾನಂದಕರ್ತನು । ಬಾಲಕೇಳಿಗಳಾಡುತೀಪರಿ ।
ಕಾಲಗಳೆಯುತ್ತಿರಲು ಮೈಯೊಳಗಾದುದಸ್ವಸ್ಥ ॥
ಹೇಳಕೇಳದೆ ತಿನ್ನದುಣ್ಣದೆ । ಬಾಲಮಲಗಿರೆಹಡೆದಹಿರಿಯರು ।
ಬಾಲಕಂಗೇನಾಯ್ತೊ ಶಿವಶಿವಯೆಂದುಮರುಗಿದರು ॥ ೩೭ ॥
ಹಡೆದತಾಯ್ತಂದೆಗಳುಚಿಂತಿಸಿ । ಗಡಬಡಿಸಿಹೊತ್ತಿಗೆಯತೆಗೆಸಿದ ।
ರೊಡನೆಹರಿದೌಷಧವ ಕೊಡಿಸಿದರಾಪರಾತ್ಪರಗೆ ॥

ಅಡಬಡಿಸಿವಮಾಂತ್ರಿಕರಕಡೆಯಿಂ । ಬಿಡದುಪಾಯವಮಾಡಿಸಿದರವ ।
ರೊಡನೊಡನೆಮಗನಳಿಯೆ ಶೋಕಂಗೈದರೇವೇಳ್ವೆ ॥ ೩೮ ॥
ಹಿರಿಯರಿಗೆ ತಿಳುಹಿಸದೆನಾಗುರು । ವರಗೆವಚನವಕೊಟ್ಟುಮಕ್ಕಳ ।
ಸಿರಿಯಪಡೆದೆನುನನ್ನವಚನವ ಮುಟ್ಟದಿರಲವನು ॥
ಧರೆಯೊಳೀಪರಿವಮಾಡಿದನು ನೀ । ವರಿತುಕೊಳ್ಳಿರಿಯೆಂದುಕಾಂತನಿ ।
ಗೆರಗಿಬಿಡದೆಲ್ಲವನು ತಿಳಿಸಿದಳಾನಿತಂಬಿನಿಯು ॥ ೩೯ ॥
ಬಲ್ಲೆದಗಾಣದಲ್ಲಿಸದ್ಗುರು । ಬಲ್ಲಿದನು ನಡಕೊಳ್ಳುವದುಜನ ।
ವೆಲ್ಲಬಲ್ಲೆನು ಚಿಂತೆಮಾಡುವದೇಕೆನೀನಿನ್ನು ॥
ಗುಲ್ಲುಮಾಡದೆಕೊಂಡುನೀನಿದ । ನಲ್ಲಿದಗಾಣದಲ್ಲಿಮಲಗಿಸಿ ।
ನಿಲ್ಲದಲೆ ಬಾಯೆಂದುಕಳುಹಿದಪುರುಷನಾಸತಿಗೆ ॥ ೪೦ ॥
ಮರಗುತವಳದನೆತ್ತಿಕೊಂಡತಿ । ಭರದಿದಗಾಣದಲ್ಲಿ ಬಂದಳು ।
ಸರಿಸದಲಿಮಲಗಿಸಿಯೆ ಪ್ರಾರ್ಥನೆಗೈದಳಾತಾಯಿ ॥
ಗುರುವೆತಮಗೊಪ್ಪಿದನುಮಗನಿವ । ಮರವಿಮನುಜರ ತಪ್ಪಹಿಡಿಯದೆ ।
ಕರುಣದಿಂಸಲಹೆಂದು ಶಿರಬಾಗಿದಳು ಶೋಕದಲಿ ॥ ೪೧ ॥
ಎರಗಿದಾಭಕ್ತಳಿಗೆತದ್ಗುರು । ವರನು ನುಡಿದನು ತಾಯೆ ಕೇಳ್ । ಗುರುವಿನಾಮಗಗುರುವಿಗಾದನು ಚಿಂತೆನಿನಗೇಕೆ ॥
ಮರುಗದಿರು ನೀನಿನ್ನಮಕ್ಕಳ । ಗುರುವು ಪೊರೆವೆನು ಭೀತಿಬೇಡ್ ।
ಮರೆಯಬೇಡ್ ನನ್ನ ನೀನಡೆಯೆಂದನಾದತ್ತಾ ॥ ೪೨ ॥
ಚಿಂತೆಸಂತಸಗೊಳ್ಳುತಾಕೆಯು । ಕಂತುಹರನಂ ಧ್ಯಾನಿಸುತಮಿಗೆ ।
ಸಂತರಂನೆನೆಯುತ್ತೆ ಬಂದಳು ಮನೆಗೆ ಶೀಘ್ರದಲಿ ॥
ಅಂತುದಗಾಣದಲ್ಲಿಯಾವೃ । ತ್ತಾಂತಪೇಳ್ದಳು ಸರ್ವರುಂಬಹು ।
ಚಿಂತೆಯಲಿ ರಾತ್ರಿಯನುಕಳೆದರು ಪುತ್ರಶೋಕದಲಿ ॥ ೪೩ ॥
ಅತ್ತಲಾಮನೆಯವರು ಕುವರನಿ । ಗತ್ತುಕರೆವುತ್ತಿರಲು ತವೆನ್ಮಾಳ ।
ಗಿತ್ತಕೇಳರಿ ಭಕ್ತರೆಲ್ಲರು ಮುಂದಣುರುಕಥೆಯೂ ॥
ಮೃತ್ಯುಹರಗುರುದತ್ತಬೆಳಗಿನ । ಹೊತ್ತುಮುಂದೋರುತ್ತಲಿರೆ ತಾ ।
ಸುತ್ತಮುತ್ತಲಿನೋಡಿ ನಸುನಗುತೆಂದನೇವೇಳ್ವೆ ॥ ೪೪ ॥

ಯಾಕೆಮಲಗಿದೆಕಂದನಿನಗಿನಿ । ತೇಕೆನಿದ್ರೆಯುಪುತ್ರನಿನಗಿಂ ।
ತೇಕೆಮಾಯೆಯು ಕಾಲಹರನೀ ಪರಮಗುರುಕುವರಾ ॥
ಸಾಕುಬಿಡುಮೃತಿಯುಂಟೆ ನೀನಿ । ನ್ನೇಕೆತಡಮಾಡುವದು ನೀಜಗ ।
ದೇಕಕರ್ತನು ಬೇಗನೀನೇಳೆಂದನಾಗುರುವು ॥ ೪೫ ॥
ನಿನ್ನಹಿರಿಯರು ಕ್ಲೇಶಬಡುವರು । ನಿನ್ನಭಕ್ತರು ಚಿಂತಗೈವರು ।
ನಿನ್ನಶರಣರು ದಾರಿನೋಳ್ಪರು ನಿನ್ನನೇನೆನೆದು ॥
ಚನ್ನಿಗನೆನೀನೇಳು ಚಕ್ಕನೆ । ನಿನ್ನನಿಜಗುರು ನಿನ್ನಬಯಸುವ ।
ನಿನ್ನುತಿಳುಕೊಂಡೇಳಲೈನೀನೆಂದನಾಗುರುವು ॥ ೪೬ ॥
ಏಳುನೀನಿರ್ವಾಯಜಗದೊಳ । ಗೇಳುನೀಸಂಜೀವಯೋಗದೊ ।
ಳೇಳುನೀಮಜ್ಜೀವನೀನೇಳೆಂದು ಕೈಯೆಳೆಯೆ ॥
ಹೇಳಲೇನಾಪರಮಗುರುವಿನ । ಲೀಲೆಕೇಳಿರಿ ನೀವುನಿದ್ರೆಯೊ ।
ಳೇಳುವಂತೆನಲೆದ್ದನಭಿವಂದಿಸಿದನಾಬಾಲಾ ॥ ೪೭ ॥
ನಾನುಖಾಜಾಮೀನದಿನ್ವಲಿ । ನೀನುತಿಳಿಗಡಹಿಂದುಜನರೊಳ ।
ಮೀನದಿನ್ವಲಿನನಗೆ ನಿನಗೆಯುಭೇದವೇನಿಲ್ಲ ॥
ನೀನು ನನ್ನಂತಾಡುಜಗದೊಳು । ನಾನುನಿನ್ನಾಟದಲಿ ನಿಲ್ಲುವೆ ।
ನಾನೆನೀನೆಂದಾತಗ ಮರ್ದಪ್ಪಿದನು ಗುರುದತ್ತಾ ॥ ೪೮ ॥
ನೀನಜಾತನು ಜಾತನೊಂದಿಗೆ । ನೀನುಪರತರವಸ್ತುಸದ್ಗುರು ।
ನೀನುಭಕ್ತ್ಯಾಚಾರ ತಿದ್ದಲು ಬಂದಿಕಲಿಯುಗಕೆ ॥
ನೀನುಕಾರಣಕರ್ತಪುರುಷನು । ನೀನು ಮಹಿಮಾಧಾರನೊಡೆಯನು ।
ನೀನು ನರನಾಟಕನು ಜಗದೊಳಗಾಡುಹೋಗೆಂದಾ ॥ ೪೯ ॥
ನನ್ನ ಕುವರನು ನೀನು ಭುವನದೊ । ಳುನ್ನತೋನ್ನತಮಹಿಮನೆನಿಸುವೆ ।
ಕುನ್ನಿಮನುಜರ ನಿಂದಕರ ಹಲ್ಮುರಿವೆ ನೀನಿನ್ನು ॥
ನಿನ್ನ ಶರಣರ ನೀನುಕೂಡುವೆ । ನಿನ್ನಭಕ್ತರನೀನುಕಾಯುವೆ ।
ನನ್ನಭಯನಿನಗಿದುವೆನೀಸಂಚಾರವಮಾಡೆಂದ ॥ ೫೦ ॥
ಪರಮಭಕ್ತರೆ ನೀವು ಕೇಳಿರಿ । ಗುರುವೆನೀಗತಿಯೆನ್ನುತಾಯೆಳೆ ।
ವರೆಯನಾಂತಿಹಕರ್ತಶಿರಬಾಗಿರಲು ಗುರುಪದಕೆ ॥

ಗುರುವಿನಪ್ಪಣೆಯಾಯ್ತು ನಿನಗೀ । ಧರೆಯೊಳೇತರಭಯವುವಾಯಾ ।
ನರಕಣಾನೀನಾಡು ಹೋಗೆಂತೆಂದನಾಗುರುವು ॥ ೫೧ ॥
ಗುರುವಿನಪ್ಪಣೆಯಾಂತುಶಿರದಲಿ । ಕರವಮುಗಿದೇ ಶಿರವಬಾಗಿಸಿ ।
ಗುರುಕುವರ ಹೊರಹೊರಟನೈ ಬಿಟ್ಟಾವಿಜಾಪುರವ ॥
ಧರೆಯೊಳತಿ ಲೀಲೆಯಲಿ ಸಲೆ ಸಂ । ಚರಿಸಿಕರ್ತನುಹೂಡಿದಾಟದ ।
ವರಕಥಾಮೃತಸಾರಕೇಳಿರಿ ಸರ್ವಕುಲದವರು ॥ ೫೨ ॥
ಸುಲಭವೇ ಪರವಸ್ತುಮನುಮುನಿ । ಗಳಿಗೆಸಿಲುಕದ ವಸ್ತುಶ್ರುತಿಶಿರ ।
ಗಳಿಗೆಸಿಲುಕದ ವಸ್ತುನಿತ್ಯಾನಂದನಿಜವಸ್ತು ॥
ಇಳೆಯೊಳಾಪರವಸ್ತುವೇಗುರು । ಲಲಿತಲೀಲಾಮೂರ್ತಿತಾ ಪ್ರ ।
ಜ್ವಲಿಸಿತೋರ್ವನು ಲೋಕದಲಿ ನಿಜಭಕ್ತಿಗೆಸೆಯುವನು ॥ ೫೩ ॥
ಗುರುವು ನರರೊಳಗಲ್ಲ ಶ್ರೀಗುರು । ನರನುತಾನಲ್ಲವನು ವಿಶ್ವಂ ।
ಭರನುಪರಮಾತ್ಮೇಶಪರಶಿವಸಚ್ಚಿದಾನಂದ ॥
ನರರೊಳವತರಿಸುತ್ತಲಿರುವನು । ನರರಿಗೆಚ್ಚರಗೊಡುತಲಿರುವನು ।
ನರಜನಕೆ ಸಿಲ್ಕದಲೆ ತಾನುರೆಮಹಿಮೆತೋರುವನು ॥ ೫೪ ॥
ಹಿರಿದಿನಲಿ ಶಿವಲೀಲೆಯಾಡುವ । ಕಿರಿದಿನಲಿ ಪರಶಿವನಲೀಲೆಯ ।
ನಿರದಲಾಡುವ ಭಕ್ತರಾಟವ ನೋಡಲುಜ್ಜುಗಿಸಿ ॥
ಹಿರಿದಿನಲಿ ಬಹುಭಕ್ತಿಮಾಡುವ । ಕಿರಿದಿನಲಿ ಮಿಗೆನಿಂದೆಗೈಯುವ ।
ನರರನಡತೆಗೆ ಮೆಚ್ಚದಾ ಶ್ರೀ ಗುರುವು ನಗುತಿಹನು ॥ ೫೫ ॥
ಹಿರಿದಿನಲಿಹಿಡಿದಿರ್ದಭಕ್ತರು । ಪರಮಭಕ್ತಿಯೊಳೆನಗೆ ನಾನಾ ।
ತರದಿಪೂಜಿಸುತಿಹರು ಕಿರಿದಿನೊಳೆಂತುಮಾಡುವರೊ ॥
ಪರಿಕಿಸುವೆನೆಂದೆನುತೆ ಶ್ರೀ ಗುರು । ಕಿರಿದಿನೊಳಗವತರಿಸುತಿರುವನು ।
ಮರವಿಮನುಜರು ಸೇವೆಗೈಯದೆ ಪಳಿವರಾತನಿಗೆ ॥ ೫೬ ॥
ಗುರುತುಹಿಡಿಯದೆಕೆಟ್ಟುಹೋಗು । ತ್ತಿರುವಮನುಜರಮರುಳುತನಕಾ ।
ಗುರುವು ಚಿಂತಿಸಿ ಹಲವುಬಗೆಯಲಿ ಕುರುಹುತೋರಿಸುವ ॥
ನರಜನುಮದಲಿ ತಿಳಿದುಕೊಳ್ಳದ । ಲಿರುವಕುಲಛಲವಿಡಿದುನಿಂದಿಸು ।
ತಿರುವಮನುಜರಮರುಳುತನಕಾಗುರುವು ನಸುನಗುವ ॥ ೫೭ ॥

ಗುರುಮಹೋನ್ನತನಾದ ಸಾಂಬಗೆ । ನಿರುತಸಗುಣಾನಂದಲೀಲಗೆ ।
ಮೆರೆವಖಾಜಾಮಿೂನದೀನಗೆ ಬೆಳಗಿರಾರಿತಿಯಾ ॥
ಉರುತರಾತ್ಮಾರಾಮನಿಗೆ ಶುಭ । ಕರದಘನಸಂಚಾರಪಾದಗೆ ।
ಗುರುಪುರಾತನಗೆತ್ತಿಬೆಳಗಿರಿ ಮಂಗಳಾರತಿಯಾ ॥ ೫೮ ॥
ಕಾಲಕಾಲಪರಾಕುಸುರನುತ । ಬಾಲಲೀಲಪರಾಕು ಸದ್ಭ ।
ಕ್ತಾಳಿಲೋಲಪರಾಕುಕರ್ತಪರಾಕುಶಿವಲಿಂಗಾ ॥
ಶೂಲಪಾಣಿಪರಾಕುಜಗದಾ । ಮೂಲಪುರುಷಪರಾಕುಭಾಸುರ ।
ಫಾಲನೇತ್ರಪರಾಕುಕರ್ತಪರಾಕುಘನಲಿಂಗಾ ॥ ೫೯ ॥
ಗುರುಮಹತ್ವದ ಸಾರವಿಂತಿದು । ಗುರುಮಹತ್ವಮನಂತವಿರ್ಪುದು ।
ಗುರುಮಹತ್ವವನರಿದು ಪೇಳುವರಾರು ಲೋಕದಲಿ ॥
ಗುರುಫಕೀರೇಶ್ವರನು ಗಂಗಾ । ಧರನಮುಖದಿಂ ಪೇಳಿಸಿದನೀ ।
ತೆರದಿಮುಗಿದುದು ಸಂಧಿಯೆರಡನೆಯೆನಿಸುತಂದದಲಿ ॥ ೬೦ ॥

॥ಇತಿ ಶ್ರೀ ಶಿರಃಪುರಸನ್ಮಠ ಶ್ರೀಭಗವಾನ್ ವಿಭುದಾತ್ಮೀಯು ಗಂಗನಿಂ ।
ಪೇಳಿಸಿದ ಪೌರಾಣದೊಳೆರಡನೆಯು ಸಂಧಿಸಮಾಪ್ತಮಿಂತು ।
೧೫೯ ಪದ್ಯಂಗಳಿಗೆ ಮಂಗಲಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ



## ೩ನೇ ಸಂಧಿ.

### ಕರ್ತರು ದುರ್ಗದ ಮಠದಲ್ಲಿ ಇದ್ದದ್ದು.

ಸಂಧಿ ಸೂಚನೆ—
ಚಲಿಸಿದುರ್ಗದ ಮಠಕೆ ಕರ್ತನು । ಕೆಲವುಕಾಲವ ಕಳೆದನಲ್ಲಿಯೆ ।
ಕುಲಛಲಂಗಳನುಳಿದು ಕೇಳಿರಿ ಸಕಲ ಕುಲದವರು ॥ಪಲ್ಲ॥
ಕೇಳಿರೈ ಶ್ರೀ ಗುರುವಿನಾಟವ । ತಾಳಿರೈ ಭಯಭಕ್ತಿಭಾವವ ।
ಕಾಲಪಾಶವ ಹರಿಯಬೇಕೆಂಬವರ ಮಾರ್ಗವಿದು ॥
ಮೇಲು ಕೀಳುಗಳೇನು ಮಿಲ್ಲದೆ । ಲೀಲೆಯೊಡಲ್ಕೊಂಡು ಸ್ವಾಮಿಯು ।
ಕಾಲಕಾಲಕೆಬರುವ ಹಿಡಿಯಿರಿ ಗುರುತುಗುರುವಿನದ ॥ ೧ ॥
ನರಶರೀರವನಾಂತಮಾತ್ರಕೆ । ನರನು ತಾನಲ್ಲವನು ಜಗದೊಳು ।
ಹರಿಹರ ಬ್ರಹ್ಮಾದಿಜ್ಯೋತಿಯು ಜಗದಗುರುರಾಯ ॥
ಹಿರಿದು ಕಿರಿದುಗಳಿಲ್ಲದವನೀ । ಧರೆಗೆ ಭಾಸ್ಕರನಂತೆ ಬೆಳಗು ।
ತ್ರಿರುವನಾತನ ಗುರುತು ಹಿಡಿಯಿರಿ ಭಕ್ತರೆಂಬವರು ॥ ೨ ॥
ದಿನದಿನಕೆಕಳೆಗೊಂಡುಬೆಳಗುವ । ಜನರೊಳಗೆ ನಿಜಕುರುಹುತಿಳಿಸುವ ।
ಜನದಮನವಿದ್ದಂತೆ ತೋರುತೆ ಮಾತನಾಡುವನು ॥
ಮನದ ಸಂಶಯಗಳನುಕಳೆವನು । ಮನುಜರಾಭ್ರಾಂತಿಯನುಬಿಡಿಸುವ ।
ಚಿನುಮಯಾತ್ಮನ ಗುರುತುಹಿಡಿಯಿರಿ ನೀವು ಲೋಕದಲಿ ॥ ೩ ॥
ಗುರುಪುರಾತನ ವಚನವೇಳ್ವನು । ಗುರುವು ಶರಣರಲೀಲೆವೇಳ್ವನು ।
ಗುರುವು ಶ್ರೀ ಬಸವಾದಿಪ್ರಮಥರ ಮಹಿಮೆ ಪೇಳುವನು ॥
ಗುರುವುಭಕ್ತಿಗೆಮಾತ್ರ ನಲಿವನು । ಗುರುವು ಭಕ್ತರಕಾಮ್ಯಕೊಡುವನು ।
ಗುರುವಿನಾಗುರುತನ್ನು ಹಿಡಿಯಿರಿ ಭಕ್ತರೆಂಬವರು ॥ ೪ ॥
ಗುರುವು ಪುಸಿಯನು ನುಡಿವನಲ್ಲವು । ಗುರುವು ದೇವರವೇಳ್ವನಲ್ಲವು ।
ಗುರುವು ಮೆರೆವವನಲ್ಲ ಡಾಂಭಿಕನಲ್ಲ ಸದ್ಗುರುವು ॥
ಗುರುವು ಚಾಡಿಯ ಕೇಳ್ವನಲ್ಲವು । ಗುರುವುಕೋಪವತಾಳ್ವನಲ್ಲವು ।
ಧರೆಯಭಕ್ತರೆ ನೀವುಹಿಡಿಯಿರಿ ಗುರುವಿನಾ ಗುರುತ ॥ ೫ ॥

ವರಶಿರಃಪುರ ಮೂಲಕರ್ತನು । ಧರೆಯೊಳಂದಿಗೆ ಮುಂದೆನಡಿಸಿದ ।
ಪರಮಲೀಲೆಯ ನೊಸೆದು ಕೇಳರಿ ನೀವುಕಿವಿದೆರೆದು ॥
ಪರಕಿಸುತ್ತಿಳೆಯಲ್ಲಿ ಭಕ್ತಿಯ । ನರುವಿನೆಡೆಯೊಳುನಿಂತು ತೋರು ।
ತ್ತಿರದೆ ಸಲೆಸಂಚಾರವಮಾಡಿದ ನಾತ್ಮವಾಯುದಲಿ ॥ ೬ ॥
ಶಿವಗುಣಕೆ ಶಶಿಮೌಳಿತಾಳ್ದು । ತ್ಸವಕಹಿಪಭೂಷಣನ ಮಹಿಮೆಗೆ ।
ಪ್ರವಿದಿತಾಂಬಾಧವನ ಕೀರ್ತಿಗೆ ಗಿರಿಶಗೌರವಕೆ ॥
ಬುವಿಯೊಳಿರ್ಮಡಿಯೆನಿಸುತಂತಾ । ನವನುನವಯೌವನವು ಕಾಯಕೆ ।
ಕವಿಯೆಸಂಚರಿಸಿದನು ಶ್ರೀ ಗುರು ಕರ್ತಲೋಕದಲಿ ॥ ೭ ॥
ಏಕನಾಥನ ಪಾದಕಮಲವ । ನೇಕವಾನಸರಾಗಿಭಜಿಸುತೆ ।
ಕಾಕುಗುಣಗಳನಳಿದು ಮರೆದೆಲ್ಲವನು ಪುಸಿಯೆನುತೆ ॥
ಲೌಕಿಕವತೊರೆದಿರುವಸಾರ । ವಿವೇಕದಲಿ ಕೂಡಿರುವಸಂತರ ।
ನೇಕಕಾಲದೊಳಪ್ಪಿಕೊಂಡನು ಕರ್ತಗುರುರಾಯಾ ॥ ೮ ॥
ನಿನ್ನ ಪಾದವನಗಲಿಬಂದಿಹೆ । ವಿನ್ನು ನಿನ್ನೆಡೆಗೆಂತು ಹೊಂದುವ ।
ದೆನ್ನವರಮಿಾಪರಿಭವಾಂಬುಧಿಯಲ್ಲಿ ಬಳಲುವದು ॥
ಎನ್ನಿಸಲ್ಕರಿದಹುದು ಗುರುನೀ । ನಿನ್ನೆಗಂಬಿಡಬಹುದೆಭಕ್ತರ ।
ನೆನ್ನುತಿರೆತದ್ಭಕ್ತರಿಗೆ ಬೆಸನಾದನಾಕರ್ತಾ ॥ ೯ ॥
ಪಿಡಿದುಗುರುಧ್ಯಾನವನು ತನುಗುಣ । ಗಡೆದು ಲೌಕಿಕದಲ್ಲಿ ರಮಿಸದೆ ।
ನುಡಿನುಡಿಗೆ ಗುರುಮಹಿಮೆಯನು ಬಣ್ಣಿಸುತೆ ಮೋಹವನು ॥
ಜಡಿದುಗುರುಚಾರಿತ್ರಕಥೆಯಿಸು । ತೊಡನೆಬ್ರಹ್ಮಾನಂದದಲಿ ಸುಖ ।
ವಡೆವ ಮುನಿಕುಲಕೆಲ್ಲ ಗೋಚರನಾದನಾ ಪ್ರಭುವು ॥ ೧೦ ॥
ಕೆಲರುಜಪದಲಿ ಕೆಲರುತಪದಲಿ । ಕೆಲರುಯಾಗದಿ ಕೆಲರುಯೋಗದಿ ।
ಕೆಲರುದಾನದಿ ಕೆಲರುಧರ್ಮದಿ ಕೆಲರುಧ್ಯಾನದಲಿ ॥
ಕೆಲರುಶ್ರುತಿಯಲಿಕೆಲರುಸ್ಮೃತಿಯಲಿ । ಕೆಲರುಸ್ತುತಿಯಲಿ ಕೆಲರುಕಥೆಯಲಿ ।
ಕೆಲರುಭಯಭಕ್ತಿಯಲಿ ಸೊಗಸಿರೆಕರ್ತ ಮುದಗೊಂಡಾ ॥ ೧೧ ॥
ಕೆಲರುನಿರುಪಮ ವೇದಗೋಷ್ಠಿಗೆ । ಕೆಲರುಸದ್ಗುರುಬೋಧನೆಗೆಕೆಲ ।
ಕೆಲರುತತ್ವದ ಮೂಲವಾಕ್ಯಕೆ ಕೆಲರುಸಾಧನೆಗೆ ॥

ಕೆಲರುನಿಜವಹಲಿಂಗಪೂಜೆಗೆ । ಕೆಲರುಸದ್ಗುರುಪಾದಸೇವೆಗೆ ।
ಕೆಲರುಮಾನಸಪೂಜೆಗಿರೆ ನಲಿದಾಡಿದನುಕರ್ತಾ ॥ ೧೨ ॥
ಕೆಲರುಕಳವನುಮಾಡುತಿರೆ ಕೆಲ । ಕೆಲರುಪುಸಿನುಡಿಯಾಡುತಿರೆಕೆಲ ।
ಕೆಲರು ನಿಂದೆಯನಾಡುತಿರೆ ಬೊಗಳುತಿರೆ ಕೆಲಕೆಲರು ॥
ಕೆಲರು ಸಿರಿಯನು ನಂಬುತಿರೆಕೆಲ । ಕೆಲರು ಚಾಡಿಯಹೇಳುತಿರೆ ಕೆಲ ।
ಕೆಲರು ತನುಮದದಲ್ಲಿಬೆರತಿರೆ ನಕ್ಕನಾಕರ್ತಾ ॥ ೧೩ ॥
ಪಲರುಪಗೆತನದಲ್ಲಿ ಪರಿವೃತೆ । ಪಲರುಕಲಹಂಗಳಲಿ ಕೂಡುತೆ ।
ಪಲರು ಕುಹಕವನಡಿಸುತಂ ಪೊಯ್ದಾಡುತಂ ಪಲರು ॥
ಪಲರುಪಿಶುಣತೆಯಲ್ಲಿಸೇರುತೆ । ಪಲರುಪರರರ್ಥದಲಿಬಾಳುತೆ ।
ಪಲರುಹರಟೆಯ ಹಚ್ಚುತಿರೆ ಖತಿಗೊಂಡನಲ್ಲಮನು ॥ ೧೪ ॥
ಯೋಗಿಯಲಿಶಿವನಾಗಿ ಶಂಕರ । ನಾಗಿನಿಜಭಕ್ತನಲಿ ಪರಶಿವ ।
ನಾಗಿಶಿವಶರಣನಲಿ ಸಾಧುವಿನಲ್ಲಿಪರಬೊಮ್ಮ ॥
ಆಗಿಸಚ್ಛಿಷ್ಯನಲಿ ಶ್ರೀಗುರು । ವಾಗಿಜನಮನದಂತೆಯೆನೆತಾ ।
ನಾಗಿತೋರುತೆ ಮೃಡನು ಹೊರಟನುದುರ್ಗದೆಡೆಗಾಗಿ ॥ ೧೫ ॥
ಅಮಿತಮಹಿಮಾಲೀಲಕರ್ತವಿ । ನಮಿತಭಕ್ತರಿಗೊಲೆವುತಲಿ ವಿ ।
ಶ್ರಮಿಸಿ ಸಂಚರಿಸುತ್ತನಡೆದನು ದುರ್ಗದುರುಮಠಕೆ ॥
ವಿಮಲಬಾಲಕನಂತೆಕರ್ತನು । ಗಮಿಸೆಗಡತದ್ವಾರಪಾಲಕ ।
ರಮಮತರುಬಿದರಲ್ಲಿನೀ ಭವಿಸಾರುಹಿಂದೆನುತಾ ॥ ೧೬ ॥
ದ್ವಾರಪಾಲಕರಂತುತಡೆಯಲು । ತೋರದಾಕ್ಷಣ ಕೊಳಗೆಹೊಕ್ಕನು ।
ತೋರಿದನು ಶ್ರೀಕರ್ತ ವಾಮುರುಗೇಂದ್ರನೆದುರಿನಲಿ ॥
ಸಾರಸುಜ್ಞಾನದಲಿತದ್ಗುರು । ವಾರಿದಾನಿಜವಸ್ತುವಿವನೆಂ ।
ದಾರಯಿದುಕರೆದೊಯ್ದನೇಕಾಂತದಲಿ ಪರಶಿವನ ॥ ೧೭ ॥
ಅಂತು ಶ್ರೀಮುರಗೇಂದ್ರನಾಬಾ । ಲೇಂದುಧರಶಿವನೊಲಿದನೆನಗಿಂ ।
ದೆಂದುವಂದಿಸಿ ಕರ್ತನಂಘ್ರಿಗೆಚಾಚಿದನು ಶಿರವ ॥
ಬಂದನಲ್ಲಮವಿಭುವೃತಾನಿವ । ನೆಂದುಶ್ರೀಮುರುಗೇಂದ್ರಗುರುತಿಳಿ ।
ದಂದು ಪೂಜಿಸಿದನು ಕಣಾನರರರಿಯದಂದಲಿ ॥ ೧೮ ॥

ಶೈವಮತದುರುಗುರಗಳ್ಯೆನೀ । ವಾವಮತದಿಂದೆನಗೆ ಸುಮ್ಮನೆ ।
ಸೇವೆಗೈವಿರಿಪೇಳಿರೆನಗೆಂತೆನಲಿಕಾಕರ್ತಾ ॥
ಈ ವಿಚಾರಗಳೇಕೆ ಶ್ರೀಗುರು । ದೇವನೀನವತರಿಸಿಬಂದಿಹು ।
ದೀವಸುಂಧರೆಯಲ್ಲಿ ಪುಸಿಯೇನೆಂದಮುರಗೇಂದ್ರಾ ॥ ೧೯ ॥
ಆವಬಲ್ಲನು ಗುರುವಿನಾಟವ । ನಾವಿಭುವೆಶಾಬಲ್ಲನೆಂದಾ ।
ಶ್ರೀ ವಿಭುವುಮುರಗೇಂದ್ರನಂ ಬಿಡದಪ್ಪಿದನು ಬಳಿಕಾ ॥
ದೇವದೇವನೆ ನೀಸುಭುವನದೊ । ಳಾವಕಾರಣನರಶರೀರದೊ ।
ಳಾವಲೀಲೆಯನಾಡಬಂದಿರಿ ಪೇಳಿರೆನಗೆಂದಾ ॥ ೨೦ ॥
ಗುರುವಿನಪ್ಪಣೆಯಂತೆಬಂದಿಹೆ । ನರಿಯೆಸ್ಯೆನಾನಾವುದಂತಾ ।
ನಿರುವೆನಾಗುರುನಡಿಸಿದಂದದಿ ಸರ್ವಕಾಲದಲಿ ॥
ಗುರುದಿಗಂಬರನಲ್ಲಮಪ್ರಭು । ಧರಣಿಯಲಿನಿಜಭಕ್ತಿಗೋಸುಗ ।
ಬರುವನೆಂಬುದುಸತ್ಯಮತವ್ಯೆಯೆಂದನಾಕರ್ತಾ ॥ ೨೧ ॥
ಕರುಣಾದರೆ ನಿಮ್ಮಮಠದಲಿ । ಗುರುವೆನಿಲ್ಲುವೆಬಾಲ್ಯವಿದುಪರಿ ।
ಹರಿಸಿದಾಬಳಿಕೆಲ್ಲಿಪೋಪೆನೊ ನಿಲ್ಲುವೆನೊವೇಣು ॥
ಗುರುವಿನಾಟವ ನರಿಯಲಸದಳ । ವಿರುವೆನಾತನಸೂತ್ರದೊಳಗೆಂ ।
ದೊರೆದನಾಮುರಗೇಂದ್ರನಿಗೆ ಮೃಡಮಹಿಮನಲ್ಲಮನು ॥ ೨೨ ॥
ಲೋಕದೊಡೆಯನೆ ದೇವದೇವನೆ । ಲೋಕನಟನೆಗೆಲೀಲೆಯಾವದು ।
ಸಾಕುಬಿಡುಮರೆಪೇಳ್ವುದೈ ನನಗೆನಲುಮುರಗೇಂದ್ರಾ ॥
ಗೋಕುಲದ ಶ್ರೀ ಕೃಷ್ಣನಂತೆಯೆ । ಲೋಕದಲಿದನಕಾದನೆನಿಸುವೆ ।
ಸಾಕುನೀನೆನಗಿನ್ನುಗುಪ್ತದೊಳೆಂದನಾಕರ್ತಾ ॥ ೨೩ ॥
ಮರೆಯೊಳಗೋವೃಂದಪಾಲಿಸು । ತಿರುವದೀಮಠದಲ್ಲಿತಮ್ಮಯ ।
ಪರಮಲಿಂಗಾನಂದದಂತೆಯೆ ಲೀಲೆಯೊಡುವದು ॥
ಗುರುವಿನಂಘ್ರಿಗೆ ನಿತ್ಯಸೇವಕ । ನಿರುವೆನತಿಗುಪ್ತದಲಿ ಸ್ಯೆಯೆಂ ।
ದೆರಗಿದನು ತದ್ಗುರುವು ಸ್ಯೆಸ್ಯೆಯೆಂದನಾಕರ್ತಾ ॥ ೨೪ ॥
ತಿಳಿದು ಶ್ರೀಮುರಗೇಂದ್ರಗುರುತ । ನ್ನೊಳಗೆ ಸಂತಸಬಟ್ಟುಚಿನ್ನಿಗ ।
ನೆಳಸಿದಂತೆಯೆಮೂಡಿದನು ಲೌಕಿಕಕೆತೋರಿಸದೆ ॥

ಸಲಹುತಾಗೋನಿಕರವನುಮಿಗೆ । ಕಳೆವುತಾಬಾಲ್ಯವನು ಗುಪ್ತದೊ ।
ಳಿಳೆಯಜನರಿಗೆ ತೋರದಾಡುತ್ತಿರ್ದನಾಕರ್ತಾ ॥ ೨೫ ॥
ಮಲಗೆ ಸರ್ವರು ರಾತ್ರಿಯಲಿನೆರೆ ತಿಳಿದು ಶ್ರೀ ಮುರಗೇಂದ್ರಕರ್ತನ ।
ಬಳಿಗೆಬರುವನು ಕರೆದುಕೊಂಡೊಯ್ಯುವನು ತನ್ನೆಡೆಗೆ ॥
ಬಲಿದಭಕ್ತ್ಯುಚಾರದಲಿ ಮುದ । ದಳೆದುಸುವಿಧಾನದಲಿಬಹುವಿಧ ।
ಗಳಲಿಪೂಜಿಸಿಬಿಡದೆ ಸತ್ಕರಿಸುವನು ಕರ್ತನಿಗೆ ॥ ೨೬ ॥
ಬೆಳಗಿನೊಳು ಬೇಗೆದ್ದು ಕರ್ತನು । ಮಲಿನಭಾವರಿಗೇನುತಿಳಿಸದ ।
ಲಿಳೆಯಹುಡುಗರ ತೆರದೊಳಾಕಳಕಾಯಹೋಗುವನು ॥
ನಲಿವುತಾ ದನಗಾವಹುಡುಗರ । ಬಳಗದೊಳಗಾಡುತ್ತೆ ತಾನುರೆ ।
ಕಳೆಯತೋರಿಸಹತ್ತಿದನು ಗಡಕೇಳಿರೈ ಮುಂದೆ ॥ ೨೭ ॥
ಹುಡುಗರೊಳು ತಾ ಹುಡುಗನಾಗಿಯೆ । ಬಿಡದಲಾಟವನಾಡುವನು ನಡು ।
ನಡುವೆಬಲುಕಿಡಿಗೇಡಿತನವನು ಮಾಡಿನಗಿಸುವನು ॥
ಒಡನೆಸಕ್ಕರಿಬೆಲ್ಲ ಚೂರ್ಮರಿ । ಕಡಲಿ ಹೋಳಿಗೆಹುಗ್ಗಿತುಪ್ಪವ ।
ಕಡುಬುಕೊಡುವನು ಕರ್ತಬರಿಗೈತೋರುತಾಡುತಲಿ ॥ ೨೮ ॥
ಸರಸಭಕ್ತರೆ ನೀವು ಕೇಳಿರಿ । ಗುರುಫಕೀರನು ಗೋವುಕಾಯು ।
ತ್ತಿರುವಬಾಲಕರೆಲ್ಲಭಯಗೊಳೆಮಾಡಿದಾಟವನು ॥
ಹರಿವಸರ್ಪದೆ ಕಡಿಸಿಕೊಳ್ಳುವ । ನುರಿವಕೆಂಡವನುಂಗಿಬಿಡುವನು ।
ಸುರಿವಮುಳೆಯಲಿ ನಿಂತುಬೀಳುವ ಸಿಡಿಲಸಲೆಹಿಡಿವ ॥ ೨೯ ॥
ನೆರಳುವಾಹುಡುಗರಿಗೆ ಕರ್ತನು । ಬರಿಯಕೈಯಿಂದೆಳೆದುಸಂತಸ ।
ವಿರಿಸಿಬಂದಾಪತ್ತುಗಳನುರೆದೂರಮಾಡುವನು ॥
ತ್ವರಿತಚಳಿಯನು ನಿಲಿಸಿಜ್ವರಪರಿ । ಹರಿಸಿನಾನಾ ರೋಗಕಳೆವನು ।
ನೆರೆದಹುಡುಗರಿಗೆಲ್ಲ ಸೋಜಿಗಗೊಳಿಸುತಾಡುವನು ॥ ೩೦ ॥
ನಗುತಕರೆವನು ಕರ್ತಹುಡುಗರ । ನಗಲದಲೆಬಹುಪ್ರೀತಿಮಾಡುವ ।
ನೊಗುಮಿಗೆಯಹರ್ಷದಲಿಹಾವನು ಹಿಡಿದುಹೆದರಿಸುವ ॥
ಅಗಿದುಹುಡುಗರುಹರಿದುಹೋಗಲು । ಸಗುಣಲೀಲನುಕರ್ತನವರೊಳ ।
ಗಗಲದಿರುವನು ಕಂಡುವಿಸ್ಮಯಬಡುವರವರೆಲ್ಲ ॥ ೩೧ ॥

ಆಡುವಾ ಚೆಂಡನ್ನೆನುಂಗುವ । ನಾಡುವಾಬೊಗರೆಯನೆನುಂಗುವ ।
ನಾಡುವಾಯೊಡವೆಗಳನೆಲ್ಲವ ನುಂಗಿಯೀಬಿಡುವ ॥
ರೂಢಿಗಿದುಪೊಸತೆಂದು ಹುಡುಗರು । ಕೂಡಿತವ್ಮೊಳೆಮಾತನಾಡುವ ।
ದಾಡಲಿಕ್ಕಂಜುವರು ಮಾಯಾಬಾಲಕನಕೂಡ ॥ ೩೨ ॥
ನೀವು ಹೇಳಿದ ತೆರದಿನಡೆಯುವೆ । ನಾವುನೀವುಂಗೆಳೆಯರಲ್ಲವೆ ।
ನೀವು ಸಂಶಯಗೊಂಡುಹೆದರುವದೇಕೆಬಿಡಿರಿನ್ನು ॥
ಆವುಗಳನೆಲ್ಲವನುನಾನೇ । ಕಾವೆಸುಮ್ಮನೆ ಕುಳಿತುಕೊಳ್ಳಿರಿ ।
ನೀವು ನನ್ನನುಬಿಡಲುಬೇಡಿರಿಯೆಂಬನಾಕರ್ತಾ ॥ ೩೩ ॥
ಆಡುತಾಡುತೆಸೂಜಿತಿನ್ನುವ । ನಾಡುತಾಡುತೆ ಕಾಜುತಿನ್ನುವ ।
ನಾಡುತಾಡುತೆ ತನ್ನಮುಖದಲಿಜಗವತೋರುವನು ॥
ನೋಡಿಹೆದರುವರೆಲ್ಲಬಾಲಕ । ರೋಡಿಹೋಗುವರಲ್ಲಿತತ್‌ಕ್ಷಣ ।
ಕೂಡಿಕೊಂಬನು ಕರ್ತನವರಿಗೆ ಬಿಡದೆಸಾಜದಲಿ ॥ ೩೪ ॥
ಸುಗುಣಭಕ್ತರೆಕೇಳಿರೈಗುರು । ಹಗಲಗಳೆವನುಹುಡುಗರೊಂದಿಗೆ ।
ಬಗೆಯೆ ಶ್ರೀ ಮುರಗೇಂದ್ರನೊಂದಿಗೆ ರಾತ್ರಿಗಳೆಯುವನು ॥
ಜಗಕೆಖಾಜಾಮಿಾನದೀನನೆ । ಸಗುಣಸದ್ಗುರು ನೀನೆಗತಿಯೆಂ ।
ದಗಲದಲೆಸ್ಮರಿಸುತ್ತಲಿರುವನು ಶ್ರೀ ಫಕೀರೇಶ ॥ ೩೫ ॥
ಹರುಷದಲಿ ಮುರಗೇಂದ್ರನಾಪರಿ । ಪರಮಪರಶಿವಮೂರ್ತಿಯೆಂದೇ ।
ಚರಣಸೇವೆಯಮಾಡಿನಿತ್ಯಾನಂದಬಡಿಸುತಿರೆ ॥
ಜರುಗಿದವುಬಹುದಿವಸಗಳುಗಡ । ಗುರುದಿಗಂಬರನಾಫಕೀರನು ।
ಚರಿಸಬೇಕಿನ್ನೆಂದುತಿಳಿದಾಗುರುವಿಗಿಂತೆಂದಾ ॥ ೩೬ ॥
ಗುರುತುಹಿಡಿದೇ ನನ್ನಕರೆದಿರಿ । ಗುರುತುಹಿಡಿದೆನಗಿಟ್ಟುಕೊಂಡಿರಿ ।
ಗುರುತುಹಿಡಿದುರೆಸೇವೆಗೈದಿರಿ ಬಹಳಗುಪ್ತದಲಿ ॥
ಗುರುವೆನೀವ್‌ಮಾಡಿದ್ದು ನಿಜಗುರು । ಚರಣಕರ್ಪಿತವಾಯ್ತುನಿಮ್ಮನು ।
ಮರೆವುದಿಲ್ಲವುಕೊಡುವದಪ್ಪಣೆಯೆಂದನಾಕರ್ತಾ ॥ ೩೭ ॥
ಅರಿದು ಶ್ರೀ ಮುರಗೇಂದ್ರನಾಗಳೆ । ಹರುಷದಲಿಚರಣಾರವಿಂದ ।
ಕ್ಕೆರಗೆಕರಮುಗಿದಿರಲು ಕರ್ತನು ಹಾಡಿಹರಸುತಲಿ ॥

ಗುರುವೆತವ್ಮ್ಯಂತಿರುವಗುರುವನು । ಧರೆಯೊಳಾರನುಕಾಣೆನೈ ತಾವ್ ।
ಪರಮಕರುಣಿಗಳೆಂದಗೋಚರನಾದನಾಕ್ಷಣಕೆ ॥ ೩೮ ॥
ಐಸಲೇ ಮುರಗೇಂದ್ರಮಾಯಾ । ಪಾಶದಲಿ ಸಿಲ್ಕದಲೆ ಗುರುವಿನೊ ।
ಳಾಸೆವಿಟ್ಟಂತರಿದು ನೀ ನಿಜವಸ್ತುವಾಗಿರುವೆ ॥
ಲೇಸುಲೇಸಿದು ನಿನಗೆಕೇಳೆಂ । ಬಾಶಿಪ್ರೋಕ್ತಿಗಳಾತ್ಮದಲಿ ಮಿಗೆ ।
ಸೂಸುತಿರೆ ಮುರಗೇಂದ್ರ ನೆನೆದನು ಪ್ರಭುಪದಾಂಬುಜವ ॥ ೩೯ ॥
ಹೊಗೆಯೊಳಿದ್ದಂತಗ್ನಿಸೂರ್ಯನು । ಮುಗಿಲಮರೆಗೊಂಡಂತೆಖಡ್ಗವ ।
ದಗಲದಿರ್ದಂತೊರೆಗೆ ಕರ್ತನುನರಶರೀರದಲಿ ॥
ಜಗಕೆಮರೆಯಿಂದಿರ್ದುತನ್ನಯ । ಸಗುಣತೇಜದಿ ಬೆಳಗದಿರ್ದನು ।
ಜಗದಮಾಯಾನರನ ಕಥೆಯನು ಕೇಳಿರೈಮುಂದೆ ॥ ೪೦ ॥
ವಿನುತದುರ್ಗದ ಮಠದ ಸ್ವಾಮಿಯು । ಮನದೊಳಾಪರಶಿವನಪಾದವ ।
ನೆನೆಯಲಾರಂಭಿಸಿದನತ್ತಲುಕರ್ತತಾನಿತ್ತ ॥
ಮನುಜರಲಿ ಭಕ್ತಿಯನುನೋಡುವೆ । ನೆನುತಸಂಚರಿಸುತ್ತೆನಾನಾ ।
ಮನುಜರಾಕಾರದಲಿ ಹೊರಟನು ಹೇಳಲೇನದನು ॥ ೪೧ ॥
ದುರುಳರನು ದಂಡಿಸುತೆ ಮಹಿಮೆಯ । ನಿರದೆತೋರಿಸುತಲ್ಲಿಗಲ್ಲಿಗೆ ।
ಪರಮಸಂತರೊಳಿರುತೆ ಕಾಪಾಡುತ್ತೆ ಭಜಕರನು ॥
ನರರಕಣ್ಣಿಗೆ ತೋರಿತೋರದ । ಲಿರುತೆತಾನು ಫಕೀರನೆನಿಸುತೆ ।
ಧರೆಯೊಳತಿಲೀಲೆಯಲಿ ಹೊರಟನು ಬಣ್ಣಿಸಲ್ಕಳವೆ ॥ ೪೨ ॥
ವೇದಶಾಸ್ತ್ರಗಳೋದಿಕೆಲವರು । ವಾದದಲಿಪರಜನರ ಗೆಲುವರು ।
ವೇದಬಲ್ಲವರಾಗಿ ಗಳಿಸಿದ್ದೇನು ಸದ್ಗತಿಗೆ ॥
ಸಾಧುಸಜ್ಜನಸಂಗವಿಲ್ಲದೆ । ಹಾದಿದೊರೆವುದೆ ಬರಿದೆಭವದೀ ।
ಬಾಧೆಬಿಡುವದೆ ಗುರುಕಟಾಕ್ಷವಪಡೆದುಕೊಳ್ಳದಲೆ ॥ ೪೩ ॥
ಮೊದಲೊಳಿರ್ಪುದುಮರೆತುಬಿಡುವರೆ । ತುದಿಯಗತಿಯನುಜರಿದುಬಿಡುವರೆ ।
ಮದಿಸಿಮಧ್ಯದ ವಿಷಯಸೌಖ್ಯಕೆಮರುಳರಾಗುವರೆ ॥
ಮೊದಲು ತುದಿಗಳಿಗೊಡೆಯನಪ್ಪಾ । ಸದಮಲಾತ್ಮನಗುರುವಿನುತ್ತಮ ।
ಪದಕಮಲವನು ಬಿಡದೆ ಸೇವಿಸಿ ಕೃಪೆಯಪಡೆಯುವದು ॥ ೪೪ ॥

ಹಲವು ನುಡಿಗಳು ಹಲವುನಡಿಗಳು । ಹಲವುಮತಗಳು ಹಲವುವ್ರತಗಳು ।
ಹಲವುಕಥೆಗಳು ಹಲವು ಪಥಗಳು ಹಲವು ಶಾಸ್ತ್ರಗಳು ॥
ಹಲವುಕಳೆಗಳು ಹಲವುಫಲಗಳು । ಹಲವದೆಂಬುದು ಮಾಯದಾಟವು ।
ಹಲವು ಹಂಬಲಿಸುತ್ತೆಕೆಡುವರು ಮರವಿಮಾನವರು ॥ ೪೫ ॥
ಕಾಳುಮೂಳರುಪ್ರಾಯಮದದಲಿ । ಲೋಲರಾಗಿಯೆ ವಿಷಯದಲಿಬಲು ।
ಖೂಳತನದಲಿ ನಡೆಸುಸ್ವಾಮಿಯಪಾದವನುಮರೆತು ॥
ಫಾಲನೇತ್ರನಪರಮಶರಣರ । ಲೀಲೆಯನುತಿಳಿಯದಲೆ ಸಾಧು ಜ ।
ನಾಳಿಯನು ವಂದಿಸದೆ ಭ್ರಾಂತಿಗೆ ಬಿದ್ದುಕೆಡುತಿಹರು ॥ ೪೬ ॥
ಬಿಡುವರುದ್ಘಟರಕಟತಮ್ಮನು । ಬಿಡದೆಬೋಧಿಪಗುರುವಿನಂಬಲು ।
ಸೆಡುವಿನಿಂ ಜರಿದಾಡುವರುಗಡ ಬುದ್ಧಿಗೇಡಿಗಳು ॥
ಕೆಡುವರಾ ಶ್ರೀ ಗುರುವಿನಂಜಿಕೆ । ವಿಡಿಯದಲೆ ಸೊಕ್ಕೇರಿತಿಳಿಯದೆ ।
ಕಡೆಗೆಬೀಳುವರಯ್ಯೊ ದುಃಖದಘೋರನರಕದಲಿ ॥ ೪೭ ॥
ಪರಮಭಕ್ತ್ಯರ್ಥದಲಿಸಲೆಸಂ । ಚರಿಸಿಪಾವನಗೈದುಪೊಡವಿಯೊ ।
ಳಿರುವಭಕ್ತರನೆಲ್ಲ ಬಗೆಯನು ಬಗೆದುನಿಲ್ಲದಲೆ ॥
ದುರಗದಾಮುರಗೇಂದ್ರನುರೆ ಸ । ತ್ಕರಿಸಿಸೇವೆಯಮಾಡಲಾತಗೆ ।
ಕರುಣಿಸಿದಕರ್ತನಿಗೆ ಬೆಳಗಿರಿ ಮಂಗಳಾರತಿಯಾ ॥ ೪೮
ಹಿರಿದುಕಿರಿದುಗಳಿಲ್ಲದಲೆನಿಜ । ಪರಮಲೀಲಾಮಾತ್ರದಿಂದಲೆ ।
ಧರೆಯೊಳಾಕಳಕಾದು ಬೆಳಗಿದೆ ಬಹಳಮಹಿಮೆಯಲಿ ॥
ಮರವಿಜನರಿಗೆ ಗುರುತುಕೊಡದಲೆ । ಸ್ಮರಿಪಭಕ್ತರನೆಲ್ಲಸಲಹಿದೆ ।
ದುರಳರನು ದಂಡಿಸಿದೆಕರ್ತಪರಾಕುಮುದಿಪಾಚ್ಛಾ ॥ ೪೯ ॥
ಗುರುಮಹತ್ವದ ಸಾರವಿಂತಿದು । ಗುರುಮಹತ್ವಮನಂತವಿರ್ಪುದು ।
ಗುರುಮಹತ್ವವನರಿದು ಪೇಳುವರಾರು ಲೋಕದಲಿ ॥
ಗುರುಫಕೀರೇಶ್ವರನು ಗಂಗಾ । ಧರನಮುಖದಿಂ ಪೇಳಿಸಿದನೀ ।
ತೆರದಿಮುಗಿದುದುಸಂಧಿಮೂರನೆಯೆನಿಸುತಂದದಲಿ ॥ ೫೦ ॥
॥ಇತಿ ಶ್ರೀ ಶಿರಹಟ್ಟಿಪುರಸನ್ಮಠ ಶೂನ್ಯಸಿಂಹಾಸನ ಶ್ರೀ ಭಗವಾನ್‌ವಿಭುವಾತ್ಮೀಯ ।
ಗಂಗನಿಂ ಪೇಳಿಸಿದ ಪೌರಾಣದೊಳ್ಮೂರನೆಯ ಸಂಧಿ ಸಮಾಪ್ತಮಿಂತು ।
೨೦೯ ಪದ್ಯಂಗಳಿಗೆ ಮಂಗಲಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ

## ೪ನೇ ಸಂಧಿ.

### ಕರ್ತರುನಿಜಾಮನಲ್ಲಿ ತೋರಿದ ಮಹತ್ವ.

ಸಂಧಿ ಸೂಚನೆ—

ಹೈದರಾಬಾದದ ನಿಜಾಮನೊ । ಳಾದಿಮೂರ್ತಿಯೆ ವರಫಕೀರನು ।
ಬೇಧವಿಲ್ಲೆಂದೆನಿಸಿಕರ್ತ ಕರಾರಿಕೈಕೊಂಡಾ ॥ಪಲ್ಲ॥
ಭಕ್ತಬಂದರೆ ಶಾಂತಿಗೊಂಬನು । ಭಕ್ತಕುಳಿತರೆ ಹರುಷಬಡುವನು ।
ಭಕ್ತನುಂಡರೆ ತಾನುಪರಮಾನಂದನಾಗುವನು ॥
ಭಕ್ತನುಡಿದರೆ ಬಿಡದೆಕೇಳ್ವನು । ಭಕ್ತಚಿಂತಯ ನಿರದೆಕಳೆವನು ।
ಭಕ್ತರೇನೀವ್‌ಗುರುತು ಹಿಡಿಯಿರಿಪರಮಗುರುವಿನದ ॥ ೧ ॥
ಹುಡುಗನಂತಾಡುತ್ತಲಿರುವನು । ಬಿಡದೆಭಕ್ತಗೆ ಕಾಡುತಿರುವನು ।
ಹಿಡಿದಭಕ್ತರನೆಲ್ಲ ಸಲಹುವಸರ್ವಕಾಲದಲಿ ॥
ಅಡಗಿಕೊಂಡಿರುತಿಹನು ತನ್ನೊಳೆ । ತಡವಿದರೆ ಮೆಟ್ಟುವನುದುಷ್ಟರ ।
ನೊಡನೆತಿಳಿಯಿರಿಗುರುತು ಹಿಡಿಯಿರಿಗುರುಮಹಾತ್ಮಕನ ॥ ೨ ॥
ಗುರುವುತಾಂತ್ರಿಕನಿಂದ ತಾಂತ್ರಿಕ । ಗುರುವುಮಾಂತ್ರಿಕನಿಂದ ಮಾಂತ್ರಿಕ ।
ಗುರುವುಮಹಿಮನಿಗಿಂತ ಮಹಿಮನುದೇವರಿಂದೇವ ॥
ಗುರುವುಬೈಲಿಂಬೈಲುಜಗದೊಳು । ಗುರುಚರಿತ್ರಕೆಸಾಮ್ಯವುಂಟೇ ।
ಪರಮಗುರುವಿನಗುರುತು ಹಿಡಿಯಿರಿಭಕ್ತರೆಂಬವರು ॥ ೩ ॥
ನರರೊಳಾರವನಲ್ಲಲೋಕದ ।ಹರಿಕೆಯವನೇನಲ್ಲಜಗದೊಳು ।
ತಿರುಕನೇನವನಲ್ಲ ಭಕ್ತಿಗೆಮಾತ್ರಬಂದವನು ॥
ನರರಭಕ್ತಿಗೆ ನಿಷ್ಠೆಗಗಲದೆ । ಕರುಣಿಸುತ್ತವರವರಕಾಮ್ಯವ ।
ನರವುಕೊಡುವನುಗುರುವು ಹಿಡಿಯಿರಿಗುರುತುಗುರುವಿನದಾ ॥ ೪ ॥
ಒಂದುಮತದವನಲ್ಲ ಶ್ರೀಗುರು । ಪೊಂದುಕುಲದವನಲ್ಲ ಶ್ರೀಗುರು ।
ಒಂದಕಾದೊಡೆಮೊಸೆದು ತೋರುವನಲ್ಲ ಶ್ರೀಗುರುವು ॥
ಸಂಧಿಸಿದಭಯಭಕ್ತಿ ಭಾವಕೆ । ಚಂದವಾಗಿಯೆನಡಿಸಿಕೊಡುವವ ।
ನೆಂದಮಲಶ್ರುತಿಸಾರುತಿವೆ ನಿವ್‌ಹಿಡಿಯಿರೈಗುರುತಾ ॥ ೫ ॥

ವರದದೇವರ ಭಕ್ತರೇನೀ । ವರಿತುಕೊಳ್ಳಿರಿಕರ್ತನಾಟವ ।
ನೊರೆವನಂದದಿ ನೀವುಕೇಳರಿಬಿಡದೆ ಬಗೆದಂದು ॥
ಧರೆಯಮೇಲಣಮತದ ಗುರುಗಳ । ಚರಿತೆಯಲ್ಲಿದು ಪೊಸತುಜಗದೊಳು ।
ಪರಮದತ್ತನನವಚರಿತ್ರ ವಿಚಿತ್ರವೇಸಲ್ತೆ ॥ ೬ ॥
ಗುರುದಿಗಂಬರನಲ್ಲಮಪ್ರಭು । ಧರೆಯಭಕ್ತರ ಬಳಿಯೊಳಾಡುತೆ ।
ಕರುಣದಿಂದಾಭಕ್ತರಿಗೆ ಕಾಮ್ಯಾರ್ಥಗಳ ಕೊಡುತೆ ॥
ಪರಮಲೀಲಾನಂದದಲಿ ಸಂ । ಚರಿಸುತಲಿ ಲೀಲೆಯಲಿಹೊಕ್ಕನು ।
ಮೆರೆಯುತಿರುವಾಹೈದರಾಬಾದದಲಿ ಸಾಜದಲಿ ॥ ೭ ॥
ಪುರದೊಳೆಲ್ಲೆಡೆಯಲ್ಲಿ ತಿರುಗುತೆ । ಪರಿಪರಿಯ ವಸ್ತುಗಳನೋಡುತೆ ।
ಗುರುಸಮರ್ಥನು ಕರ್ತನೊಯ್ಯನೆಹೋದನರಮನೆಗೆ ॥
ಬರಗೊಡದೆತದ್ವಾರಪಾಲರು । ಸರಸವಿರಸಗಳಾಡುತಾತಗೆ ।
ಹೊರಗೆಕೋಪದಿ ನೂಕಿಕೊಟ್ಟರು ಕೇಳರೈಮುಂದೆ ॥ ೮ ॥
ಮುಂದೆನಿಂತಿಹವೀರಜನಕುಲ । ದಂದಗೆಡಿಯಿಸಿತದುರುಖಡ್ಗದ ।
ವೃಂದವದುಕೈಸಡಲಿ ಬೀಳ್ವಂತೆಸಗಿ ಸಕಲರನು ॥
ಮುಂದುಗಾಣದವೋಲು ಮೂರ್ಛೆಯ । ನೊಂದಿಸಿದನಾಕ್ಷಣಕೆಲೀಲಾ ।
ನಂದದಲಿ ಪ್ರಭುಕರ್ತಹೊಕ್ಕನುರಾಣಿವಾಸವನು ॥ ೯ ॥
ಹೊರಗೆಗಡಿಬಿಡಿಯಾಯ್ತು ಸೈನ್ಯವು । ಸರಿಸದಲಿಬಂದತ್ತು ಕಲಿಗಳ ।
ಪರಿಯುಮಿಗೆಕೆಟ್ಟಿತ್ತು ಬಲುಬೆರಗಾಯ್ತು ಪುರಜನಕೆ ॥
ಅರಮನೆಯೊಳಾದತ್ತದಬ್ಬರ । ವರರೆರಾಣಿಯುಬಳಿಯರೊಬ್ಬರು ।
ಚರಿಸಲಾಗದೆ ಸುಮ್ಮನಿದ್ದರು ಬಹಳಚಿಂತೆಯಲಿ ॥ ೧೦ ॥
ಕಾಳನಾವನೊಬಂದುಸಕಲರ । ಬೀಳಗೆಡವಿದಹೊಕ್ಕನರಮನೆ ।
ಕೇಳುಭೂಪತಿಯೇಳುನೀನೆಂದಾ ನಿಜಾಮನಿಗೆ ॥
ಆಳುಗಳುಬಂದುಸುರೆ ತತ್ಕ್ಷಣ । ತಾಳಿಕೋಪಾವೇಶವನುಧೊರೆ ।
ಕಾಳನಂತೆಯೆಹೊಕ್ಕನಾನಿಜರಾಣಿವಾಸದಲಿ ॥ ೧೧ ॥
ಅಗಳಾ ಶ್ರೀಕರ್ತಬಾಲಕ । ನಾಗಿರಾಣಿಯಮೊಲೆಯನುಂಬುವ ।
ನಾಗಿಪರತರ ಪಂಚವರ್ಣದ ಶುಕನವೋಲಿರಲು ॥

ಸೋಗಿಲೊಳು ಶಿಶುಗೊಂಡುಮನದನು । ರಾಗದಿಂ ನಿಜರಮಣಿಮಲಗಿರ ।
ಲಾಗಳಾಭೂಪತಿಯು ನೋಡಿದನಾತ್ಮವಲ್ಲಭೆಯ ॥ ೧೨ ॥
ಏನಿದೇನೆಂದರಸುಕೇಳಲು । ಮೂಸಿನಿಯುಕೈಮುಗಿದುತತ್ಪತಿ ।
ಗಾನಿದೇನೆಂದೊರೆವೆಕಾಂತ ಫಕೀರನಾಟವನು ॥
ಏನದಚ್ಚರಿಮೊದಲೊಳಾಗುರು । ಭಾನುಕೆಳೆಗಿಳಿದಂತೆಸೌಮ್ಯದೆ ।
ತಾನೆಪೊಳೆದಿರೆಕಂಡೆನೆಂದಳು ಶಿಶುವಿನೀರೂಪ ॥ ೧೩ ॥
ಏನುಹೇಳ್ವೆಫಕೀರನಾಟವ । ನೇನುಹೇಳುವೆನವನಮಹಿಮೆಯ ।
ನೇನುಹೇಳುವೆನವನಲೀಲಾಸಾರಸಂಗತಿಯಾ ॥
ಏನುಹೇಳುವೆನವನಕಥೆಯದ । ನಾನುಬಲ್ಲೆನೆತಿಳಿಯಲಸದಳ ।
ತಾನೆಬಲ್ಲನೆನುತ್ತೆನಮಿಸಿದಳಾತ್ಮಕಾಂತನಿಗೆ ॥ ೧೪ ॥
ಆಪರಿಯನಾಸತಿಯಮುಖದಿಂ । ದಾಪರಮನರನಾಥನರಿದಾ ।
ಶ್ರೀ ಫಕೀರನೆನೀನುಕೃಪೆಯಿಟ್ಟಂತು ತೋರಿದೆಯೊ ॥
ಈ ಪಥವಿಯಿನ್ನಕಟಸಾಕೆನ । ಗಾಪರಾತ್ಮರಮೋಕ್ಷಸಂಪದ ।
ದಾಪದವಿಬೇಕೆನಗೆಕೊಡುನೀನೆಂದು ಪ್ರಾರ್ಥಿಸಿದಾ ॥ ೧೫ ॥
ಮೆರೆಯೆಕೆಂಜಡೆಯಕ್ಷಮಾಲೆಯು । ಮೆರೆಯೆಸುಕಮಂಡಲುವುದಂಡವು ।
ಮೆರೆಯೆಕೈಪವುಕೆಂಪುಮಡಿಯುದು ನಿಜಶರೀರದಲಿ ॥
ತರುಣತೇಜವು ಭವ್ಯರೂಪದೊ । ಳರರೆತೋರುತ್ತಲ್ಲಿಶಿಶುರೂ ।
ಪಿರದೆಕರ್ತನುಕಾಣಿಸಿದ ಸಿವಯೋಗಿಯಂದದಲಿ ॥ ೧೬ ॥
ಧೊರೆಯುತತ್‌ಕ್ಷಣಕಾದಸೋಜಿಗ । ವರಿತುಭಯಗೊಂಡಾತ್ಮದಲಿಮಿಗೆ ।
ಸ್ಮರಿಸುತಿರೆಗಡಪೀರಪೈಗಂಬರನ ಪಾದವನು ॥
ಅರರೆತೋರುತ್ತಡಗಿತಾನೀ । ಧರೆಗೆವೃದ್ಧಫಕೀರನಾಗಿಯೆ ।
ಮರಳಿಶೋಭಿಸೆಕಣ್ಗೆಭೂಪತಿಬಾಗಿನಮಿಸಿದನು ॥ ೧೭ ॥
ಗುರುವೆನೀವ್‌ಗತಿಯೆನ್ನುತಂ ನಿಜ । ಗುರುವೆತಮ್ಮಯಪಾದಪದ್ಮದ ।
ದರುಶನದೊಳಿಂದಾವುಧನ್ಯರು ಧನ್ಯರೆಂದೆನುತಾ ॥
ಅರಸನರಸಿಯುಕೂಡಿಶ್ರೀಗುರು । ಚರಣಕಮಲಕೆಪೂಜೆಮಾಡುತೆ ।
ಹರುಷಪಡಿಸುತ್ತಿರಲು ಬಹುವಿಧದಿಂದ ಭಕ್ತಿಯಲಿ ॥ ೧೮ ॥

ಜನಪಮೆಚ್ಚಿದೆ ನಿನ್ನನಿಷ್ಠೆಗೆ । ಮನದಕೋರಿಕೆಯೇನುಪೇಳೆನೆ ।
ಜನಪವೇಶ್ವರನೆಂದನಾ ಕರ್ತಂಗೆಕೈಮುಗಿದು ॥
ಮನುಜಜನ್ಮದಿ ಲೋಕಕೃತ್ಯದಿ । ಮನವದಿಲ್ಲೆನಗಿನ್ನುಗುರುವೇ ।
ಮನವು ನಿಮ್ಮಡಿಯಲ್ಲಿ ನೆಲಸಿಹುದೆಂದು ಪದವಿಡಿದಾ ॥ ೧೯ ॥
ಮನುಜಜನ್ಮವು ಸಾಕುವನಿತಾ । ಧನಕನಕರಾಜ್ಯಾದಿವಿಷಯುವ ।
ದೆನಗೆಬೇಕಾಗಿಲ್ಲ ನಿಮ್ಮಡಿಗಂಡ ಮೇಲೆನಲು ॥
ಜನಪಕೇಳೈ ನೀನು ಮನುಜಾ । ವನಿಯೊಳಿನ್ನುಂಭೋಗಭಾಗ್ಯವ ।
ನನುಭವಿಸು ನೀಪಡೆದಫಲಗಳನೆಂದನಾಕರ್ತಾ ॥ ೨೦ ॥
ನಿನ್ನದರುಶನವಾದಬಳಿಕೆನ । ಗಿನ್ನುಲೌಕಿಕವೇಕೆಗುರುವೇ ।
ನಿನ್ನಚರಣದೊಳಿಟ್ಟುಕೋಯೆಂತೆಂದು ಧೊರೆನಮಿಸೆ ॥
ಬನ್ನವೇಕೆಲೆಭೂಪಕೇಳೆಂ । ದೆನ್ನುತಲಿಮುದಿದಾಚಕ್ಷುಜ್ಞಾನೋ ।
ತ್ಪನ್ನದರುವನು ಕೊಟ್ಟುಮತ್ತಿಂತೆಂದನಸುನಗುತ ॥ ೨೧ ॥
ಎಲೆನರೇಂದ್ರನೆ ಕೇಳುಮೊದಲೊಳು । ಲಲಿತಸದ್ಗುಣಿನೀನುಯತಿಗಡ ।
ಪೊಳೆವನಿರ್ಮಲತರ ಯತಿತ್ವವುಕೆಡಲುನೀನಿಂತು ॥
ಒಳೆವಮುಕ್ತಿಸ್ವಮದೆಯುನು ನೀ । ನೊಲಿಸಲಾಗದೆಮರಳಿದೈಭವ ।
ದೊಳಗೆಭೂಪತಿಯೆನಿಸಿದೈ ತಿಳಿಯೆಂದನಾಕರ್ತಾ ॥ ೨೨ ॥
ಶಮೆಯುಸಂತತವಿರಿಸುಬಿಡದಲೆ । ದಮೆಯುದೆಡಬಿಡದಿರಿಸುಲೋಕದಿ ।
ಮಮತೆಯೆಂಬುದ ವಿಷಯದಲಿಸಲೆನಾಶಗೈದಿರಿಸು ॥
ಸಮತೆಯೆಂಬುದನಿರಿಸುಸತತವು । ವಿಮಲಮಾನಸದಿಂದೆಭಕ್ತಿ ।
ಕ್ರಮವನಡೆಯಿಸಿ ಮುಕ್ತಿನೀಪಡೆಕೇಳುನಡೆಯೆಂದಾ ॥ ೨೩ ॥
ಗುರುವೆಸಕಲೈಸಿರಿಯುತಮ್ಮಯು । ಕರುಣದಿಂದೊರೆತಿಹುದುಗಡನಿಜ ।
ಚರಣಕರ್ಪಿತವಾಗಲೆನ್ನುತ್ತೆರಗಿಕೈಮುಗಿಯೆ ॥
ಧೊರೆಯೆತವರಾಜ್ಯಾದಿಸಂಪದ । ಸಿರಿಗೆಳಸಿಬಂದಿಲ್ಲಭಕ್ತನೆ ।
ಗುರುತಿಗಾಗಿರೆಬೇಳ್ಪನೈತಿಳಿಯೆಂದನಾಕರ್ತಾ ॥ ೨೪ ॥
ಕೊಡುಕರಾರಿಯು ನಿನ್ನ ಶಿಕ್ಷೆಯು । ಪೊಡವಿಗವತರಿಸಿಹಫಕೀರಗೆ ।
ಸಡಗರವುಬೇಕಿಲ್ಲವೆಂದನು ಕರ್ತಮುದಿಪಾಚ್ಛಾ ॥

ಅಡಿಗೆರಗಿತದ್ಭೂಪನೆರಡನು । ಕಡವುನಾಡದೆ ಕೊಟ್ಟುನಮಿಸಿರೆ ।
ಮೃಡಮಹಾತ್ಮನು ಹರಸಿ ಹೊರಟನು ಬಿಟ್ಟುತತ್ಪುರವಾ ॥ ೨೫ ॥
ಗುರುವಿನಾಟಕ್ಕರಸನರಸಿಯು । ಹರುಷಗೊಂಡಾತ್ಮದಲಿ ಸೋಜಿಗ ।
ವೆರೆದುಗುರುವಿನ ಧ್ಯಾನಮಾಡುವರಾದರವರಿತ್ತ ।
ಗುರುದಿಗಂಬರನಾದಕರ್ತನು । ಧರೆಯೊಳದ್ಭುತಲೀಲೆಯಲಿ ಸಂ ।
ಚರಿಸಲಾರಂಭಿಸಿದನಾಗುರು ಮಹಿಮೆಯೇವೇಳ್ವೆ ॥ ೨೬ ॥
ನರರುಗುರುವೆಂದೆನಿಸಿಮೆರೆವರು । ನರರುಗುರುವೆಂತಹರೊಜಗದಲಿ ।
ನರಗುರಿಗಳಾಟಕ್ಕೆ ನಗುವರು ಯಮನಕಡೆಯುವರು ॥
ನರರಸೇವೆಯಮಾಡುವರೆ ನರ । ಗುರಿಗಳಿಗೆ ಗುರುವೆನ್ನುವರೆ ಛೀ ।
ಪರಮಶಂಕರರೂಪಗುರುವಿಗೆ ನಮಿಸಿರೈ ನೀವು ॥ ೨೭ ॥
ಗುರುಕಟಾಕ್ಷದಿಸರ್ವಕಾರ್ಯವು । ಗುರುಕಟಾಕ್ಷದಿಸರ್ವಸಿದ್ಧಿಯು ।
ಗುರುಕಟಾಕ್ಷದಿಸರ್ವಮಂತ್ರವು ಫಲಿಸುವವು ಬಿಡದೆ ॥
ಗುರುಕಟಾಕ್ಷದಿಸರ್ವಯೋಗವು । ಗುರುಕಟಾಕ್ಷದಿನೆಲ್ಲಜ್ಞಾನವು ।
ಗುರುಕಟಾಕ್ಷದಿಸಿರಿಯುಸದ್ಗತಿಮುಕ್ತಿಯಾಗುವದು ॥ ೨೮ ॥
ಗುರಕಟಾಕ್ಷವುತಪ್ಪಿದರೆ ಸಿರಿ । ಸರಿವಳಾಸತಿಸುತರುಸಹಜಾ ।
ತರುಸಖಶಿರೋಮಣಿಗಳಾಪ್ತರುತ್ಯಜಿಪರಾತನಿಗೆ ॥
ನೆರೆಹೊರೆಯರೀಕ್ಷಿಸದಲಿರುವರು । ಸರಕುಗೈಯರುನೆಂಟರಿಷ್ಟರು ।
ದುರಿತಕರ್ಮಿಯ ಕೇಡುಸಾಧಾರಣವೆ ಧರಣಿಯಲಿ ॥ ೨೯ ॥
ಗುರವಿನೆಡೆಯಲಿಭಕ್ತಿಮಾಡದೆ । ಗುರುವಿನೆಡೆಯಲಿಸೇವೆಗೈಯದೆ ।
ಗುರುಕಟಾಕ್ಷವಪಡೆದುಕೊಳ್ಳದೆ ಬಿದ್ದುಕುಲಛಲಕೆ ॥
ಬರಿದೆವಾದವನಡಿಸಿತತ್ವದ । ತೆರವ್ರತಿಳಿದರೆಸಾಕುನಮಗಾ ।
ಗುರುವದೇತಕ್ಕೆಂದು ಜರಿವರು ಕುಜನರೆಂಬವರು ॥ ೩೦ ॥
ಅರಿದು ಸದ್ಗುರುಪಾದವಿಡಿಯದೆ । ಮರುಳುತನವನು ಬಿಟ್ಟುನಡೆಯದೆ ।
ಪರರಿಗುಪಕೃತಿಗೈಯದಲಹಂಕಾರದಲಿನಡೆದು ॥
ದುರಿತಕರ್ಮವನೆಸಗಿಬಿಡದೀ । ಧರಣಿಭಾರಕರಾಗಿ ಕೆಲವರು ।
ನರಕಕೇ ಗುರಿಯಾಗಿ ಬಳಲುತ ಮರಣಹೊಂದುವರು ॥ ೩೧ ॥

ಮೆರೆವಶಹರದರಾಜನಲಿ ಸ । ತ್ವರದಿ ಶಿಶುರೂಪಾಗಿತತ್ಕ್ಷಣ ।
ಕಿರದೆಶಿವಯೋಗೀಶನಾಗಿಯು ನೋಡುವಷ್ಟರಲಿ ॥
ವರಫಕೀರನುಮಾಗಿರಂಜಿಸಿ । ಗುರುತಿಗಾಗಿ ಕಠಾರಿಶಿಕ್ಕೆಯು ।
ನಿರದೆತಂದಿಹಗುರುಗೆಬೆಳಗಿರೆ ಮಂಗಳಾರತಿಯಾ ॥ ೩೨ ॥
ಸಾಸಿರಾನಾಮದಲಿ ಶೋಭಿಪ । ಭಾಷೆಘಾಲಿಪದೇವನೀನೈ ।
ಮೋಸಗಾರರಗಂಡಕರ್ತ ಪರಾಕುಮುದಿಪಾಚ್ಛಾ ॥
ಈಶನೈಪರಮೇಶನೈಜಗ । ದೀಶನೈನೀಮೂಲಪುರುಷನು ।
ದೂಷಕರವರಗಂಡಕರ್ತಪರಾಕು ಪ್ರಭುರಾಯ ॥ ೩೩ ॥
ಗುರುಮಹತ್ವದಸಾರವಿಂತಿದು । ಗುರುಮಹತ್ವಮನಂತಮಿರ್ಪುದು ।
ಗುರುಮಹತ್ವವನರಿದುಪೇಳುವರಾರುಲೋಕದಲಿ ॥
ಗುರುಫಕೀರೇಶ್ವರನುಗಂಗಾ । ಧರನಮುಖದಿಂ ಪೇಳಿಸಿದನೀ ।
ತೆರದಿಮುಗಿದುದು ಸಂಧಿನಾಲ್ಕನೆ ಯೆನಿಸುತಂದದಲಿ ॥ ೩೪ ॥

ಇತಿ ಶ್ರೀ ಶಿರಹಟ್ಟಿಪುರ ಶೂನ್ಯಸಿಂಹಾಸನಸ್ಥಾಪನಾಚಾರ್ಯ ಶ್ರೀ ಭಗವಾನ್ । ವಿಭೂನಾತ್ಮೀಯಗಂಗನಿಂ ಪೇಳಿಸಿದಪೌರಾಣದೊಳ್ ನಾಲ್ಕನೆಯ ಸಂಧಿ ಸಮಾಪ್ತ ಮಿಂತು ೨೪೩ ಪದ್ಯಂಗಳಿಗೆ ಮಂಗಲಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ



## ೫ನೇ ಸಂಧಿ

### ಕರ್ತರು ದಿಲ್ಲಿಯ ಲ್ಲಿ ತೋರಿದ ಮಹತ್ವ.

ಸಂಧಿ ಸೂಚನೆ—

ಹೋಗಿದಿಲ್ಲಿಗೆ ಮೂಲಕರ್ತನು । ಶ್ರೀಗುರುವುಶಾಂ ಬಾದಶಹನನು ।
ಬಾಗಿಸಿಯೆರಡುಬಿಲ್ಲಿತಂದನು ಕೇಳಿರೈಸೀವು ॥ಪಲ್ಲ॥
ವರ್ಣತತಿಯಲಿ ಮೇಲದಾವುದೊ । ವರ್ಣಿಪಡೆಗುರುಶಬ್ದ ಮಲ್ಲವೆ ।
ವರ್ಣಿಪರುಗಡ ಪಾರ್ವತೀಪರಮೇಶರದಃರವ ॥
ಪೂರ್ಣತೇಜಃಪುಂಜನಿಜಸಂ। ಪೂರ್ಣಸುಚಿದಾನಂದಮಹಿಮನ ।
ಬಣ್ಣಿಸಲ್ಕಳವಲ್ಲಹಿಡಿಯಿರಿ ಗುರುತುಗುರುವಿನದಾ ॥ ೧ ॥
ಗುರುವುಶ್ರೇಷ್ಠನುತಾಯಿಗಿಂತಲು । ಗುರುವುಶ್ರೇಷ್ಠನು ತಂದೆಗಿಂತಲು ।
ಗುರುವುಶ್ರೇಷ್ಠನು ಬಂಧುಬಳಗಕ್ಕಿಂತ ಬಹುಶ್ರೇಷ್ಠ ॥
ಗುರುವುಶ್ರೇಷ್ಠನುಮಿತ್ರಸಿಂದಲು । ಗುರುವುಶ್ರೇಷ್ಠನು ದೇವರಿಂದಲು ।
ಗುರುವಿನಾಗುರುತನ್ನುಹಿಡಿಯಿರಿ ಭಕ್ತರೆಂಬವರು ॥ ೨ ॥
ಬಾಯುಸವಿಯುವನಲ್ಲಜಗದೊಳು । ಬಾಯುಬ್ರಹ್ಮವನುಡಿವನಲ್ಲ ।
ನ್ಯಾಯಮಾಡುವನಲ್ಲಶ್ರೀಗುರು ನಿತ್ಯನಿರ್ಲಿಪ್ತ ॥
ಬಾಯುಬಡಿವವನಲ್ಲತನ್ನಾ । ದಾಯನೋಡುವನಲ್ಲಗಡಗುರು ।
ರಾಯನಡಿದಾವರೆಯ ಗುರುತನು ಹಿಡಿಯಿರೈಸೀವು ॥ ೩ ॥
ಗುರುವೆವಾಗ್ವರ ಗುರುವೆಶ್ರೀಪತಿ । ಗುರುವೆಸಾಂಬನು ಗುರುವೆದತ್ತನು ।
ಗುರುವೆಸಾಕ್ಷಾದ್ಬ್ರಹ್ಮಶರಣ್ಯೈಕಾಪ್ತನಿಜಕರ್ತ ॥
ಗುರುವಿನಿಂದಧಿಕಾವುದಿಲ್ಲವು । ಗುರುವಿನಿಂ ಹಿತರಾರದಿಲ್ಲವು ।
ಗುರುವಿನಿಂದುಪಕಾರಿಯಿಲ್ಲವು ಯಾವಲೋಕದಲಿ ॥ ೪ ॥
ಧರೆಯಮೇಲಣಸರ್ವಜೀವಿಗ । ಳರವನರಿವನು ತಾನುಶ್ರೀಗುರು ।
ಗುರುತುಹಿಡಿವನುಜಗದೊಳೆಲ್ಲರನಾತನೋಡುವನು ॥
ಗುರುತುಕೊಡದಲೆಜನಕೆ ತನ್ನಯ । ಕುರುಹುತೋರುತ್ತಾಡುತಿರುವನು ।
ಮರವಿಮನುಜರೆ ಗುರುತುಹಿಡಿಯಿರಿ ನೀವುಲೋಕದಲಿ ॥ ೫ ॥

ದುರಿತಸಂಸಾರದಲಿ ಮಾಯಾ । ಭರಿತರಾಗಿಯೆಬರಿದೆಕುಲಛಲ ।
ವೆರತುಮೆರೆವರನೀವುಕೇಳಿರಿ ಮುಂದೆಹೇಳುವುದಾ ॥
ಪರಮಪರಶಿವನಾದಕರ್ತನು । ಧರೆಯೊಳೆಲ್ಲೆಡೆಯಲ್ಲಿತಿರುಗು ।
ತ್ತಿರದೆವಿಂಧ್ಯಾಚಲಕೆಹೋದನು ತನ್ನಲೀಲೆಯಲಿ ॥ ೬ ॥
ಸಕಲದುಷ್ಟವ್ಯಾಘ್ರಸೂಕರ । ವೃಕಮಹೋರಗಶರಭಸಿಂಹ ।
ಪ್ರಕರಘೋರಾರಣ್ಯದಲಿಶ್ರೀಗುರುವು ಗಮಿಸುತಿರೆ ॥
ಅಕಟಪರಮಾತ್ಮಕನಗುರುನಾ । ಯಕನಸೂತ್ರವದೇತೊಶಿವಶಿವ ।
ಪ್ರಕಟವಿಂಧ್ಯಾಚಲದ ಮೃಗಗಳು ಬಂದುನಮಿಸಿದವು ॥ ೭ ॥
ನರಿಯಮುದ್ದಾಡಿದನುಕಪಿಗಾ । ದರಿಸಿದನುಗುರುಮೃಗವನಾತುರ ।
ವೆರಿಸಿಪದೆದಪ್ಪಿದನುಮೈದಡವಿದನುಸಿಂಹಸಿಗೆ ॥
ಕರಿಯಕರವನುಹಿಡಿದುಮಿಗೆಚ । ಪ್ಪರಿಸಿದನುಗಡಕರೆದುಹುಲಿಯನು ।
ಹರುಷದಲಿನಡೆನೋಡಿದನು ಸಾರಿದನುವನದೊಳಗೆ ॥ ೮ ॥
ಕರಿಯ ಹರಿಯನುಸಾರ್ದುಸ್ನೇಹಿಸೆ । ಹರಿಮಹಾಶರಭನಲಿಸೊಗಯಿಸು ।
ತಿರೆಶಿರೋದ್ವಯನಲ್ಲಿಶರಭನು ಸೇರಿಸುಖಿಸುತಿರೆ ॥
ಅರರೆಪುಲ್ಲೆಯುಪುಲಿಯುಬಳಿಯಲಿ । ಸರಸಗೊಳುತಿರೆಪರಮಯೋಗೀ ।
ಶ್ವರಗವನಮಧ್ಯದಲಿ ಹೊಕ್ಕನುಗುರುಮಹಾತ್ಮಕನು ॥ ೯ ॥
ಎಳೆಯಮಿಂಚನುಪೋಲ್ವಜಡೆಗಳ । ಬಳೆದಬೆಳುಮಿಸೆಗಳಭಸ್ಮೋ ।
ಜ್ವಲತ್ರಿಪುಂಡ್ರದಘನನಿಟಲರುದ್ರಾಕ್ಷಮಾಲೆಗಳಾ ॥
ಲಲಿತದಂಡದಯೋಗವಟ್ಟದ । ವಿಲಸದಜಿನದವಲ್ಕಲದಲಾ ।
ಗುಳದಮುನಿಗಳುನಮಿಸಿದರು ಬಹುವೇದಘೋಷದಲಿ ॥ ೧೦ ॥
ಗುರುಗಮಿಸುತಿರಲಲ್ಲಿಗಂಧ । ರ್ವರುನಮಿಸಿದರುಕಿನ್ನರರುನಲಿ ।
ದೆರಗಿದರುಪೊಡವಟ್ಟರಾಪೀಚರುನುತಿಸುತಲಿ ॥
ಸುರಮುನೀಂದ್ರರುಗರುಡಯಕ್ಷರು । ಸುರರುಸಿದ್ಧರುಚಾರಣರುಶ್ರೀ ।
ಗುರುವೆನೀಪರಮಾತ್ಮನೆಂದಭಿವಂದಿಸಿದರರರೆ ॥ ೧೧ ॥
ಇಳೆಯೊಳೆಲ್ಲೆಡೆಯಲ್ಲಿತೀರು । ತ್ತಿಳೆಗೆಸೊಂದಿದಸರ್ವಕ್ಷೇತ್ರಂ ।
ಗಳನುಪಾವನಗೈದುಬೋಧಿಸಿಸಾಧುಸಜ್ಜನರಾ ॥

ನಲಿದ ಭಕ್ತಿಗೆಬಿಡದೆಭಕ್ತರ । ಬಲವಹೆಚ್ಚಿಸಿಶರಣರಾಟ ।
ಕ್ಕೊಲಿದುಸಂಚರಿಸಿದನು ಶ್ರೀಗುರುವಲ್ಲಮಪ್ರಭುವು ॥ ೧೨ ॥
ಗುರುದಿಗಂಬರಕರ್ತನಾಪೀ । ಚರರತೆರದಲಿ ಗಗನದಲಿ ಸಂ ।
ಚರಿಸಿ ನೋಡಿದನವುಮ ಶೋಭಿಸಬಹಳದೇಶಗಳ ॥
ಸುರರು ಜಯಜಯವೆನಲುಕರ್ತನು । ಪರಮಶ ಕರೂಪದಲಿ ದಿಲ್ಲಿಯ ।
ಧೊರೆಯ ಶಿರದಲಿಹೋಗಿ ಕುಳಿತನು ನೆರೆದಸಭೆಯೊಳಗೆ ॥ ೧೩ ॥
ಬೆರಗುಗೊಂಡುದು ರಾಜಸಭೆಯುದು । ಧೊರೆಯ ಶುಭಸೂಚಿತವೃತನಗೆಂ ।
ದರಿದುಚಕ್ಕನೆ ಪಿಡಿದನಾಶುಕರೂಪಪರಶಿವನ ॥
ಹರುಷದಲಿತದ್ರಾಜಕೀಯರಿ । ಗಿರದೆತೋರುತೆಬಾರಬಾರೆ ।
ನ್ನರಗಿಳಿಯೆ ಮುದ್ದುಭಾಪುಸಿಲುಕಿದೆಬಿಡೆನುನಿನಗೆಂದಾ ॥ ೧೪ ॥
ಮಿಂಚಿನಂತಿದೆನಿನ್ನಕಳೆಯುದು । ಚಂಚಲನೆ ನೀನಿಂದು ನನ್ನನು ।
ವಂಚಿಸಿಯೆ ಬಳಲಿಸವೆ ಕೈ ಸೆರೆವಿಡಿದು ನಿನಗಿನ್ನು ॥
ವಂಚಿಸುವೆನಾನೆಂದು ನುಡಿಯುತೆ । ಪಂಚವರ್ಣದ ಶುಕನರೂಪದ ।
ಪಂಚಮುಖಪರಮಾತ್ಮಕಾಣಿಸದಾದನಾಕ್ಷಣಕೆ ॥ ೧೫ ॥
ಪರಮಭಕ್ತರೆನೀವುಕೇಳರಿ । ಗುರುಫಕೀರೇಶ್ವರನುಕರ್ತನು ।
ಧೊರೆಗೆತಾನಾತೆರದಿತೋರುತ್ತದಗಲಾಸ್ಪದನು ॥
ಹರುಷಗೆಟ್ಟರಮನೆಗೆಬಂದನು । ಕರಿಸಿಕೊಂಡನು ಬೀರಬಲ್ಲನ ।
ಬೆರಗಲಾಗಿಳಿಯಾಟವಕ್ಕಟನೋಡಿನ್ನೆಯೆಂದಾ ॥ ೧೬ ॥
ಗುರುಫಕೀರನು ಕರುಣದಿಂಕಿರಿ । ಕರನಿಗೀಪರಿತೋರ್ದನಲ್ಲದೆ ।
ತರುಫಲಂಗಳತಿಂಬಮರಗಿಳಿಯೂಟವೇನಲ್ಲ ॥
ಗುರುವಿನಂ ಮರೆದಿನ್ನವರ ಮಿ । ದೊರೆತನಕೆ ಬೆರೆತಿಹೆವುನಮಗಾ ।
ಗುರುವೆಯೆಚ್ಚರ ಗೊಟ್ಟನಲ್ಲವೆ ಹೇಳಿದೈಯೆಂದಾ ॥ ೧೭ ॥
ನರತನುವದತ್ಯಧಿಕವಿದರೊಳ । ಗರುವಿನಲಿಶ್ರಿಪರಮಗುರುವಿನ ।
ಗುರುತುಹಿಡಿದುರೆ ಸೇವೆಗೈದೊಡೆಜನ್ಮಸಾರ್ಥಕವು ॥
ಗುರುವಿನಂತಃಕರಣಸಿನ್ನೊಳು । ಭರಿತವಾಗಿದೆಶಂಕೆಯಿಲ್ಲವು ।
ಧೊರೆಯೆನೀನಾಗುರುವರನನೆನೆಯೆಂದನಾಮಂತ್ರಿ ॥ ೧೮ ॥

ಪರಮಸಚಿವನವಾತಿಗಕಬರ । ಹರುಷದಿಂದೊಡಬಟ್ಟುಶೀಘ್ರದೊ ।
ಳಿರವಲಾತನಕಳ-ಹಿಮಣಿಪರಿಯಂಕದಲಿಕುಳಿತು ॥
ಕರೆದುತನ್ನಯಪಟ್ಟದರಸಿಯ । ಸರಿಸದಲಿಕುಳ್ಳಿರಿಸಿಕೊಂಡಾ ।
ಪರತರದಶಕಲೀಲೆಯನುಸಲೆಹೇಳತೊಡಗಿದನು ॥ ೧೯ ॥
ಅನಿತರೊಳಗೇಗುರುಫಕೀರನು । ಜನಪನಿಗೆವೈನೋರಲಾತನು ।
ವಿನಯಿತಂತಾನಾಗಿಗುರುಪದವಿಡಿದುಸೇವಿಸುತಾ ॥
ಜನುಮಯಾತ್ಮನೆನಿನ್ನಲೀಲೆಯ । ಘನತೆಯಂತೋತಿಳಿಯದೀಭ ।
ಕ್ತನಿಗೆಪೊಸತಾಯ್ತೆನುತಪೇಳ್ದನುಗಿಳಿಯಸಂಗತಿಯಾ ॥ ೨೦ ॥
ಧರಣಿಪತಿಯೇಕೇಳುಗುರುವನು । ಮರೆಯಬಹುದೇರಾಜ್ಯಸಂಪದ ।
ಸಿಂಗೆವೋಹಿಸಿಕೆಡುವರೇನೈಭಕ್ತರೆಂಬವರು ॥
ಗುರುವುಸ್ಮೈರಣೆಗೊಂಬನೇಶ್ರೀ । ಗುರುವನೀಂಮರೆತಿಲ್ಲವೇಗುರು ।
ಕರುಣದಿಂದೆಚ್ಚರಿಕೆಕೊಟ್ಟಪನೆಂದನಾಕರ್ತಾ ॥ ೨೧ ॥
ಶರಣವತ್ಸಲನಾದಸದ್ಗುರು । ವಿರದೆತಾನೊಲೆದಿಂತುಪೇಳು ।
ತ್ತಿರಲಿಕಕಬರನೆರಗಿದನುಗುರುಪಾದಪದ್ಮದಲಿ ॥
ಧೊರೆತನಕೆಬೆರೆದಿರ್ದೆನೈನಾ । ಗುರುವೆತಾವೆಚ್ಚರಿಸಿದಿರಿಗಡ ।
ಕರುಣದಲಿತಾವ್ಬಂದಿರೈನಾಧನ್ಯನೆಂದೆನುತಾ ॥ ೨೨ ॥
ಅರಸನಾಗುರುಪದಕೆಸಲೆಸ । ತ್ಕರಿಸುತಂದದಿಸೇವೆಮೂಡುತೆ ।
ಕರವಮುಗಿಯುತ್ತೆಂದನಾಗುರುನಾಥನಂಘ್ರಿಯಲಿ ॥
ಸಿರಿಯುಸಂಪದವೆಲ್ಲತಮ್ಮಯ । ಚರಣಕೊಪ್ಪಿಸಿಬಿಡುವೆತಾವು ।
ದ್ಧರಿಸಿರಕ್ಷಿಪುದೆನಗೆಕರುಣಿಪುದೆಂದುಮರೆಯಿಡಲು ॥ ೨೩ ॥
ವರಫಕೀರನರೂಪವಡಗಿಸಿ । ವರದಕರ್ತನುಪಾಚ್ಛನೆದುರಿಗೆ ।
ಪರಮಜಂಗಮನಾಗಿತೋರುತ್ತೆಂದನಸುನಗುತಾ ।
ಆರಸಕೇಳೈನಿನ್ನಭಕ್ತಿಗೆ । ಗುರುವುದರ-ಶನಕೊಟ್ಟನೀತೆರ ।
ವರಿತುಕೋನೀನೆಂದಗೋಚರನಾಗುತಂಕರ್ತಾ ॥ ೨೪ ॥
ಧೊರೆಯೆಕೇಳೈಕೇಳಿನಡಿಯೈ । ಬರಿಯಮಾಯಾಭ್ರಾಂತಿಯಲಿಕೆಡ ॥
ದಿರುಫಕೀರನಮರೆಯಬೇಡೆಂತೆಂದುನುಡಿಯುತಲಿ ॥

ತಿರುಗಿತಾನುಫಕೀರನಾಗಿರೆ । ಬೆರಗುವಟ್ಟಾ ರಾಜನಾಗಳೆ ।
ಶಿರವಬಾಗಿಸಿಬಿದ್ದನಾವುದಿಪಾಚ್ಛನಡಿಗಳಿಗೆ ॥ ೧೫ ॥
ಧೊರೆತನವನನುನಯದಿನಡೆಯಿಸಿ । ಪರಮಗುರುವಿನಸೇವೆಮಾಡೀ ।
ದುರಿತಕರ್ಮದೊಳೇನುಫಲವಿಲ್ಲೆನುತಲಾಕರ್ತಾ ॥
ಒರೆಯುತಿರಲಾಬರನುಸಂತಸ । ಭರಿತನಾಗಿಯೆಕರ್ತನಂಘ್ರಿಯೊ ।
ಳಿರದೆಬಿನ್ನಹಮಾಡಿದನುಸ್ವೀಕರಿಸೈಮುಂದೆ ॥ ೧೬ ॥
ಗುರುವೆತಮ್ಮಯಪಾದಪದ್ಮ । ಕ್ಕರಿಕೆಗೈಯುವದೊಂದುಮಾತಿಹು ।
ದೊರೆವೆನದುಪಾದಾಜ್ಞೆಯಾದೊಡೆಕೇಳ್ವೆನೆಂದೆನಲು ॥
ಅರಿದುಭ ನಮನದಭಾವವ । ನರಿಯದಂತೆಯೆಕರ್ತನುಡಿದನು ।
ಧೊರೆಯೆಹೆದರದೆಹೇಳದೇನಿಹುದೆಂದನಸುನಗುತಾ ॥ ೧೭ ॥
ಗುರುವೆತಾವುಫಕೀರರಿರ್ದೀ । ಧರೆಗೆಶಿವರೂಪವನುನನಗೀ ।
ಚರಣಭಕ್ತಂಗಾ ತಲೀಲೆಯೊಳಿಂದುತೋರಿದಿರಿ ॥
ಗುರುವೆತಾವ್ ಶಿವರೂಪರಾದೊಡೆ । ಪರಮತಕೆ ಗುರುವೆನಿಪುದಚ್ಚರಿ ।
ಕರುಣದಿಂದಲೆತಿಳಿದುಪಾಲಿಪುದೆಂದನಕಬರನು ॥ ೧೮ ॥
ಅರಸನೇಸದ್ಭಕ್ತನೇನೀ । ನರಿದುದಿಲ್ಲವೆಮರುಳೆಲೌಕಿಕ ।
ದಿರವುಬೇರಿದುಪಾರಮಾರ್ಥವು ಬೇರೆತಾಸಿಹುದು ॥
ಗುರುವುಸರ್ವರಿಗೊಬ್ಬನೇಶ್ರೀ । ಗು ವುಪರಶಿವನಾತನಾಟವು ।
ಮರುಳರಿಗೆತಿಳಿಯಲ್ಕಸಾಧ್ಯವದೆಂದನಾಕರ್ತಾ ॥ ೧೯ ॥
ಹಲವುಮತಗಳತೋರುವಿಕೆಗೀ । ಹಲವುಗುರುಗಳತೋರುವಿಕೆಗೀ ।
ಹಲವುದೇವರತೋರುವಿಕೆಗಿದುಮೂಲವಾಯ್ತಿದಾ ॥
ಮಲಿನಸತ್ವವನರಿಯುವಿಗೆನಿ । ರ್ಮಲಿನನಾದೊಡೆನಿನಗೆಜಗಾ ।
ಹೊಲಬುತಿಳಿವುದುನೃಪನೆಕೇಳ್ಳೆಯೆಂದುಗುರುನುಡಿದಾ ॥ ೨೦ ॥
ಗುರುವುಸರ್ವಾಂತರ್ಯನಾತನೂ । ಳಿರುವವೈಬ್ರಹ್ಮಾಂಡಕುಲಗಳು ।
ಗುರುಕಣಾನರನಲ್ಲಮೃತ್ಯುಂಜಯನುಜಗದೀಶ ॥
ಧರೆಯೊಳಾಡುವಶಿವನಶರಣರು । ಗುರುವಿನಾಟವನರಿವರಲ್ಲದೆ ।
ನರರಿಗೇಂ ತಿಳಿಯುವದನೀಂ ತಿಳಿಯೆಂದನಾಕರ್ತಾ ॥ ೨೧ ॥

ಅವರವರಬಗೆಯಂತೆಶ್ರೀಗುರು । ವವರವರಿಗವರಂತೆತೋರುವ ।
ರವರವರ ನೆನೆದಂತೆಪಾಲಿಪನೊಲಿದು ಭಕ್ತರನು ॥
ಭುವನದಲಿಬಹುಲೀಲೆಯಲಿನಿಜ । ವಿವಿಧರೂಪವನಾಂತುಬೆಳಗುವ ।
ಶಿವನೆಶ್ರೀಗುರುವೊಬ್ಬನಲ್ಲದಲಿಬ್ಬರಿಲ್ಲೆಂದ ॥ ೩೨ ॥
ಗುರುವಿನಾಮುಡಿಗರಸನಕ್ಕರ । ವೆರದುಭಕ್ತಿಸ್ಫುರಣದಲಿತಾ ।
ನೆರಗಿಗುರುಚರಣಕ್ಕೆಪ್ರಾರ್ಥನೆಮಾಡಿದನುಮತ್ತೆ ॥
ಗುರುವೆಲೌಕಿಕಗುರ ವೃತಾಂತ । ಲ್ಲರಿದೆನಿಸಿದನೆನ್ನೊಳಗೆತಾವೀ ।
ಧರೆಯೊಳವತರಿಸಿರ್ಪಕಾರಣವೇನಿದ್ಯೆಯೆಂದಾ ॥ ೩೩ ॥
ಪರಮಭಕ್ತರೆನೀವುಕೇಳಿರಿ । ಧೊರೆಯಪ್ರಾರ್ಥನೆಗೊಲಿದುಕರ್ತನು ।
ಹರುಷದಲಿಹೇಳಿದನುತಾನವತಾರಕಾರಣವಾ ॥
ಮರವಿಯಲಿಮಾನವರುಕೆಡುತಿರ । ಲರವುಪುಟ್ಟಿಸಲೆಂದುಸಾಂಬನು ।
ಧರೆಯೊಳವತರಿಸುವನು ಪೇಳುವೆಮತ್ತೆಕೇಳೆಂದಾ ॥ ೩೪ ॥
ಗುರುವಿನೊಳಗೇನುಂಟುಜಗದೊಳ । ಗಿರುವನೇಶಿವಸಾಂಬಸದ್ಗುರು ।
ಧರೆಯುದೇವರಮಹಿಮೆಯೇನಿಹುದೆಂದುದುರ್ಜನರು ॥
ಜರಿಯುತಿರೆಸೈರಿಸದೆಸದ್ಗುರು । ಧರೆಯೊಳವತಾರವನುಮಾಡುವ ।
ಗುರುಮಹತ್ವವತೋರಿವಿಟ್ಟುವನೆಲ್ಲನಿಂದಕರಾ ॥ ೩೫ ॥
ದುರಿತಕರ್ಮವನೆಸಗದುಷ್ಟರು । ಧರಣಿಭಾರಕರಾಗೆತಡೆಯದೆ ।
ಮೊರೆಯನಿಡೆಭೂದೇವಿಕರುಣಾಕರನುಜಗದೀಶ ॥
ನರಶರೀರವನಾಂತುಕುಜನರೋ । ತ್ಕರವಬಹುತಂತ್ರದಲಿಖಳೆಸಂ ।
ಹರಿಸಿಭೂಭಾರವನು ಬಿಡದಳಿಸುವನುತಿಳಿಯೆಂದಾ ॥ ೩೬ ॥
ಕೇಳಿರೈಗುರುಲೀಲೆಗ ಭೂ । ಪಾಲಕನು ಬೆರಗಾಗಿಪರಶಿವ ।
ಲೀಲೆಯೆಂದೊಳಗರಿದುನಿಶ್ಚಯಿಸಿದನುನಿಷ್ಠೆಯಲಿ ॥
ಹೇಳಿಕೊಂಡನುಗುರುವೆತಪ್ಪಯ । ಲೀಲೆನೋಡಿವಬಳಿಕಲೋಕದ ।
ಕೀಳವಿಷಯವುವಿಷವದೆನಿಸದೆಸಾಕುಬಿಡಿಸೆಂದಾ ॥ ೩೭ ॥
ಬಿಡಿಸಲಳವಲ್ಲಕಟಬಾಳ್ಕೆಯ । ಕೆಡಿಸುವದು ಸರಿಯಲ್ಲಲೌಕಿಕ ।
ವಿಡಿದುತ್ಯಜಿಸುವಮುಂಟೆಗುಣಿಗಳಿನೀವುಭುಜಬಲರು ॥

ಪಡೆದಸಕಲೈಸಿರಿಯಸುಖವನು । ಪಡೆಯದಲೆಗುಣಹೀನಗುರುವಿನೊ ।
ಳ್ ಇಡವೆರೆವುದಲ್ಲೆಂದುನುಡಿದನುಕರ್ತನಕಬರಗೆ ॥ ೩೯ ॥
ಸೊಗಯಿಸುವಸಾಮ್ರಾಜ್ಯಲಕ್ಷ್ಮಿಯು । ನಗಲಬಹುದೇಸಾರ್ವಭೌವುನೆ ।
ಜಗದೊಳೀ-ತಿದೇವಿಯಂತಿಹನವ್ಯರಾಣಿಯರ ॥
ಅಗಲಿನೀಬರಬಹುದೆನೋಡೈ । ನಗೆಬರುತಲಿದೆನಿನ್ನವೂಕಿಗೆ ।
ಮಗನೆನಿನಗೀಬುದ್ಧಿಬೇಡೈಯೆಂದನಾಕರ್ತಾ ॥ ೩೯ ॥
ನೋಡೆನಿನ್ನೀಸಕಲಸಿರಿಯನು । ನೀಡುವೆನುನಿಜಪದಕೆನ ಸುರೆ ।
ಕೊಡುವೆನುಸದ್ಗುರುವೆಪಾಲಿಸುಭಕ್ತನಿಚ್ಛೆಯನು ॥
ದೂಡದಿರುಭವದಲ್ಲಿತವುಗಾಂ । ಬೇಡಿಕೆಂಜೆನುಗುರುವೆ ಮತ್ತೀ ।
ರೂಢಿಯೊಳಗಿಡಬೇಡಿರೈಯೆಂತೆಂದನಕಬರನು ॥ ೪೦ ॥
ದುಗುಡಮನವೇಕರಸಬಿಡುಬಾ । ಧೆಗಳುಬಾಧಿಸಲಾರವೈನಿನ ।
ಗಗಲದಿರುವನುಗುರ ವುರಾಜಶ್ರೀಯಭೋಗದಲಿ ॥
ಪಗಲಿರುಳುಗುರುಭಜನೆಯಲಿಬಗೆ । ಬಗೆಯಪುಣ್ಯದಕೃತ್ಯದಲಿ ಲೆ ।
ಸೊಗಯಿಸೈನೀನೆಂದು ಕರ್ತನುಪೇಳ್ದನಕಬರಗೆ ॥ ೪೧ ॥
ತಾತಕೇಳೀಭಕ್ತಗೀವಸು । ಧಾತಳದೊಳನ್ನೇನುಸೊಗಸದು ।
ಘಾತಿಸುತ್ತಿವೆಲೌಕಿಕದಬಹುವಿಧದುಪಾಧಿಗಳು ॥
ಈತೆರದೊಳಿರಬಲ್ಲೆನೇನಾ । ನೇತಕೆನಗಿಲ್ಲಿಡು ದೆನುತಿರೆ ।
ನೀತಿವಂತಗೆಭೀತಿಯೂಕೈಯೆಂದನಾಕರ್ತಾ ॥ ೪೨ ॥
ಅರಸನೀಂಸದ್ಭಕ್ತನಾದೊಡೆ । ಗುರುವಿನಾಜ್ಞೆಯವಿರಬೇಡೈ ।
ಗುರುವುಪೇಳಿದತೆರದಿನಡೆನೀಸಾಕುಜಗದೊಳಗೆ ॥
ಗುರುಫಕೀರನುನಿನಗೆಪೊರೆವನು । ಗುರುಸಮರ್ಥನುನಾ ಾಡುವ ।
ನರಿದುಕೊಳ್ಳಿನೀನೆಂದ ನುಡಿದನು ಶ್ರೀ ಫಕೀರೇಶ ॥ ೪೩ ॥
ಪರಶಿವನಘನಲೀಲೆಯಲಿನಿಜ । ವಿರುವದದರೊಳಗೆಲ್ಲಸಂಪದ ।
ವಿರುವದದುದೊರೆದಪುದುಗುರುಕೃಪೆವಡೆದಭಕ್ತರಿಗೆ ॥
ಗುರುವ್ರೊಲಿದ ಕೊಟ್ಟದಕೆನೀಜೇ । ಸರಿಸುವದುತರವಲ್ಲನಿನಗಾ ।
ಪರಶಿವನುತಾನೊಲಿಯಸಿದನರಿಯೆಂದನಾಕರ್ತಾ ॥ ೪೪ ॥

ಭೂಪಕೇಳ್ಭೂದೇವಿತಾಂಸಂ। ತಾಪಗೊಳ್ಳದಮೊಳ್ಕೆಯಲಿನೀ।
ಸೋಪಚಾರದಕೃತ್ಯದೊಳಗಿರುದುಷ್ಟರಸುಬಿಡದೆ ॥
ಘೂಪವೆನ್ನದೆದಂಡಿಸುತ್ತಿರು। ಕೋಪದಿಂಬಳಲಿಸದೆಜನರಿಗೆ।
ಸೈಪಿನಧ್ವದೊಳೆಸೆಯ ತಿರುನೀನೆಂದನಾಕರ್ತಾ ॥ ೪೫ ॥
ಅರಸಕೇಳೈನಿನಗೆನಿಜಗುರು। ವರಮೆಚ್ಚಿಸಿಂತುನಿನ್ನಯ।
ಸಿರಿಯಪೇಳುವದೇನುಭಕ್ತನೆನಿಜಮನೋರಥವು ॥
ಗುರುಕರುಣಾಕಟಾಕ್ಷದಿಂದಲಿ। ತ್ವರಿತದಲಿಕೊನೆಗಾಣುವದುಗಡ।
ಧೊರೆಯೆಚಿಂತಿಸಬೇಡಶಿವಸುಖದಲ್ಲಿಬಾಳೆಂದಾ ॥ ೪೬ ॥
ಹರುಷದಿಂದಿರುಬಾಳ್ವಯಲಿಶಂ। ಕರನುನಿನ್ನಯಭಕ್ತಿಗೊಲೆದನು।
ಮರುಳತನಬೇಡಿನ್ನುನಿನ್ನೈಶ್ವರ್ಯವದುನಿನಗೆ ॥
ಇರಲಿಬೇಡದುಬೇಳ್ಪಗುರುವಿಗೆ। ದೊರೆಯೆಕೊಡುರಣಬಿಲ್ಲಿಯೆನಲಕ।
ಬರನುತಾನದನಿತ್ತುವಿನಮಿತನಾದನಾಕ್ಷಣಕೆ ॥ ೪೭ ॥
ಅರಸಕೇಳೀಬಿಲ್ಲಿಯದುಗುರು। ಪರಮಲೀಲೆಗೆಸಾಕ್ಷಿಯೆನಿಸಲಿ।
ನಿರುತವೊಪ್ಪಲಿಶ್ರೀಫಕೀರನಚರಣಕಮಲದಲಿ ॥
ಬಿರುದುತಾನೆಸಿಸಿರಲಿನಿನಗೀ। ಗುರುವುಬೆಸನಾಗಿರ್ಪಸುಕಥಾಂ।
ತವುಶ್ರುತಿಯೊಳಗಿರಲಿನಿತ್ಯದೊಳೆಂದನಾಕರ್ತಾ ॥ ೪೮ ॥
ಎಂದುಸಂತಸಬೀರಿಭಕ್ತನಿ। ಗಂದುತನ್ನಯತಂತ್ರವೊತ್ರದಿ।
ಮುಂದೆಜಗದೊಳಗಿನ್ನುನಡಿಸುವಲೀಲೆಯುಂಟೆನುತಾ ॥
ಕುಂದದಿರನಿಜಭಕ್ತಗುರುಕೃಪೆ। ಯಿಂದೆರಕ್ಷಿಪನೆಂದುತಿಳಿನೀ।
ನೆಂದೆನುತರಣಬಿಲ್ಲಿಯನುಕೈಕೊಂಡನಾಕರ್ತಾ ॥ ೪೯ ॥
ಹರಸಿತದ್ಭೂಪಾಲನಿಗೆಗುರು। ವರನುಕಳುಹಿಸಿಕೊಂಡುಹೊರಟನು।
ಚರಿಸುತತಿವಾಯದಲಿನಡೆದನುಪೇಳಲೇನದನು ॥
ಪರಮಭಕ್ತರೆನೀವುಕೇಳಿರಿ। ಗುರುವುತಾಮುರೆಯಾಗೆಕಣ್ಣಿಕ।
ಬರನುಗುರುಚಿಂತೆಯಲಿನಡೆವುತೆಹೋದನರಮನೆಗೆ ॥ ೫೦ ॥
ಪರಮಗುರುವೇಸಲಹುಸಲಹೆಂ। ದೆರಗುತಲಿಕರಗಳನುಮುಗಿಯುತೆ।
ಕರುಣಿಸೆನಗೆನ್ನುತ್ತೆಗುರುಪಾದಕ್ಕೆಮೊರೆಯಿಡುತ ॥

ಪರಿಪರಿಯಸತ್ಕಾರನಡಿಸು । ತ್ತ್ರರವುಹಿಡಿದುರೆರಾಜ್ಯವಾಳು ।
ತ್ತಿರುತಲಿದ್ದನುಭೂಪನಕಬರನಾತಗೆಣೆಯುಂಟೆ ॥ ೫೧ ॥
ಗುರುಪ್ರಸನ್ನತೆಪಡೆದನಾದೊಡೆ । ಕೊರತೆಯೇನಹುದೈಯ್ಯಭಕ್ತಗೆ ।
ದೊರಕುವನುಸತ್ಕೀರ್ತಿಸುಖಸಂಪದವುಪೊಡವಿಯಲಿ ॥
ಪರದೊಳಾಸದ್ಗತಿಯುಶಂಕರ ।ಚರಣಸನ್ನಿಧಿನಿತ್ಯಸೌಖ್ಯವು ।
ದೊರೆಯುವದುಗಡಧನ್ಯರೈನಿಜಭಕ್ತರಾದವರು ॥ ೫೨ ॥
ಧರೆಯ ಮನುಜರೆನೀವುಕೇಳಿರಿ । ನರಜನುಮದೊರೆತಿಹುದುನಿಮಗೀ ।
ಶ್ವರನಕೃಪೆಯಿಂತಿಳಿದರಿಂದಿದತಿಳಿಯಿರೈನೀವು ॥
ದುರಿತಸಂಸಾರದಲಿಕ್ಷಣ ಭಂ । ಗುರವುಗಡನಿಷ್ಪಾಪಕೃತ್ಯವ ।
ಧರಣಿಗೆಂದಿಗುಮಾಡಬೇಡಿರಿಜೋಕೆಬಲುಜೋಕೆ ॥ ೫೩ ॥
ಸಾಲದೇಬಹುತರದಭವಗಳ । ಮೇಳದಲಿಮುನ್ನಖಿಳನರಕದ ।
ಹಾಳಿಯಲಿಗೋಳಿಟ್ಟುಭೋಗಿಸಿಬಂದುದೀಜನುಮ ॥
ಮೇಲುಮೇಲಿದುಮನುಜಜನ್ಮವು । ಲೋಲರಾಗದೆವಿಷಯದಲಿ ನೀ ।
ಪಾಲಿಸಿರಿಸದ್ಗತಿಗೆಸಾಧನೆಮಾಡಿರೈಬಿಡದೆ ॥ ೫೪ ॥
ಎಲ್ಲಯೋನಿಗಳಲ್ಲಿಪುಟ್ಟಿ । ದೆಲ್ಲಯೋನಿಗಳಲ್ಲಿಬಳಸಿ ।
ದೆಲ್ಲಕರ್ಮಂಗಳನುಮಾಡಿರ್ದಂತುಮಲ್ಲದಲೆ ॥
ಎಲ್ಲತಳದೊಳಗಾಡಿಕೂಡಿ । ದೆಲ್ಲಭಾಷೆಯನಾಡಿದೂರಿ ।
ದೆಲ್ಲಭೋಗಿಸಿಕಡೆಗೆಬಂದಿಹುದರಿವಿನೀಜನುಮ ॥ ೫೫ ॥
ನರಕಿಸ್ವರ್ಗಿಗಳೆಂದವನು ಸ । ದ್ಗುರುವುತೋರಿಸುತಿಹನುಜಗದಲಿ ।
ಮರುಳರರಿಯದೆನರಕಸ್ವರ್ಗಗಳೆಂತೊಯೆನುತಿಹರು ॥
ಪರಿಪರಿಯ ಹೇಸಿಕೆಯೊಳಾಡು । ತ್ತಿರುವಹುಳಗಳೆನರಕಿಗಳುಗಡ ।
ಮೆರೆವತಾರೆಗಳೆಸೆವಸ್ವರ್ಗಿಗಳೆಂದು ತಿಳಿಯುವದು ॥ ೫೬ ॥
ದುರಿತಕರ್ಮವಮಾಡಿದಾತಗೆ । ನರಿಯಜನ್ಮವೊಶುನಕಜನ್ಮವೊ ।
ಕರಡಿಜನ್ಮವೊಕಪಿಯಜನ್ಮವೊಕರ್ಮಫಲದಂತೆ ॥
ಕರಿಯಜನ್ಮವೊವ್ಯಾಘ್ರಜನ್ಮವೊ । ಸರ್ಪಜನ್ಮವೊಮೇಣುತಾಸೂ ।
ಕರನಜನ್ಮವೊಪಾಪಹರಹರತಿಳಿವುದಸದಳವು ॥ ೫೭ ॥

ಮುನಿಗಳಗೆಕಳೆಗೊಡುವಗುರುವಿಗೆ । ನೆನೆವಭೂಮಿಗೆಮೋದಗೊಡುವಗೆ ।
ಜನಪರಾಸ್ಥಾನದಲಿಮಹಿಮೆಯತೋರ್ಪಗುರುವರಗೆ ॥
ಜನರಮನದಂತಿರುವತಂತ್ರಗೆ । ಜನನಮರಣಾದ್ಯಂತರಹಿತಗೆ ।
ಘನಫಕೀರೇಶಂಗೆಬೆಳಗಿರಿಮಂಗಳಾರತಿಯಾ ॥ ೫೮ ॥
ಎರಗೆವಿಂಧ್ಯಾಚಲದಬಹುಭೀ । ಕರಮೃಗಂಗಳುಹಿಡಿದುನಲಿದೈ ।
ಕರುಣಿಸಪೂರ್ಣಂಕರ್ಯಕರ್ತಪರಾಕುಮುದಿಪಾಚ್ಛಾ ॥
ಮರವಿಗರವನುಕೊಟ್ಟುದಿಲ್ಲಿಯು । ಧೊರೆಯರಣಬಿಲ್ಲಿಯನುತಂದ್ಯೆ ।
ಧರೆಗನಾದಿಫಕೀರಕರ್ತಪರಾಕುಪ್ರಭುರಾಯಾ ॥ ೫೯ ॥
ಗುರುಮಹತ್ವದಸಾರವಿಂತಿದು । ಗುರುಮಹತ್ವಮನಂತವಿಪ್ಪುದು ।
ಗುರುಮಹತ್ವವನರಿದುಪೇಳುವರಾರುಲೋಕದಲಿ ॥
ಗುರುಫಕೀರೇಶ್ವರನುಗಂಗಾ । ಧರನಮುಖದಿಂ ಪೇಳಿಸಿದನೀ ।
ತೆರದಿಮುಗಿದುದು ಸಂಧಿಯೈದನೆ ಯೆನಿಸುತಂದದಲಿ ॥ ೬೦ ॥

ಇತಿ ಶ್ರೀ ಶಿರಹಟ್ಟಿಪುರ ಶ್ರೀ ನೃಸಿಂಹಾಶ್ರಮಸ್ವಾಮಿನಾಂ ಕರ್ತ ಶ್ರೀ ಭಗವಾನ್ । ವಿಭು ವಾಕ್ಯೀಯುಗಂಗನಿಂ ಪೇಳಿಸಿದಪುರಾಣದೊಳ್ ಐದನೆಯ ಸಂಧಿ ಸಮಾಪ್ತ ಮಿಂತು ೩೦೩ ಪದ್ಯಂಗಳಿಗೆ ಮಂಗಲಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ

## ೬ನೇ ಸಂಧಿ.

### ಕರ್ತರು ಅವ್ವಲಿಂಗವ್ವನಿಗೆ ಕರುಣಿಸಿದ್ದು.

ಸಂಧಿ ಸೂಚನೆ
ಮೃಡಮಹಾತ್ಮನುಗುರುಫಕೀರನು । ದೃಢವಿಡಿದುಮಾಡಿರುವಸೇವೆಗೆ ।
ಬಿಡದೆಲಿಂಗವ್ವನಿಗೆ ಕಾಮ್ಯವನಿತ್ತುಸಲಹಿದನು ॥ ಪಲ್ಲ ।
ತನ್ನಧ್ವಜವನು ನಿಲ್ಲಿಸುವನುರೆ । ತನ್ನಬಿರುದನುಮೆರಿಸುವನುಗಡ ।
ತನ್ನಕಾರಣಕಾರ್ಯ ಮೊಳ್ಪನುಭಕ್ತರೊಡಗೂಡಿ ॥
ತನ್ನಲೀಲಾಮಾತ್ರದಿಂದಲೆ । ಕುನ್ನಿಮನುಜರನೊರಸಿಬಿಡುವನು ।
ನನ್ನಿಯಿದುನೀವ್‌ಗುರುತುಹಿಡಿಯಿರಿಪರಮಗುರುವಿನದ ॥ ೧ ॥

ಮಿತಸುಭಾಷನುವೂಗಿಸುಜನ । ಸ್ತುತಿಗೆಸಮ್ಮತನಾಗಿಸದ್ಗುಣ ।
ತತಿಗೆತೃಪ್ತನುವೂಗಿಸಂತತಕೀರ್ತಿಯುತನಾಗಿ ॥
ಹತವಿಮೋಹನುವೂಗಿಧಾತ್ರಿಗೆ । ಸತತತೋಷಕನಾಗಿನೀತಿಯ ।
ಶ್ರುತಿಗೆಪ್ರೀತನುವೂಗಿತೆಳಗುವನಾತಗುರುನಾಥ ॥ ೨ ॥
ಪರಮಕರ್ತನಗುರುವಿನಾಟವ । ನರಿತುಕೊಳ್ಳಿರಿಭಕ್ತರೆನಿಪರು ।
ಗುರುಗಳಲಿಬಹುವಿಧದಗುರುಗಳುಜಗದೊಳಿರುತಿಹರು ॥
ಗುರುಗಳೆನ್ನಿಸಿಬಹುಜನರ್ಕಳು । ಮೆರೆವರಿಳೆಯೊಳಗೇನುಹೇಳಲಿ ।
ನರಗುರುಗಳೇಂಗುರುವಹರೆನೀವ್‌ಕೇಳಿರೈಮುದದಿ ॥ ೩ ॥
ದುರಿತಮೂರ್ಗವಬಿಡಿಸಿಪುಣ್ಯದ । ತೆರವತೋರಿಸಿಭಕ್ತಿಪಥದೊಳ ।
ಗಿರಿಸುತಾಡುವನಾತಶ್ರೀಗುರುಜಗದಜನರೊಳಗೆ ॥
ಸ್ಮರಿಪಧರೆಗುಪಕಾರಿಯೆನ್ನಿಸಿ । ಹರನುಮುನಿದರುಕಾಯ್ವನೆಂಬುವ ।
ಬಿರುದುನಿಜವೆಂದೆನಿಸಿಕೊಳ್ಳುವನಾಮಹಾತ್ಮಕನು ॥ ೪ ॥
ಭಕ್ತರಿಗೆಶಿಶುವೆನಿಸುತಾಡುವ । ಭಕ್ತರಿಗೆಸಿತಾ್ಯಪ್ತನೆನಿಸುವ ।
ಭಕ್ತರಿಗೆನಿಜಬಂಧುಬಳಗವುತಂದೆತಾಯೆನಿಪಾ ॥
ಭಕ್ತರಿಗೆಬಿಡನೆಂದಿಗಾದರು । ಭಕ್ತರಿಗೆಹುಸಿಹೇಳನೆಂದಿಗು ।
ಭಕ್ತವತ್ಸಲನಾಗಿಕಾಯುವನಾತಗುರುರಾಯ ॥ ೫ ॥



ಒರವೆನಾಗುರುದೇವನಾಟವ । ನರಿತುಕೊಳ್ಳಿರಿಭಕ್ತರೆಂಬರು ।
ಪರಮಜಂಗಮನೆನಿಸಿಕರ್ತನುಕುರುಹತೋರುತಲಿ ॥
ಅರವಿನಲಿಥೊರೆಯೆನಿಸುತಾಗಳು । ಗುರುವೆಗುರುವೇನೀನೆಗತಿಯೆನು ।
ತಿರುಪಲಿಂಗಪ್ಪನಿಗೆಹೊಳೆಯುವನಾದಕನಸಿನಲಿ ॥ ೬ ॥
ಅಗಣಿತಾದ್ಭುತಮಹಿಮಕರ್ತನು । ಬಗೆಬಗೆಯಭಕ್ತರನುಸಲುಹುತೆ ।
ಜಗದೊಳಡಗಿಯೆತೋರುತಿರುವನದಿವಸನೋಡುತಲಿ ॥
ಮೊಗಲರಾರಾಜ್ಯದಲಿಸೇರಿಹ । ಸಗರಕನ್ನೋಟಿಗಳಪ್ರಾಂತಕೆ ॥
ಸೊಗಯಿಸಿರೆದೇಸಾಯಿಯಲ್ಲಿಗೆಬಿಜಯಮಾಡಿದನು ॥ ೭ ॥
ಪರಮಜಂಗಮರೂಪನುಕಂ । ಡೆರಗಿದ್ದೇಸಾಯಿಕರ್ತಗೆ ।
ಗುರುವೆತಾವ್‌ದಯಮಾಡಿರೆಂದಾದರಿಸಿಭಕ್ತಿಯಲಿ ॥

ಇರಿಸಿಕೊಂಡನುಗುರುಪದಾಂಬುಜ । ಕರಗುತಾತನವರಸಹೋದರಿ ।
ಗುರುವೆನೀಗತಿಯೆಂದುಸೇವೆಯುಮಾಡತೊಡಗಿದಳು ॥ ೯ ॥
ಗುರುನಿರಂಜನಮೂರ್ತಿ ಕರ್ತನು । ಪರಮಭಕ್ತಳನಿಷ್ಠೆಗೊಳಿದತಿ ।
ಹರುಷದಲಿದೇಸಾಯಿಯರಮನೆಯೊಳಗೆವಾಸಿಸಿಯು ॥
ಇರದಪ್ರೋಲ'ಶಾನಿರ್ದುಶತಿನ್ನಯು । ಕುರ.ಹುಜನರೊಳ.ತೋರುತಿರುವನು ।
ನೆರೆದಭಕ್ತರೆಮುಂದೆಕೇಳಿದಿಗುರುಕುಲೀಲೆಯನು ॥ ೯ ॥
ಧರೆಯೊಳಾಗುರುಲಿಂಗಜಂಗಮ । ನ ವಿನರಸನುಜಗದಕರ್ತನು ।
ನರರೊಳಗೆನರನೆನಿಸುತಾಡುತೆಬಹಳಗುಪ್ತದಲಿ ॥
ಇರುತೆತದಾಗ್ರಮದಲಿಭಕ್ತಿಗೆ । ಕರುಣಿಸುತ್ತಾತ್ಮೀಯಲೀಲೆಯು ।
ನಿರದೆತೋರುತ್ತಾಡಹತ್ತಿದನಮುಭಕ್ತರಲಿ ॥ ೧೦ ॥
ಬಹಳತಿಳಿದವರಿವರುಜಗದೊಳು । ಬಹಳದೊಡ್ಡವರಿವರುಲೋಕದಿ ।
ಬಹಳಕರುಣಿಗಳಿವರುಸಾಧುಗಳೆಂದುಭಾವಿಸುತಾ ॥
ಬಹುಜನವುನಿತ್ಯದಲಿಬರುವದು । ಮಹಿತಮಹಿಮಾಧಾರಕರ್ತನು ।
ಬಹಳಕೃಪೆಯಿಂದವರಿಗಿಷ್ಟಾರ್ಥವನುಕರುಣಿಸನು ॥ ೧೧ ॥
ಹೇಳಿದಂತಿರೆಮನದಕಾಮ್ಯವು । ಕಾಲಕೊಡಗಿರೆಸಿಂಗನಜನರು ।
ಲೀಲೆಹೆಚ್ಚಿನದೆಂದುತಮ್ಮೊಳು ತಿಳಿದುನಿಷ್ಠೆಯಲಿ ॥
ಹೇಳುವರುನೆರವಿಯಲಿ ಸದ್ಗುರು । ಲೀಲೆಯನುಮಹಿಮೆಯನುಹರುಷದಿ ।
ಕೇಳಿಭಕ್ತಿಯುಮಾರ್ಗಹಿಡಿಯುವದಾದುದಾಪುರವು ॥ ೧೨ ॥
ಶರಣರಾಟವುನವ ಗೆತಿಳಿಯದು । ಧರೆಗೆಸಾಧ್ಯತಮೆಂದುತಿಳಿದಾ ।
ಪರಮಕರ್ತನಲೀಲೆಗಚ್ಚರಿವಡುತಲಾಜನವು ॥
ಬರಲಿಕಾರಂಭಿಸಿತುನಾನಾ । ತರದಕುಲದವರಾತನೆಡೆಯೊಳು ।
ಕರಮುಗಿದುಶಿರಬಾಗಹತ್ತಿದರಂದುಭಕ್ತಿಯಲಿ ॥ ೧೩ ॥
ಹೆದರಿನಡೆವರುಲಂಚಗಾರರು । ಹೆದರಿನಡೆವರುವಂಚಕರುಮಿಗೆ ।
ಹೆದರಿನಡೆವರುಸಂಚುಗಾರರುಕರ್ತಸಂಘ್ರಯಲಿ ॥
ಹೆದರಿನಡೆವರುಮೋಶಗಾರರು । ಹೆದರಿನಡೆಯುವರಾಶೆಬುರುಕರು ।
ಹೆದರಿನಡೆವರುಹಾಸ್ಯಕಾರರುಮೇಳಲೇನದನು ॥ ೧೪ ॥

ಹರಿಯಭಕ್ತರೆನೀವ್ರಕೇಳಿರಿ । ಗುರುಫಕೀರೇಶ್ವರನುತಾನಾ ।
ಪರಿಯೊಳಾಡುತ್ತಂತ್ತುಬಹುಲೀಲೆಯಲಿಜೆಳಗುತಿರೆ ॥
ಚರಣಸೇವೆಯೊಳಿರುವಭಕ್ತೆ । ಸ್ಪುರಣದಾಲಿಂಗವ್ವೆನಿಜಸುತ ।
ವರಸಹಿತಗುರುಪಾದಕತ್ಯಾನಂದಗೊಳಿಸುತಿರೆ ॥ ೧೫ ॥
ಹರಸಭಕ್ತರೆಕೇಳಿರೈನೀ । ವರಿಯಿರಾಲಿಂಗವ್ವನಿಗೆಸುತ ।
ರಿರುವರೀರ್ವರುಭರವಮಹಿರಿಯನುಸೋಮನಪಕಿರಿಯಾ ॥
ಗುರುಮಹಾತ್ಮನು ಶ್ರೀಫಕೀರನು । ಕರೆವನಾಬಾಲಕರ್ಗಳಿಬ್ಬ ।
ನಿರದಲಾಶೀರ್ವದಿಸುತಿರುವನು ಬಹಳಕರುಣದಲಿ ॥ ೧೬ ॥
ಅವ್ವಲಿಂಗವ್ವವ್ವಬಾರೌ । ಯವ್ವಸೀನವ್ಮವ್ವಬಾರೌ ।
ಯವ್ವಲಿಂಗವ್ವವ್ವಮಗಳೇಬಾರೆಬಾರೆನ ತಾ ॥
ಅವ್ವಚಿಂತಿಸಬೇಡನೀನೆನ । ಗವ್ವನಾದೊಡೆಕೊಂತೆಪೇಳನೀ ।
ನವ್ವನಾಗೌನಿನಗೆಕೊಡುವೆನುಮನದಭೀಸ್ಟವನು ॥ ೧೭ ॥
ಎನುತಲಾಗುರುನಾಥನಾಕೆಯ । ಮನಕಹರುಷಗೊಳುತಲಾಕೆಯು ।
ತನುಜರೆಗೆಸಲೆಸಲುಹುತಿರುವನುಹರುಷಬಡಿಸುತಲಿ ॥
ಘನಮಹಿಮನೆಂದೆನಿಸುತವರೊಳ । ಗನುದಿನವುಜೆಳಗುತ್ತಲವರಾ ।
ಮನದನೆಳಕೊಂಡೆಸೆಯುತಿರುವನುಕರ್ತನನಿತರಲಿ ॥ ೧೮ ॥
ಜಗಳಹುಟ್ಟಿತುಸಗರಕನ್ನೋಟಿ । ಗಳದೇಸಾಯಿಯರಮನೆಯೊಳ ।
ಗಗುಡತನದಲಿಬಂಧ ಜನರಲಿಭಿನ್ನಭಾವದಲಿ ॥
ಬಗೆದುಮನೆತನದಂಡವನುತಾ । ಸುಗುಣಿಯಾಲಿಂಗವ್ವನಾಗಳೆ ।
ಜಿಗಿದಳಾಮನೆಬಿಟ್ಟುತನ್ನಯುಸುತರನೊಡಗೊಂಡು ॥ ೧೯ ॥
ಚರಣಸೇವಕಳಂತುಪೋಗಿರೆ । ಗುರುವೃಣಾದೇಸಾಯಿಗೆಂದನು ।
ಧೊರೆಯೆನಿನ್ನಾಶ್ರಯದೊಳನ್ನೆಗವಿದ್ದುಸುಖಿಸಿದೆನು ।
ಪರಿಕಿಸಲ್ಕೊಂದೆಡೆಯೊಳಿರುವದು । ಸರಸವಲ್ಲವುಜಗಮರಿಗಿದು ।
ಚರಿಸಬೇಕಿನ್ನೆಂದುಹೊರಟನು ಗುರುಫಕೀರೇಶ ॥ ೨೦ ॥
ಭಕ್ತೆಯನುಹೆಚ್ಚಿಸುತೆಧ್ಯಾನಾ । ಸಕ್ತಳಾಗಿಯೆನಿತ್ಯದಲಿನಿಜ ।
ಭಕ್ತವತ್ಸಲನೆಂದುಬರುವನೊಯೆಂದುಚಿಂತಿಸುತಾ ॥

ಭಕ್ತಳಾಲಿಂಗವ್ವೆಮನದಲಿ । ಭಕ್ತಿಯಲಿವಂದಿಸುತೆಕಡಿಗೆ ।
ಭಕ್ತರನುಪೊರೆಯೆನ್ನುತಬಂದಳುಬಿಡದೆವೊರೆಯಿಡುತ ॥ ೨೧ ॥
ಭಕ್ತಿಗೋಸುಗಬಂದಕರ್ತನು । ಭಕ್ತಳಂದವನೋಡಿಚಿಂತಿಸಿ ।
ಭಕ್ತಳನುಮಕ್ಕಳನುರಕ್ಷಿಸಲೆಂದುಬಗೆದಂದು॥
ಭಕ್ತಿಪರವಶನಾಗಿಲೋಕವಿ । ರಕ್ತನಲ್ಲಮವಿಭುವುಲೀಲಾ ।
ಸಕ್ತನಾಗಿಯೆಬಂದುಕಾಣಿಸಿಕೊಂಡಕಡಿಯಲಿ ॥ ೨೨ ॥
ಗುರುಪದಾಬ್ಜವಕಂಡುಭಕ್ತಳು । ಭರದಿಬಾಗಿದಳಾತ್ಮಸುತರನು ।
ಹರುಷದಲಿಗುರುಪದಪದ್ಮಕ್ಕೆರಗಿಸಿದಳಾಗ ॥
ಗುರುವಿಗುರೆಬಹುವಿಧದಿವಂದಿಸಿ । ಕರಗಳೆರಡನುಮುಗಿದುನಿಂದಿರೆ ।
ಗುರುವುಪೊರೆವನು ಚಿಂತೆನಿನಗೇಕೆಂದನಾಕರ್ತಾ ॥ ೨೩ ॥
ಭರಮನೆಂಬಾಹಿರಿಯಮಗನಿಗೆ । ಗುರುವಿನಪ್ಪಣೆಯಂತೆಗೌಡಿಕೆ ।
ಗಿರಿಸಿನಿಲಯವನಿಲಿಸಿಬ್ರಹ್ಮಾಲಯವನೆಲೆಗೊಳಿಸಿ ॥
ನಿರುತಕರ್ತನಪಾದಸೇವೆಯೊ ।ಳಿರುತಲಾಲಿಂಗವ್ವೆಸುತರ್ವೆ ।
ಸಿರಿಗೆಗುರುಕೃಪೆಯೆನುತಸುಖಿಸುವಳಾದಳನುದಿನವು ॥ ೨೪ ॥
ಅಲ್ಲಿ ಶ್ರೀಗುರುಕರ್ತನವರೊಳು । ಸಲ್ಲಲಿತಲೀಲೆಗಳನಾಡು ।
ತ್ತೆಲ್ಲರೊಳುಗ್ರಾಮದಲಿನಿಜಲೀಲೆಯನುತೋರಿಸುತಾ ॥
ಬಲ್ಲಿದನುಗುರುವೆನಿಸಿಬಡವರಿ । ಗೆಲ್ಲತರದಲಿನಡಿಸಿಕೊಡುತಲಿ ।
ಖುಲ್ಲರನುಮಿಗೆಮೆಟ್ಟಿಕಾಯುವನಾದನಾಪ್ತರನು ॥ ೨೫ ॥
ಅರವದುಳ್ಳವರಲ್ಲಿಹೋಗುವ । ನರವದುಳ್ಳವರಲ್ಲಿಕೂಡ್ರುವ ।
ನರವಿನೆಡೆಯಲಿಹೋಗುತಾಡುತೆಕಾಡುವನುಕರ್ತಾ ॥
ಪರಿಪರಿಯಮನೆತನದಚಿಂತೆಗೆ । ಸೊರಗುತೀರ್ಪಾಭಕ್ತರಿಗೆನಿಜ ।
ಕರುಣದಿಂಕೈವಿಡಿದುಕಾಪಾಡುತ್ತಲಿರುತಿಹನು ॥ ೨೬ ॥
ಜೋಕೆಬಾಳ್ವೆಯುಬದುಕವೂಡಿರಿ । ಜೋಕೆವೂಡಿರಿತಂದೆತಾಯ್ಗಳ ।
ಜೋಕೆಗುರುಹಿರಿಯರಿಗೆಬಾಗಿಯೆನಡೆಯಿರೈನೀವು ॥
ಜೋಕೆಗುರುಪಿನಸೇವೆವೂಡಿರಿ । ಜೋಕೆಅನ್ನವಕೊಡಿರಿಬಿಡದಲೆ ।
ಜೋಕೆನೋಡಿರಿಯೆಂದುಕೊಡುವನುಕರ್ತಬೂದಿಯನು ॥ ೨೭ ॥

ಧರೆಯಭಕ್ತರೆಕೇಳಿರೈನೀವ್ । ನರರಮನಸಿನಗುಟ್ಟುಹೇಳುತೆ ।
ಕರುಹಿನಲಿವಾಡುತೋರುತ್ತಿರಲುಪ್ರತಿದಿವಸ ॥
ಇರದೆಬರಹತ್ತಿದುದುಬಹ ಜನ । ವೆರಗಹತ್ತಿತುಕರ್ತನಡಿದಾ ।
ವರೆಗೆಪ್ರಾರ್ಥಿಸುತಿರುವರಾಕಾಮ್ಯಾರ್ಥಿಗಳ-ಬಿಡದೆ ॥ ೨೮ ॥
ಶರಣರಾಶುಭದಿನವುಬಂದಿತು । ಶರಣರುದಯಿ-ಪರಿಸ್ಸುರ್ಜದಲಿ ।
ಶರಣರಾಟವವುಂದೆನೋಡಿರಿನೀವೆಲ್ಲೈದೆ-ನುತಾ ॥
ಶರಣರಾವಚನವನುಹೇಳುತೆ । ಶರಣರತಿಲೀಲೆಯನುತಿಳಿಸುತೆ ।
ಶರಣರಾಘನವುಹಿಮೆ-ಹೇಳುತ್ತಿರುವನಾಕರ್ತಾ ॥ ೨೯ ॥
ಸ್ವಾಮಿಯನುಪೂಜಿಸಿರಿಮಿಗ ನೀವ್ । ಸ್ವಾಮಿ-ಪಾದಕೆಭಕ್ತಿಸೀಡಿರಿ ।
ಸ್ವಾಮಿಯೆಡೆಯಲಿಜೇಡಿಕೊಳ್ಳಿರನೀವುನಿಷ್ಠೆಯ-ಲಿ ॥
ಸ್ವಾಮಿಯಾಡುವದಿವಸಬಂದವು । ಸ್ವಾಮಿಬಂದಪನೆಂದುತಿಳಿಯಿರಿ ।
ಸ್ವಾಮಿಯೂಟವಿದೆಂದುನಸ-ನಗುತಿರುವನಾಕರ್ತಾ ॥ ೩೦ ॥
ಇರುತಲೀಪರಿಕಡಡಿಯಲಿಗುರು । ವರನುಕರ್ತನುಪೌರಜನಕೆ ।
ಲ್ಲರಿಗೆಭಕ್ತ್ಯಚಾರವಮಾರ್ಗದೊಳಿರಿಸಿದನ-ಬಳಿಕಾ ॥
ನೆರೆದಜನಕಾಗ-ರುಫಕೀರೇ । ಶ್ವರನುನಸುನಗುತೊಂದುದಿನದಲಿ ।
ಭರಮಗೌಡನು ನಮ್ಮವನುಬಲುಜೋಕೆನೀವೆಂದಾ ॥ ೩೧ ॥
ಆಡಬೇಡಿರಿಕೆಟ್ಟನುಡಿಗಳ । ನಾಡಬೇಡಿರಿಕೆಟ್ಟಜನರೊಳ ।
ಗಾಡಬೇಡಿರಿನೀವು ದುಷ್ಕರ್ಮದಲಿ ಜಗದೊಳಗೆ ॥
ನೋಡಿನಡೆಯಿ-ರಿ ಬಡವರಿಗೆನೀವ್ । ಕಾಡಬೇಡಿರಿನಿಮ್ಮಬಾಳ್ವೆಯೊ ।
ಳಾಡಿನಡೆಯಿರಿಜೋಕೆಬಲುಜೋಕೆಂದುಗುರುನುಡಿದಾ ॥ ೩೨ ॥
ಗುರುವೆತಮ್ಮಯಪಾದದಪ್ಪಣೆ । ವೆರಸಿನಡೆಯುವೆವಾವು ಶ್ರೀ ಗುರು ।
ವರನೆನೀನೇಸಲಹುವದು ನಮ್ಮನ್ನು ಕರುಣದಲಿ ॥
ಗುರುವೆನೀನೇ ನಡಿಸಿಕೊಡುವದು । ಗುರುವೆ ನೀನೇನಮಗೆಗತಿಯೆನು ।
ತೆರಗಿದರು ಗುರುಸಿರಿಯರೆಲ್ಲರು ಭಕ್ತರೆಂಬವರು ॥ ೩೩ ॥
ಎರಗಿದಾ ಸಕಲರಿಗೆಕರ್ತನು । ಹರುಷದಾಶೀರ್ವಾದವಮಾಡಿಯೆ ।
ತ್ವರದೊಳೆಲ್ಲರಕಳುಹಿನುಡಿದನು ಭರಮಗೌಡನಿಗೆ ॥

ಸಿರಿಯಸುಖದಲಿಬಾಳುನೀನಾ । ಗುರುವಿನಡಿಯಲಿದಾಸನಾಗೈ ।
ಗುರುಸಮರ್ಥನುನಡಿಸಿಕೊಡುವನು ಚಿಂತೆಬೇಡೆಂದಾ ॥ ೩೪ ॥
ಕರೆದುಲಿಂಗವ್ವನಿಗೆ ಸದ್ಗುರು । ಪೊರೆವನೀತೆರಮರ್ಗಳನಿನ್ನಯ ।
ಸಿರಿಯ ಮಗನಿಗೆ ಕೆಲಸದೊರೆಯಿತುಚಿಂತೆಯೆನಗಿಲ್ಲಾ ॥
ಕಿರಿಯನಿಗೆಯಿನ್ನಾವಸಂಪದ । ಗುರುವರನು ತಾಂ ಕೊಡುವನೋ ಸಂ ।
ಚರಿಸಬೇಕೌಹೋಗಿಬಂದವೆನೆಂದನಸುನಗುತಾ ॥ ೩೫ ॥
ಹಲವುಮತಗಳವಿವಿಧಭಕ್ತರೆ । ತಿಳಿಯಿರೈಸೀರ್ವ್ಕರ್ತನಾಟವ ।
ನಲಿದುಕೇಳರಿಭಕ್ತರೆಲ್ಲರನಂದುಕೂಡಿಸಿದ ॥
ತಿಳಿದಭಕ್ತರು ನೀವು ನಿಮ್ಮೊಳು । ಕಳೆವೆಸೀಸರಿವಿನಸಸೌಖ್ಯದೊ ।
ಳಿಳೆಗೆಕಾರಣಕಾರ್ಯಕಾಗಿಯೆಹೋಗಿಬಹೆನೆಂದಾ ॥ ೩೬ ॥
ನೀವುಕದಡಿಯೆಇಳಿಲ್ಲಿನಿಲ್ಲಿರಿ । ನೀವುನಿತ್ಯವಿನಿಮ್ಮಸದ್ಗುರು ।
ದೇವನಂಜಾನಿಸುತೆಕಳೆಯಿರಿ ಕೆಲವುಕಾಲವನು ॥
ದೇವದೇವನಸೂತ್ರದಲಿನಾ । ನಾವಕಡೆತಿರುಗಾಡಿಬರುವೆನೊ ।
ಭಾವಿಸಲ್ಕನಗರನುತಿಳಿವುದು ಮುಂದೆನಿಮಗೆಂದಾ ॥ ೩೭ ॥
ಗುರುವೆನಮ್ಮನುಬಿಟ್ಟುಪೋದಡೆ । ಧರೆಯೊಳಾರ್ಗತಿನಮಗೆನೀನೇ ।
ಪರಮಬಸವನುತಾಯಿತಂದೆಯ ಬಂಧುಬಳಗವದು ॥
ಗುರುವೆನೀನೇಸಲಹುಸಲಹೆಂ । ದೆರಗಲಾಲಿಂಗವ್ವೆತದ್ಗುರು ।
ವರಸುನಸುನಗುತೆಂದಲಿಂಗವ್ವನಿಗೆಕರುಣದಲಿ ॥ ೩೮ ॥
ಮರವಿಯಿನಿತೇಕಿನ್ನುಸಿಮಗಾ । ಗುರುಸಮರ್ಥನುಸಲಹುವನುಸ ।
ರ್ವರನುಸುಮ್ಮನೆಚಿಂತೆಯೇತಕೆಮನಕೆಬಿಡಿರೆವ್ವಾ ॥
ಗುರುವಿನ ಟವದೆಂತೆ ಇತಿಳಿಯದು । ತಿರುಗನಿಮ್ಮನುಬಂದುಕೂಡುವೆ ।
ನಾರೆವುವಿಲ್ಲವುನಿಮಗೆತಿಳಿಯಿರಿಯೆಂದನಾಕರ್ತಾ ॥ ೩೯ ॥
ಕೊರತೆಯೇನೌನೀವುಧನ್ಯರು । ಕೊರತೆಯಾದೊಡೆನೆನೆದರಲ್ಲಿಯೆ ।
ಗುರುವುನಿಲ್ಲುವನೆಂದುತಿಳಯಿರಿಯೆನ್ನುತಾಕರ್ತಾ ॥
ಭರದಿಸಮ್ಮತಿನಡಿಸಿಹೊರಟನು । ಧರೆಯೊಳಾಡುತೆನಡೆದನಾಗುರು ।
ಗುರುಚರಿತ್ರವನೆಲ್ಲಕೇಳಿಬಿಟ್ಟುಕುಲಛಲವ ॥ ೪೦ ॥

ಅಗಲಿಹೋಗಲುಕರ್ತನಂದಿಗೆ । ಸುಗುಣಿಲಿಂಗವ್ವವ್ವೆಗುರುವಿನ ।
ಬಗೆಬಗೆಯಲೀಲೆಗಳ ಮೈಮೆಗಳೆಲ್ಲ ಬಣ್ಣಿಸುತೆ ॥
ಬಗೆಯೊಳಾತನಪಾದನೆನೆಯು । ತ್ತಗಲದಲೆಪುತ್ರರನು ಪೊರೆವುತ ।
ಜಗದಕರ್ತನಚಿಂತೆಯಲಿ ದಿನಗಳೆಯುಹತ್ತಿದಳು ॥ ೪೧ ॥
ಗುರುವುಶಿವಗುಣಭರಣನಾತನು । ಗುರುವುಚಿಂತಾಮಣಿಯು ತಾನವ ।
ಗುರುವುಭಕ್ತಿಗೆ ಕಾಮಧೇನುವುನಿತ್ಯಸಂಧಾನಿ ।
ಗುರುವುವಿಶ್ವಕುಟುಂಬಿಯಾತನು । ಗುರುವುಲೀಲಾಮಾತ್ರಬೆಳಗುವ ।
ನರರು ಗುರುಕೃಪೆಪಡೆಯದಲೆ ಕೆಡುತಿಹರುಮದಗಳಲಿ ॥ ೪೨ ॥
ಗುರುವಿನಾಟವೆ ಶರಣರಾಟವು । ಶರಣರಾಟವೆ ಗುರುವಿನಾಟವು ।
ಹರಿಹರರ್ಕಳೆಶರಣರಾಟಕೆಬೆರಗುಗೊಳ್ಳುವರು ॥
ಶರಣರಾರೂಪದಲಿ ಪರಮೇ । ಶ್ವರನೆ ಶ್ರೀ ಗುರುವೆನಿಸುತಾಡುವ ।
ನರರುಜರಿದೇಕೆಡುವರಕ್ಕಟ ಹೇಳಲೇನದನು ॥ ೪೩ ॥
ಇರುವೆಮೊದಲಾದಖಿಳಜನ್ಮದ ತರಗಳೆಂಬತ್ನಾಲ್ಕುಲಕ್ಷವು ।
ತರತರದಜನ್ಮದಲಿಹುಟ್ಟುತೆಸಾಯುತಂಕಡೆಗೆ ॥
ಅರವಿಸೀನರಜನುಮಬರುವದು । ಮರವೆಯಲಿಗಡಮುರಳಿಬಿದ್ದರೆ ।
ನರಜನುಮದೊರಕುವದು ದುರ್ಲಭವೆಂಬುದೈಶ್ರುತಿಯು ॥ ೪೪ ॥
ಅಹಹ ಹಂಬಲಿಸುವರು ಪಿಸುಣರು । ಬಹಳಪಾಪಾಧ್ವದಲಿಪರಿವರು ।
ಕುಹಕಬುದ್ಧಿಯಹಿಡಿದುಕೆಡಿಸುವರಯ್ಯೊಸಜ್ಜನರಾ ॥
ಅಹಿತಕೃತ್ಯಂಗಳನೆಮಾಳ್ಪರು । ಬಹುವಿಧದೆಛಲಗಳನು ತೋರು ।
ತ್ತಿಹರುಹರಹರಯಮನಬಾಧೆಗೆಪಾತ್ರರಾಗುವರು ॥ ೪೫ ॥
ವ್ಯಸನದಲಿಬಸವಳಿವಬಾಳ್ವೆಯು । ಹಸರದಲಿಕುಸಿದಿಳಿವವಿಷಯು ।
ಪ್ರಸರದಲಿಪಾಡಳಿವಷಡ್ವರ್ಗದಲಿಸಿಲುಕಿರುವ ॥
ನಸಿದಿರುವಪಳೆಗೈವಸುಮ್ಮನೆ । ಮುಸುಕುದೋರುವಬೈಗುಳಾಡುವ ।
ಪಿಸುಣನಿಗೆದುರ್ಗತಿಯದಲ್ಲದೆ ಬೇರೆಗತಿಯುಂಟೆ ॥ ೪೬ ॥
ಹಿಡಿದಭಕ್ತರಬಿಡದೆಪೊರೆವಗೆ । ಪೊಡವಿಯಲಿಮಹಿಮೆಯನುತೋರ್ಪಗೆ ।
ಜಡರಮೂರ್ಖರನಿಂದಕರ ಬಾಗಿಸುವಗುರುವರಗೆ ॥

ಒಡಲೊಳಗೆರವಿಕೋಟಿತೇಜವ । ನಡಗಿಸಿಯೆಬ್ರಹ್ಮಾಂಡದೋರುವ ।
ಮೃಡಗೆಕರ್ತಗೆ ಬಾಗಿಬೆಳಗಿರಿ ಮಂಗಳಾರತಿಯ ॥ ೪೭ ॥
ಅರವಿನೆಡೆಯೊಳಗಿರುತೆಭಕ್ತಿಗೆ । ಪರವಶನುನೀನಾಗಿನಿಂತ್ರೈ ।
ಗುರುದಿಗಂಬರದತ್ತಕರ್ತಫರಾಕುಮುದಿಪಾಚ್ಛಾ ॥
ಸ್ಮರಿಪಲಿಂಗವ್ವನಿಗೆಹಿಡಿದೇ । ಕರುಣದಲಿ ಕಾಪಾಡಿದ್ಯೆನೀಂ ।
ಶರಣಪರಿಪಾಲಕನುಕರ್ತಪರಾಕುಪ್ರಭುರಾಯಾ ॥ ೪೭ ॥
ಗುರುಮಹತ್ವದಸಾರವಿಂತಿದು । ಗುರುಮಹತ್ವಮನಂತಮಿಪ್ಪುದು ।
ಗುರುಮಹತ್ವವನರಿದುಪೇಳುವರಾರುಲೋಕದಲಿ ॥
ಗುರುಫಕೀರೇಶ್ವರನುಗಂಗಾ । ಧರನಮುಖದಿಂಪೇಳಿಸಿದನೀ ।
ತೆರದಿಮುಗಿದುದು ಸಂಧಿಯಾರನೆಯೆನಿಸುತಂದದಲಿ ॥ ೪೯ ॥
॥ಇತಿ ಶ್ರೀ ಶಿರಹಟ್ಟಿಪುರನಿವಾಸ ಶಾನ್ಯಸಿಂಹಾಸನ ಶ್ರೀ ಭಗವಾನ್ ವಿಭುವಾತ್ಮಯ ।
ಗಂಗನಿಂ ಪೇಳಿಸಿದ ಪೌರಾಣದೊಳಾರನೆಯ ಸಂಧಿ ಸಮಾಪ್ತಮಿಂತು ।
೭೫೨ ಪದ್ಯಂಗಳಿಗೆ ಮಂಗಲಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ

## ೭ನೇ ಸಂಧಿ.

### ಕರ್ತರು ಡಂಬಳದಲ್ಲಿ ಭೂಸುರನಿಗೆ ಪ್ರಸನ್ನರಾದದ್ದು.

ಸಂಧಿ ಸೂಚನೆ

ಪರಮಲೀಲಾಮೂರ್ತಿ ಕರ್ತನು । ಚರಿಸಿಡಂಬಳದಲ್ಲಿ ಶಾಂಭವಾ ।
ಸುರಕುಮಾರಂಗೊಲೆದನದನೀವ್ ಕೇಳಿರೈಬಿಡದೆ ॥ ಪಲ್ಲ ॥
ಭಕ್ತಿಗಾಗಿಯೆಜಗಕೆ ಬರುವನು । ಭಕ್ತಿನಯಭಯನೀತಿಪೇಳ್ವನು ।
ಭಕ್ತಿಹೆಚ್ಚಿಪಕಾರಣದೆ ಕಾರ್ಯವನು ಮಾಡುವನು ॥
ಭಕ್ತರಿಗೆಬಲನಡಿಸಿಕೊಡುವನು । ಭಕ್ತರೈಸಿರಿನೋಡಿನಲಿವನು ।
ಭಕ್ತರೇ ನೀವ್‌ಗುರುತುಹಿಡಿಯಿರಿಪರಮಗುರುವಿನದಾ ॥ ೧ ॥

ಅಷ್ಟಕಿಷ್ಟಕೆತಪ್ಪುಹಿಡಿಯನು । ಭ್ರಷ್ಟಮನುಜರ ಮಾತುಕೇಳನು ।
ದುಷ್ಟರನುದಂಡಿಸದೆ ಬಿಡನಾಗುರುಮಹೋನ್ನತನು ॥
ಶಿಷ್ಟರಿಗೆ ತಾಸಲಹದಿರನಾ । ಕ್ಲಿಷ್ಟಮತಿಗಳಿಗೇನುತೋರನು ।
ನಷ್ಟಮಾಡನುಯಾವಕಾಲಕುಭಕ್ತಮಂಡಳಿಗೆ ॥ ೨ ॥
ನೆನೆವರೆಡೆಯಲಿನಡಿಸಿಕೊಡುವನು । ಕನಸುಮನಸಿನೊಳಾತಹೊಳೆವನು ।
ತನಗೆ ಹೊಂದಿದಭಕ್ತರನುಕಾಯುವನು ಕರುಣದಲಿ ॥
ಜನಕೆಜಗದೀಶ್ವರನಲೀಲೆಯ । ಮಿನುಕುತೋರ್ಪನುಹಿಂದುಮುಂದಣ ।
ದನುವವೇಳ್ವನುತಿಳಿಯಿರ್ಯೆನೀವ್ ಹಿಡಿಯಿರ್ಯೆಗುರುತಾ ॥ ೩ ॥
ತನಗೆ ಹೊಂದಿದಲೌಕಿಕಾಪ್ತರು । ತನಗೆಹೊಂದಿದಜಗದಭಕ್ತರು ।
ತನಗೆಕೇವಲಸೇವೆಮಾಡುವಪರಮಕಿಂಕರರು ॥
ತನಗೆ ಬಿಡದೊಲಿಸಿದೊಡಂಗುರು । ಘನಮಹಿಮನವರುಕ್ತಿಗೇಳದೆ ।
ತನಗೊಳಗೆಹೊಳದಂತೆಕಾರಣಕಾರ್ಯನಡಿಸುವನು ॥ ೪ ॥
ನರರಹಂಗೇನಿಲ್ಲದಲೆಶ್ರೀ । ಗುರುವುಮಹಿಮಾಮಾತ್ರದಿಂದಲೆ ।
ಕುರುಹುತೋರುತೆಬೆಳಗುವನು ಗಡಸ್ವಪ್ರಕಾಶದಲಿ ॥
ಗುರುತುಹಿಡಿಯುವರಾತನತಿಕೃಪೆ । ವೆರೆದಭಕ್ತರುತಿಳಿಯಲಸದಳ ।
ವರರೆಪೇಳ್ದೊಡೆಗುರುತನಬಿಗೆಹುಟ್ಟುವದು ಬಿಗಿಯು ॥ ೫ ॥
ಕೇಳಿರ್ಯೆನೀವ್ಭಕ್ತರಾಗುರು । ಲೀಲೆಯನುನಿಮಗ್ಯೆಸೆವೇಳ್ವೆನು ।
ಕಾಲಮರ್ದನಕರ್ತಸಂಚಾರವನುಮಾಡುತಲಿ ॥
ಕೀಳುಕುಲದ ನಂತೆತೋರುತೆ । ಲೀಲೆಯುಡುತೆಜಗದಕುಲಛಲ ।
ಮೇಳದಲೆಶಿವಮಹಿಮೆತೋರುತೆನಡೆದನೇನೆಂಬೆ ॥ ೬ ॥
ನರರಿಗುತ್ಕಟಭಕ್ತಿಮಾರ್ಗವ । ನಿರದೆತೋರಿಸಲೆಂದುಕರ್ತನು ।
ಸಿರಿವೆರಿಸಿಶೋಭಿಸುವ ಡಂಬಳಕ್ಕೈದಿದನುಬಿಡದೆ ॥
ನರರಕಣ್ಣಿಗೆಕಾಣಹತ್ತಿದ । ನರರೆಜಗದಫಕೀರನಂದದೊ ।
ಳಿರಲಿಕಾರಂಭಿಸಿಡನಾಗುರುತಂತ್ರವೇವೇಳ್ವೆ ॥ ೭ ॥
ಇರುತಿರಲು ಕರ್ತನುಮಸೀದೆಯೊ । ಳಗುಹದಲೆನಿಜಲೀಲೆಯನುಸುಜ ।
ನರುಫಕೀರನಕಂಡುಮಾತಾಡಿಸಿದರಂದೊಸೆದು ॥

ಇರುವಿರೀಯೆಡೆಯಲ್ಲಿನೀವೀ । ಪರಿಯನಿಮಗಾರ್ಭಿಕ್ಷೆಕೊಟ್ಟಪ ।
ರರಿತುಸೇವೆಯಮಾಡುವವರಾರೆಂದರಾತನಿಗೆ ॥ ೮ ॥
ಗುರುವೆನೀವೆಲ್ಲಿಂದಬಂದಿರಿ । ಗುರುವೆನೀವಿನ್ನೆಲ್ಲಿಪೋಪುದು ।
ಗುರುವೆಪಾದವಕಂಡಮಾತ್ರಕೆಹರುಷವಾಯ್ತುಮಗೆ ॥
ಗುರುವೆನೀವೆಲ್ಲೆಲ್ಲಿಪೋಗದ । ಲಿರುವದೀಸ್ಥಾನದೊಳಗೇನುಂ ।
ಕೊರತೆಯಾಗದವೊಳ್ಕಸೇವೆಯಮಾಳ್ಪೆವಾವೆನಲು ॥ ೯ ॥
ತಿರುಗಿದೆಡೆಗಳಗೆಣಿಕೆಯಿಲ್ಲವು । ತಿರುಗಿಹೆನುಬಲುನಾಡುಗಳಮರೆ ।
ತಿರುವೆಹೊರಟೆಡೆಯೊವದೋವಮುಂದೆಲ್ಲಿಗೋಗಮನ ॥
ಅರಿಯೆನಿಂದುಮಸೀದೆಯಲಿಕುಳಿ । ತಿರುವದೊಂದೇಗೊತ್ತು ನಿಮಗಿ ।
ನ್ನೊರೆವೆನೆನ್ನುತೆಕರ್ಣನುಡಿದನುಮಂದಹಾಸದಲಿ ॥ ೧೦ ॥
ಬಹಳದಿವಸಗಳಾದವಿಂತೆನ । ಗಿಹದಸೌಖ್ಯಗಳಿಂತೊಹೊಂದದ ।
ಲಿಹೆನುತನುವೆನಗೇನುಕಾರಣಬಂದುದೋಯೆನುವೆ ॥
ಇಹಪರದ ವ್ಯಾಪಾರವನುನಡಿ । ಸಿಹನುಶಂಕರನವನಲೀಲೆಗೆ ।
ಮಹಿಮೆಗುರೆಗುರಿಯಿಟ್ಟು ಸಂಚರಿಸುತ್ತಲಿಹೆನೆಂದಾ ॥ ೧೧ ॥
ಅಲ್ಲಿಕೂಡಿದಗುಪ್ತಭಕ್ತರು । ಸಲ್ಲಲಿತಗುರುಮೂರ್ತಿಪೇಳ್ದುದ ।
ನೆಲ್ಲಪನುಕಿವಿಗೊಟ್ಟುಕೇಳ್ದಾನಂದದಲಿನಮಿಸಿ ॥
ಇಲ್ಲಿಶಾನುಫಕೀರನೆಲಿಸಿದ । ಡಿಕ್ಷಗೈತಂದಿವನಸೇವಿಪು ।
ದೆಲ್ಲತೆರದಿಂದೆನುತೆಪೋದರುತಮ್ಮ ಮನೆಗಳಿಗೆ ॥ ೧೨ ॥
ಮರುದಿವಸಕವರಲ್ಲಿಕಂಡಾ । ಗುರುಪದಾಬ್ಜಕ್ಕೆರಗಿದರುಶ್ರೀ ।
ಗುರುವೆತಮಗೇನಿಚ್ಛೆಯಿರುವದ-ಪೇಳಿರೆಂದೆನಲು ॥
ಗುರುವಿನಡಿಯುಲಿಸೇವೆಗೈಯುವ । ಹರುಷಸಿವ್ಮೊಳಗಿರುವದಾದರೆ ।
ಗುರುವಿಗಿಂದಿಗೆಪತ್ರಿಸೇದಿಪುದೆಂದನಾಕರ್ತಾ ॥ ೧೩ ॥
ಗುರುವಿನಿಚ್ಛೆಯನರಿದುಭಕ್ತರು । ಹರಿದುಹೋದರುಸಿದ್ಧಪತ್ರಿಯ ।
ನಿರದೆತಂದೊಪ್ಪಿಸಿದರೈಬಹುಭಕ್ತಿಯಿಂದವರು ॥
ಭರದಿಹಚನನುಮಾಡಿಚಿಲಿಮೆಯ । ನಿರದೆಕೊಟ್ಟರೆಸೇದುವೆನುಸಲೆ ।
ತಿರುಗಿದಧ್ವಶ್ರಮ-ವಕಳೆಯುವೆನೆಂದನಾಕರ್ತಾ ॥ ೧೪ ॥

ಸಿದ್ಧಪತ್ರಿಯನಾಗಭಕ್ತರು । ಸಿದ್ಧಮಾಡಿದರೊಡನೆಹವದಲಿ ।
ಸಿದ್ಧಪತ್ರಿಯತಂದುಪಾದಕ್ಕೆರಗಿಚಿಲಿಮೆಯನು ॥
ಎದ್ದುಕೊಟ್ಟರೆದೇವಲೋಕದ । ಸಿದ್ಧಲಿಂಗನುಚಿಲಿಮೆಹಿಡಿದದ ।
ಕಿದ್ದಪತ್ರಿಯನಿಟ್ಟುನಸುನಗುತೆಂದಭಕ್ತರಿಗೆ ॥ ೧೫ ॥
ಬರಿಯಕಾಲೊಳುನಡೆದುಬಲುಸಂ । ಚರಿಸಿಕಾಯವುಕಾವ್ರಗೊಂಡಿದೆ ।
ಸರಸವಲ್ಲವುಬೆಂಕಿಯಾಟವುನಮಗೆಬೇಡೆನುತಾ ।
ಗುರುದಿಗಂಬರದೇವದತ್ತನು । ಬರಿಯಚಿಲಿಮೆಯ ಕೊಂಡುಸೇದು ।
ತ್ತಿರಲಿಕಾಕ್ಷಣದಲ್ಲಿಪೊಗೆಕಂಗೊಳಿಸಿತೊತ್ತರದೆ ॥ ೧೬ ॥
ಹರನಹಣೆಗಣ್ಣುರಿಯೊಯೋಗೀ । ಶ್ವರತಪೋಗ್ನಿಜ್ವಾಲೆಯೋಯೆನೆ ।
ಗುರುವುಸೇದುವಚಿಲಿಮೆಯೊಳಗುರಿಯುಣ್ಮಿಪ್ರಜ್ವಲಿಸೆ ॥
ಸರಿದುಕುಳಿತರುಹೆದರುತೆಲ್ಲರು । ಕರಕಾವ್ರೋದುದುಸಿದ್ಧಪತ್ರಿಯು ।
ಪರಿಹರಿಸಿತೈಶ್ರಮುವುನಿಮ್ಮಿಂದೆಂದನಾಕರ್ತಾ ॥ ೧೭ ॥
ಇವನುಸತ್ಯಫಕೀರನೆನ್ನು । ತ್ತವರುತಮ್ಮೊಳಿತಾವುನುಡಿವು ।
ತ್ತಿವನಲೀಲೆಯಗಾಧವಿಹುದೆಂದರಿದುಮನದೊಳಗೆ ॥
ವಿವಿಧವಾಗಿಯೆನುತಿಸುತಿರಲಾ । ಭವಹರನುತಿಳಿದಾಜ್ಞೆಗೊಡೆತಾ ।
ವವರುಪಾದಕ್ಕೆರಗಿಹೋದರುತಮ್ಮಮನೆಗಳಿಗೆ ॥ ೧೮ ॥
ಬರುವರತಿಗುಪ್ತದಲಿಕರ್ತನ । ಸರಿಸದಲಿನಿಂತೆರಗುವರ್ುಸ ।
ತ್ಕರಿಸುವರುಮಿಗೆಸೇವೆಮಾಳ್ಪರುಭಕ್ತಿಭಾವದಲಿ ॥
ಗುರುದಿಗಂಬರವಾತಶಹಸಾ । ಪರಮುಸೇವೆಗೆ ಮೆಚ್ಚಿನಲಿವು ।
ತ್ತಿರಲುಜರುಗಿದವಿಂತುದಿನಗಳುಬಹಳ ಗುಪ್ತದಲಿ ॥ ೧೯ ॥
ಬರುವಭಕ್ತರೊಳೋರ್ವಬಾಲಕ । ನಿರುವನಾತನುದ್ವಿಜನುವಿದ್ಯಾ ।
ಭರಕೆಬೀಳದೆಶಾಸ್ತ್ರಕಲಿಯದೆಭಕ್ತಿವಿಡಿದಿಹನು ॥
ಪರಮಭಕ್ತರೆಕೇಳಿರಾತ । ತ್ಪುರದವಿದ್ಯಾಪ್ರೌಢರಾಭೂ ।
ಸುರರುತದ್ಬಾಲಕನ ಪಳಿವವರಾದರಡಿಗಡಿಗೆ ॥ ೨೦ ॥
ನಿಂದೆಗೈವರಕಣ್ಗೆಬೀಳದ । ಲೊಂದೆಮನದಲಿ ಪೋಗಿಕರ್ತನ ।
ವಂದಿಸುತೆಸಲೆಸೇವೆಮಾಳ್ಪನು ಬಹಳ ಮೋದದಲಿ ॥

ನಿಂದುಕೈಗಳಮುಗಿದುಮನದಲಿ । ಮಂದಮತಿನಿರ್ಭಾಗ್ಯನಾನಿಹೆ
ನೆಂದುಗುರುಕೃಪೆಯಾಗುವದೊತನಗೆಂದುಪ್ರಾರ್ಥಿಸುವಾ ॥ ೨೧ ॥
ಪುರದಘನದೇಸಾಯಿಯಷ್ಟ್ಯೆ । ಸಿರಿಯಸಂಪದವಡೆದುಶಾಸ್ತ್ರೀ ।
ತ್ಕರದಿಪಂಡಿತನೆನಿಸಿಹೊಗಳಿಕೆನಡಿಸಿನಾಡೊಳಗೆ ॥
ಪರಮಪಂಡಿತರೆಲ್ಲರನು ಸ । ತ್ವರದಿಸೋಲಿಸಿ ಮೆರೆವುತಿರುವನು ।
ಧರೆಗೆವೆಂಕಪ್ಪಯ್ಯನೆಂಬಾಖ್ಯೆಯಲಿ ಖ್ಯಾತಿಯಲಿ ॥ ೨೨ ॥
ಪರಿದುಪಸರಿಸೆಪೆಸರುಪದಪಿಂ । ದಿರದೆನಾಲ್ದೆಸೆಗಳಲಿಸುದ್ದಿಯು ।
ನರಿದುಶಂಕರಭಾರತಿಯು ತನಗಿಮವೆಬೆರಗೆನುತಾ ॥
ಧರೆಗೆಸರಿಮಿಗಿಲಿಲ್ಲವೆನ್ನಿಸಿ । ಮೆರೆವೆನಾನಿವ ನೋಡಬೇಕೆಂ ।
ದಿರದೆಹೊರಟನುಹೇಳಲೇನಾಗುರುವಿನುತ್ಸವವ ॥ ೨೩ ॥
ತನ್ನಶಿಷ್ಯರ್ವೆರಿಸಿಭಾರತಿ । ತನ್ನೊಳಸಮಾಧಾನಗೊಂಡುರೆ ।
ಮನ್ನಣೆಯಭಟ್ಟಂಗಿಯ ಡಿಗಡಿಗಿರದೆಹೊಗಳಿಸುತಾ ॥
ನನ್ನಿಯಿದುಜೈಸುವೆನ ಗಡನಾ । ನುನ್ನತೋನ್ನತಶಾಸ್ತ್ರತರ್ಕದೊ ।
ಳೆನ್ನುತಾಗಳೆಡಂಬಳಕ್ಕೈತಂದನೇವೇಳ್ವೆ ॥ ೨೪ ॥
ಸಿರಿಯೊಳೆಸೆಯುವಭಕ್ತರೇ ಕೇ । ಳರಿ ವಿನೂತನತರ್ಕದಾಟವ ।
ನರರೆ ಸೋತವನಿರದೆಕೊಡುವದು ಸರ್ವಸಂಪದವ ॥
ಸರಸಸಭೆಯಲಿವೇದಶಾಸ್ತ್ರೀ । ತ್ಕರಗಳಲಿಜಯಶೀಲನಾವನೊ ।
ಪಂಕಿಸೆಳೆಭೂಪಾಲನೀನೆಂತೆಂದಭಾರತಿಯು ॥ ೨೫ ॥
ಎಂದುಪಂಥವನೊಡ್ಡುತಿರೆತಿಳಿ । ದಂದುತದ್ದೇಸಾಯಿಸಂತಸ ।
ದಿಂದೆಮೂರೇದಿನದತರ್ಕಕ್ಕೊಪ್ಪಿದನು ಬಳಿಕ ॥
ಹೊಂದುವದುಸೋಲಿವಗೆಗೆಲವೆನ । ಗಂದದಲಿಬಂದಪುದುಸಂಪದ ।
ವೆಂದುಭಾರತಿಬಹಳಸಂಭ್ರಮದಲ್ಲಿಬೆರೆತಿಹನು ॥ ೨೬ ॥
ನಡೆದುದವರೀರ್ವರಿಗೆತರ್ಕದ । ಕಡುಹುಮಿಗಿಲೆರಡನೆಯದಿವಸದ ।
ಕಡೆಗೆತೋರಿರೆತನಗೆಸೋಲಾಕ್ಷಣಕೆದೇಸಾಯಿ ॥
ತಡೆಯುವದುಗಡನಾಳೆತರ್ಕವ । ನಡಿಸುವೆನು ಶ್ರೀ ಗುರುವೆನಾನೇಂ ।
ಬಿಡೆನುಗುರುಕೃಪೆಯಿರಲಿತನಗೆಂತೆಂದುಪೊಡಮೊಟ್ಟ ॥ ೨೭ ॥

ನೆರೆದುಭೂಸುರರೆಲ್ಲಚಿಂತಾ । ಭರಿತರಾಗಿಯೆವಿವಿಧಕಲ್ಪನೆ ।
ವೆರಸಿನಿಲ್ಲದೆಬಂದುಭೂಪಗೆಧೈರ್ಯ ಹೇಳಿದರು ॥
ಧೊರೆಯೆನಾಳಿಗೆಗೆಲವುತವಗೆಂ । ದೊರೆದುಸಂತಸಬೀರಿಸುವಮ್ಮನೆ ।
ಹರಿದುಹೋದರುಬಹಳದುಮ್ಮಾನದಲಿಮನೆಗಳಿಗೆ ॥ ೨೮ ॥
ಧೀರನುರುವಿಕ್ರಮನುಗುಣಗಂ । ಭೀರನಾದೇಸಾಯಿಚಿಂತಾ ।
ಭಾರದಲಿಕುಳಿತಿರಲುತೋರ್ದುದುಸಂಜೆಯನಿತರಲಿ ॥
ಸಾರಸುವಿಚಾರದಲಿನಿಜಗುರು । ವೀರನಡಿದಾವರೆಯನಗಲದೆ ।
ವಿರಿಧ್ಯಾನಿಸಹತ್ತಿದನುದೇಸಾಯಿ ಗುಪ್ತಸಲಿ ॥ ೨೯ ॥
ಊರೊಳಡೆಯಾಡುತ್ತೆದ್ವಿಜರುರೆ । ಸೇರದಾಚಿಂತೆಯಲಿ ಕುದಿಯುತೆ ।
ಧೀರಕರ್ತನಪಾದಭಕ್ತನ ಕಂಡು ಮಾರ್ಗದಲಿ ॥
ಸ್ವೈರಸದೆಕೈವಿಡಿದನಿಲ್ಲಿಸಿ । ಪೌರಭೂಸುರತಿಲಕನೀತನಿ ।
ಗಾರುಪಾಸಟಿಯೆಂದು ಮಿಗೆನಿಂದಿಸಿದರಾತನಿಗೆ ॥ ೩೦ ॥
ಇರುವನೀತಫಕೀರನಡಿಯಲಿ । ನಿರುತಸೇವಿಸುತಲ್ಲಿತನ್ನಯ ।
ಗುರುಕಟಾಕ್ಷವಪಡೆದುಸಹಜದಿಸಕಲವಿದ್ಯೆಯಲಿ ॥
ಪರಮಪಂಡಿತನೆನಿಸಿಕೊಂಡಿರು । ತಿರುವನೀತನೆಬಂದಭಾರತಿ ।
ಗಿರದೆಸ್ಸೋಲಿಪನೆಂದುಬಹುಚೇಷ್ಟೆಗಳಮಾಡಿದರು ॥ ೩೧ ॥
ಪಳಿಯನುಡಿಗಳ ಕೇಳ್ದು ಹೊಟ್ಟೆಯೊ । ಳಲಗುತಿರುಪಿದಪೋಲದಾಗಿರ ।
ಲೊಳಗೆಕಳವಳಗೊಂಡುನಿಲ್ಲದಲಾಕುಮಾರಕನು ॥
ಚಲಿಸಿದನುಗುರುಪಾದಪದ್ಮಂ । ಗಳಿಗೆನಮಿಸಿದನವನುಪಥದಲಿ ।
ಪಳಿಯವೃತ್ತಾಂತವನುಕಂಬನಿಸೂಸೆಪೇಳಿದನು ॥ ೩೨ ॥
ಮೊರೆಯನಿಟ್ಟಾಬಾಲಮುಖದಿಂ । ದರಿತುಕರ್ತನುನಗುತಲಾತಗೆ ।
ಭರದಿಮಿಗೆಹದಗೈದುಸೇದಿಸುಸಿದ್ಧಪತ್ರಿಯೆನೆ ॥
ಗುರುವಿನಪ್ಪಣೆಯಂತೆತದ್ದೂ । ಸುರಸುಪುತ್ರನುಹದವನಾಗಿಸಿ ।
ಹರುಷದಲಿತಂದಿತ್ತುಸಲೆತಲೆವಾಗಿನಿಂತಿರಲು ॥ ೩೩ ॥
ಗುರುಮಹಾತ್ಮಕನಾದಕರ್ತನು । ಪರಮಪತ್ರಿಯನಿಟ್ಟುಹೊಗೆಮಿಗೆ ।
ಪೊರಡೆಕಡೆಗಣ್ಕಿಡಿಯಸೂಸಿರೆಸೇದಿದನು ಬಳಿಕಾ ॥

ಕರುಣದಿಂಪತ್ರಿಯನುನಿಜ ಕಿಂ । ಕರಗೆ ಸೇದಿಸಿಹರಿಸಿದನುಗಡ ।
ಗುರುಚರಣಸದ್ಭಕ್ತನಿನಗೇಕಿನ್ನುಭಯವೆಂದಾ ॥ ೩೪ ॥
ಸರಸಸಭೆಯಲಿನಾಳೆನಡೆವ । ಬ್ಬರದತರ್ಕವು ನನ್ನದದುನಾ ।
ನಿರಲಿಕೆನ್ನಯಧೊರೆಗದೇತಕೆಬರಿದೆಶ್ರಮವಿನ್ನು ॥
ಮೆರೆವಶಂಕರಭಾರತಿಯನಾ । ನರೆಗಳಿಗೆಯಲಿಸೋಲಿಸುವೆನೆಂ ।
ದೊರೆದುಬಾನಡೆಯೆಂದನಾಹುಡುಗನಿಗೆಗುರುರಾಯಾ ॥ ೩೫ ॥
ಗುರುವಚನವನುಕೇಳ್ಳುತನಗ । ಚ್ಚರಿಯುಸಂತಸವಾಗೆ ಗುರುಪದ ।
ಕೆರಗಿತದ್ಬಾಲಕನುಹೊರಟನು ಬಹಳಧೈರ್ಯದಲಿ ॥
ಅರಮನೆಗೆನಡೆತಂದನಾಭೂ । ಸುರರಮಧ್ಯದೊಳೆಸೆಯುತಿರುವಾ ।
ಧೊರೆಗೆ ಪ್ರಾರ್ಥನೆಗೈದನೈಗುರುಪೇಳಿದಂದದಲಿ ॥ ೩೬ ॥
ಬರುವೆನಾಳೆಗೆಸಭೆಗೆವಿದ್ಯಾ । ಭರದಿಬಂದಿಹಭಾರತಿಗೆ ಮೇ ।
ಲರಿತುತರ್ಕವನೂಡುವೆನುಜೈಸುವೆನು ಸೈಯೆನಿಸಿ ॥
ಧೊರೆಯೆತಾವೆನಗಾಜ್ಞೆಗೊಡುವದು । ಪರಿಕಿಪುದುನಿಜಪುರದಭೂಸುರ ।
ವರಕುಮಾರನತರ್ಕನವಚಾತುರ್ಯಗಳನೆಂದಾ ॥ ೩೭ ॥
ಹುಡುಗನಾಡಿದನುಡಿಗೆತನ್ನೃಪ । ಬಿಡದೆವಿಪ್ರರುನಕ್ಕರಾತನ ।
ಕಡೆಗೆನೋಡುತೆಮುಂದೆಕರೆದರುಬಹಳಹಾಸ ದಲಿ ॥
ಹಡೆದತಾಯ್ತಂದೆಗಳುನಿನ್ನೀ । ಯೊಡಲರಕ್ಷಣೆಗಾಗಿಕಷ್ಟಂ ।
ಬಡುವದಿಂದಿಗೆಬಿಡಿಸಿದೈನೀನೆಂದರವರಾಗ ॥ ೩೮ ॥
ಹೌದುಭೂಸುರಪುತ್ರನೈನೀ । ಹೌದುಕುಲದೀಪಕನುನೀನೈ ।
ಹೌದುವಂಶೋದ್ಧಾರಕನುಶಾಸ್ತ್ರಜ್ಞನೈನೀನು ॥
ಹೌದುನವವ್ಯಾಕರಣಪಂಡಿತ । ಹೌದುನೀದಿಗ್ವಿಜಯಶೀಲನು ।
ಹೌದುನಾವೇನರಿಯವೇನಿಜವೆಂದರೈನಗುತಾ ॥ ೩೯ ॥
ಅವರಹಾಸ್ಯದನುಡಿಯಕೇಳು । ತ್ತವರಭಾವವನೆಲ್ಲವನುತಾ ।
ನವನುತಿಳಿಯುತೆಮತ್ತೆನುಡಿದನು ಹುಡಗನಂಜದಲೆ ॥
ಇವನುವಿದ್ಯಾಹೀನನೆಂದೆಂ । ಬುವದನರಿತಿಂತೆನಗೆಮಾತಾ ।
ಡುವಿರಿಭ್ರಾಂತಿಯಬಿಡಿರಿಕೊಡಿರೆನಗಾಜ್ಞೆನೀವೆಂದಾ ॥ ೪೦ ॥

## ೯ ಊನೇಂಸ ಡಂಬಳದಲ್ಲಿ ಭೂಸುರನಿಗೆಪ್ರಸನ್ನರಾದದ್ದು೬೫

ಬರಿಯಮಾತುಗಳೇಂಪ್ರಯೋಜನ । ಬರಿದೆಗಳುಹುವನಲ್ಲನಾಳಿಗೆ ।
ಬರುವೆಸಖಿಯಲಿಗೆಲ್ಲುವೆನುನೀವ್ನೋಡಿರೆನುತಿರಲು ॥
ಗುರುಫಕೀರೇಶ್ವರನುತಾನೇ । ಹಿರಿಯನೋರ್ವನವೇಷದಲಿಬಂ ।
ದರರೆಸಂಗತಿಕೇಳ್ದು ಧೊರೆಗಿಂತೆಂದನೇವೇಳ್ವೆ ॥ ೪೧ ॥
ಈತನಂದವ್ರುನನಗೆಗೊತ್ತಿಹ । ದೀತನತಿಶಯಮೂರ್ಖನೀತನ ।
ರೀತಿನೂತನವಿಹುದುಬಲ್ಲೆನುಹಿಡಿವಮಾತಿನಲಿ ॥
ಸೋತುನಡೆವನನಲ್ಲಜಗದೊಳ । ಗೀತಗಪ್ಪಣೆಕೊಡಿರಿಬೆಳಗಿನೊ ।
ಳೀತನನುಪರಿಕಿಸಿರಿನೀವೆಂದೆಂದನಾಕರ್ತಾ ॥ ೪೨ ॥
ಪಿರಿಯನಾಪರಿಪೇಳೆಸಕಲರು । ಧೊರೆಯಸಮ್ಮತಿವಟ್ಟನಾಳಿಗೆ ।
ಬರುವದೆಂದಪ್ಪಣೆಯನಿತ್ತರುನಗೆಯನುಡಿಗಳಲಿ ॥
ಹಿರಿಯರಂತಃಕರಣವಾಯಿತ್ತಾ । ಕಿರಿಯನೋಳಸಾಕಾನುಧನ್ಯನು ।
ಬರುವೆನೆಂದಾ ಶ್ರೀಫಕೀರನಭಕ್ತಹೊರಹೊರಟಾ ॥ ೪೩ ॥
ಭರದಿತಾನಶೆತಂಮುಕರ್ತನ । ಚರಣಕಮಲಕ್ಕೆರಗಿದನುಬಿಡ ।
ದರುಪಿದನುತಾನೆಲ್ಲವೃತ್ತಾಂತವನುಗುಪ್ತದಲಿ ॥
ಗುರುದಿಗಂಬರನತ್ತಕರ್ತನು । ಹರಸಿನನುತದ್ಬಾಲಕಂಗತಿ ।
ಹರುಷದಲಿನೀವ್ಕೇಳಿರೈಗುರುಭಕ್ತರೆಂಬನರು ॥ ೪೪ ॥
ಮೆರೆವಭಾರತಿಗಿರದೆಸೋಲಿಸು । ಪುರದವಿಪ್ರರಭರನತಗ್ಗಿಸು ।
ಧೊರೆಗೆಮಿಗೆ ನೀನೆಸಲಿಸುದೊರಕಿಸುಶಾಸ್ತ್ರಿವೃತ್ತಿಗಳ ॥
ವರಯಶೋಸಿಧಿಯೆನಿಸುಜಗದೊಳು । ಶರಣರಂಘ್ರಿಯೊಳಿರಿಸುಮನವನು ।
ಗುರುಚರಣಶಿಶುವಾಗುತಿಳಿಯೆಂದೆಂದನಾಕರ್ತಾ ॥ ೪೫ ॥
ಹರುಷಗೊಳ್ಳಸುತಂದೆತಾಯ್ಗಳಿ । ಗಿರಿಸುಸಮುಲಕ್ಷನಮುಲೋಕದಿ ।
ಪರಿಪರಿಯಸುಖಭೋಗಿಸೈನೀನೆನ್ನುತಾಕರ್ತಾ ॥
ಇರುಳದಾಯಿತುಹೋಗುಮನೆಗೆಂ । ದೊರೆಯಲಾಕ್ಷಣದಲ್ಲಿಬಾಲಕ ।
ನೆರಗಿಹೊರಟನುಮನೆಗೆಬಹಳಾನಂದಲಹರಿಯಲಿ ॥ ೪೬ ॥
ಇಳೆಯೊಳುಳ್ಳಸಮಸ್ತಭಕ್ತರೆ । ನಲಿದುಕೇಳಿರಿತದ್ವಿಜಾತ್ಮಜ ।
ನೊಳಗೆಬೆಳಗಿರೆಶ್ರೀಫಕೀರೇಶ್ವರಕಟಾಕ್ಷವದು ॥

ತಳೆದಘನಧೈರ್ಯದಲಿಸಮ್ಮದ । ದಳೆದನಿಜಮನದಲ್ಲಿಸಲೆಸಂ ।
ಚಲಿಸಿವಾಕಳೆಯಲ್ಲಿನಿಶೆಯಲಿಹೋದನವಮನೆಗೆ ॥ ೪೭ ॥
ಸೂರನುದಯಂಗೊಳಲುಶಂಕರ । ಭಾರತಿಯವೇಶಾಯಿಗೆಂದನು ।
ಕಾರಭಾರವವೇನುತಡಮಾಡುವರೆನೀನಿನ್ನು ॥
ಸೂರಿಮಾಳ್ಪದುತರ್ಕವನುನಿನ । ಗಾರುಸರಿಯಿಲ್ಲೆಂದುಕೇಳಿಹೆ ।
ಧೀರನೈನೀನೇಳುಸಭೆಗಿಂತೆಂದುನಸುನಕ್ಕಾ ॥ ೪೮ ॥
ಮಾಡುವೆನುತರ್ಕವನುಶಾಂಬನು । ಮಾಡಿದಂತಾಗುವನುತುಸುತಡ ।
ಮಾಡುವೆನುಗಡನಿಜಪುರೋಹಿತಕುವರತಾಂಬಂದು ॥
ಮಾಡಿಹನುಪ್ರಾರ್ಥನೆಯನಾತನು । ಮಾಡುವನುತರ್ಕವನುಕಡೆಗಾಂ ।
ಮಾಡುವೆನುನೋಡುವೆನುಸ್ಮರಿಸಿರೆಂನದೇಸಾಯಿ ॥ ೪೯ ॥
ಆವನೊಳ್ಳೆತುನಿಜಪುರೋಹಿತ । ನ ದೊಡಾಗಲಿತರ್ಕವಾದಕ ।
ನಾವೊಡಾಗಲಿಸಭೆಯುಕೂಡಲಿಬಹಳಹೊತ್ತಾಯ್ತು ॥
ಭೀವವಿಲ್ಲದೆನಿಮ್ಮಕಡೆಯವ । ರಾವರಾಯಿತುಬೇಗಬರುವದು ।
ವಾದವೇನಿವಕೆಂದು ನುಡಿದನುಬಂದಭಾರತಿಯು ॥ ೫೦ ॥
ದುರಿತಸಂಹಾರನಲಿಪುಳಕಿಸಿ । ಸೆರಗುತಿರುವರೆಶೋಕಹಕ್ಕರೆ ।
ಸ್ಮರಿಸಿಗುರುವಿಗೆಸೀವಕೇಳಿರಿ ಗುರುಕಥಾಮೃತವ ॥
ಗುರುವೆನೀಗತಿಯೆನ್ನುತಾಸುಕು । ವರನಸ್ನಾನವಮಾಡಿಕೊಂಡಾ ।
ತುರದಿಚಾಚಿದಶಿರವಗುರುಚರಣಾರವಿಂದದಲಿ ॥ ೫೧ ॥
ಗುರುವಿನಲಿಸೇವಕನನಿರ್ಮಲ । ತರವನಿಷ್ಠೆಯವೆನಿತೊ ಶ್ರೀಗುರು ।
ವರಕಟಾಕ್ಷವದೆಂತೊತಿಳಿಯಲ್ಕಳವೆಲೋಕದಲಿ ॥
ವರಘಕೀರನಬಾಗಿದಾಸುಕು । ವರನಿಗಾಶೀರ್ವಾದವಮಾಡಿಯೆ ।
ಧರೆಗೆ ಶ್ರೀವಾಗ್ದೇವಿಜಿಹ್ವೆಯೊಳಿಹಳುನಿನಗೆಂದಾ ॥ ೫೨ ॥
ಚನ್ನಬಸವನುಬಸವಲಿಂಗನು । ನಿನ್ನಕಡೆಗೇನಿಂತುಕೊಂಬರು ।
ದೀನದೀನಘಕೀರಪರಶಿವಪಾಹಿಮಾಮೆನ್ನು ॥
ಚನ್ನಿಗನೆನೀಂ ಪೋಗುಸಭೆಯಲಿ । ಮನ್ನಣೆಯುದೊರಕುವದುಸುಲಭದಿ ।
ನನ್ನಿಯಿದುನಾನಡಿಸಿಕೊಡುವೆನುಹೆದರಬೇಡೆಂದಾ ॥ ೫೩ ॥

ಗುರುವೆ ತಮ್ಮಯ ಕರುಣವಾದೊಡೆ । ಕೊರತೆಯೇನಹುದೆಂದು ಕರ್ತನ ।
ಚರಣಕಮಲಕ್ಕೆರಗಿ ಹೊರಟನು ತತ್ಕುಮಾರಕನು ॥
ಭರದಿ ಬಂದನು ಸಭೆಗೆ ಸರ್ವರು । ಕರೆದ ರಾತನ ಕಂಡು ವಿಸ್ಮಯ ।
ಭರಿತವಾದುದು ಕೂಡಿದಲ್ಲಿಯ ಸಕಲಜನಜಾಲ ॥ ೫೪ ॥
ಪರಮ ರಸಿಕರ ಗಾಯಕರ ಬಹು । ತರದ ವಾಕ್ಯೋವಿದರ ವಿದ್ವಾಂ ।
ಸರ ಧನಾಢ್ಯರ ಮಂತ್ರಗಾರರ ಸಾಧು ಸಜ್ಜನರ ॥
ವರಜಿತಾಕ್ಷರ ಬೇರೆ ಕೆಲವರ । ತರತರದ ಜನ ಶೋಭೆಯಲಿ ಸಭೆ ।
ಮೆರೆದುದೈ ಸಲೆ ಬಹಳ ವೈಭವದೆಲ್ಲ ಸೊಬಗಿನಲಿ ॥ ೫೫ ॥
ಇವನು ಬಂದವನಾರೊ ಸಭೆಯೊಳ । ಗಿವನು ಮಡುಗನ ರೂಪಗೊಂಡಿಹ ।
ಹರಿಯೊ ಹರನೋ ಬ್ರಹ್ಮನೋ ವೇಷ ಸುರಮುನೀಶ್ವರನೋ ॥
ಇವನ ಬಗೆಯನು ಬಗೆಯಲಸದಳ । ವಿವನು ತಾಂ ಮುಂದೇನು ಮಾಳ್ಪನೊ ।
ಶಿವನೆ ಬಲ್ಲನೆನುತ್ತೆ ಕಂಪನಗೊಂಡುದಾ ಸಭೆಯು ॥ ೫೬ ॥
ಒಡನೆ ಪ್ರಾರಂಭಿಸಿತು ತರ್ಕವು । ಪೊಡವಿಯ ಲಿಪ್ಪೊಸತೆಂಬಿನಂತಾ ।
ನೆಡೆಬಿಡದೆ ನಡೆದತ್ತು ಸಭೆಗಡಬೊಂಬೆಯಂದದಲಿ ॥
ಯೆಡೆವಿಡಿದು ಕಾಳಿಕೆ ತ್ತು ಮಿಸುಗದೆ । ಮೃಡನ ಕರ್ತನ ತಂತ್ರಮಾತ್ರದಿ ।
ಕಡೆಗೆ ಕುಂಠಿತನಾಗಿ ಸೈವೆ ಗಾಢ ಭಾರತಿಯು ॥ ೫೭ ॥
ಬಾಲಶಶಿಶೇಖರನು ಜಗದಲಿ । ಬಾಲಲೀಲಾನಂದನಾತನು ।
ಬಾಲಲೀಲೆಯೆ ತನ್ನ ಲೀಲೆಯದೆಂದು ಶಂಕರನು ।
ಬಾಲಕಂಗುರೆ ಪ್ರೇಮದಿಂದಲೆ । ಸೋಲನೀಯದೆ ಜಯವನಿತ್ತನೆ ।
ಸೋಲನಿತ್ತನೆ ಸಾಕು ತನಗೆಂತೆಂದ ಭಾರತಿಯು ॥ ೫೮ ॥
ಎಂದು ಬಹಳಾಕ್ಷೇಪಮುಖದಿಂ । ದಂದು ಶಂಕರಭಾರತಿಯು ಸೋ ।
ಲಿಂದು ತನಗಾಯ್ತೆಂದು ಶಂಕರಪಾದವನು ನೆನೆದು ॥
ಇಂದು ನಿನ್ನಯ ಬಿರುದು ಕೊತ್ತಗೆ । ಹೋದಿತೆಂದವಕುಂದು ಕೊರತೆ ಗ ।
ಳೆಂದು ಚಿಂತಾಪಸಿತೆಗೆದೆಗೊಟ್ಟ ಪರ್ಣನೇ ವೇಳ್ವ ॥ ೫೯ ॥
ಪುರದ ರಾಜನ ಭಕ್ತನೈಗಡ । ವರಪುರೋಹಿತ ಕುವರನೀತನು ।
ಪರಮ ಸೇವಕ ಸಿವರ ಭಕ್ತಿಗೆ ಮೆಚ್ಚಿ ಗುರುರಾಯಾ ॥

ಪರವಶನುತಾನಾಗಿಜಯವನು । ಕರುಣಿಸಿದನವನಿಚ್ಛೆಯಿಂದೊ ।
ಳರಿದುಕೋನೀನೆಂದುಬರವಾಣಿಭಾರತಿಗೆ ॥ ೬೦ ॥
ನೀನುಸಾಂಬನಪರಮಭಕ್ತನು । ನೀನುಸದ್ಗುರುಸತ್ಯಸೇವಕ ।
ನೀನುಭೂಸುರಕುಲಸುಪುತ್ರನುಭುವನದೊಳಗಹುದು ॥
ನೀನೆಸೈದಿಗ್ವಿಜಯಪಂಡಿತ । ನಾನೆಸೆ ಇತವನಿಪಕೆಸಂಶಯ ।
ವೇನುಬಾರೆಂದಪ್ಪಿದನುಬಾಲಕನ ಭಾರತಿಯು ॥ ೬೧ ॥
ರೂಢಿಯಲಿತಿಳಿಯದಲೆನಿಂದೆಯ । ನಾಡಿದೆವುನಿನಗಾವುಚೇಷ್ಟೆಯ ।
ಮಾಡಿದೆವುಕೃಪೆಯಿಟ್ಟುಕ್ಷಮಿಸ್ಕೆಕ್ಷಮಿಸುನೀನೆಂದು ॥
ಕೂಡೆತದ್ದೇಸಾಯಿಭೂಸುರ । ರೋಡಿಬಂದವುರ್ದಪ್ಪಿದರುಕೊಂ ।
ಡಾಡಿದರುಬಹುವಿಧದೊಳಾಬಾಲಕನಕೈಪಿಡಿದು ॥ ೬೨ ॥
ಧರೆಯಭಕ್ತರೆಕೇಳಿರಾಧೊರೆ । ಗರರೆಭಾರತಿನುಡಿದನೀತೆರ ।
ಹರುಷದಿಂದಾಂಕೊಡುವೆನೆನ್ನಯಸ್ವಾಸ್ತಿವೃತ್ತಿಗಳಾ ॥
ಗುರುಗಳೇಬೇಕಿಲ್ಲಸಂಪದ । ಧರೆಯೊಳಾಯಿತುಕೀರ್ತಿಸಾಕಿದು ।
ಗುರುತವೀಯುವದೆನ್ನುತಾದೇಸಾಯಿಕೈಮುಗಿದ ॥ ೬೩ ॥
ಆದುದಪಜಯವೆನಗೆಕಟ್ಟಳೆ । ಯಾದಪರಿಯಲಿನೀನುನಮ್ಮಯ ।
ಮೇದಿನೀಸ್ವಾಸ್ತಿಗಳಕೈಕೊಳ್ಳುವದುಸಾಜವಿದು ॥
ಆದೊಡೀಜಗದಲ್ಲಿಬೇಡುವ ॥ ದಾದವುತಪೇಳ್ ಕೊಡುವೆನೆಂದನ ।
ಲಾಧೊರೆಯುಭಾರತಿಗೆಬೇಡಿದತನ್ನಪೇಕ್ಷೆಯನು ॥ ೬೪ ॥
ಕೊಡಿರಿನಿಜಗೌರವದಭಾಗವ । ಪೊಡವಿಯುಲಿಭೂಸುರರವೆಲ್ಲಡ ।
ನಡಿಸುವಧಿಕಾರುವದುತನಗಿರಲೆಂದದೇಸಾಯಿ ॥
ಹಿಡಿಧೊರೆಯೆನಾಂಕೊಡುವೆನಿನಗೆಂ । ದೊಡನೆಭಾರತಿಬರೆದುಕೊಟ್ಟನು ।
ನಡಿಸುನೀನಕಾಧಿರವೆಂದನುನಡೆಗುವಿೂವರೆಗು ॥ ೬೫ ॥
ಆಪುರೋಹಿತಶುವರನಾಸಭೆ । ಗಾಪರಿಯೊಳೆಲ್ಲರಿಗ ತಾನಾ ।
ಶ್ರೀಫಕೀರೇಶ್ವರನಸತ್ಕೃಪೆಯಿಂದೆ ಮೇಳೆನಿಸೆ ॥
ಈ ಪರಿಯುಲೋಕದೊಳಗಾರ್ಕೆ । ಭಾಪುರೇನೀಪಂಡಿತೋತ್ತಮ ।
ನೀಪಡೆದುಕೋಕೊಡುವೆಸ್ವಾಸ್ತಿಗಳೆಂದದೇಸಾಯಿ ॥ ೬೬ ॥

ಮರುದಿವಸದೇಸಾಯಿ ಪುರಸಿಂ । ಗರಿಸಿಪುರದಧಿದೈವನಿಕರ ।
ಕ್ಕುರುವಿಧಾನದಿತೃಪ್ತಿಬಡಿಸಿದನತುಳವಿಭವದಲಿ ॥
ನೆರೆದಸನ್ಯಾಸಿಗಳಿಗಾವಿ । ಪ್ರರಿಗೆವಿದ್ವಾಂಸರಿಗೆನಾನಾ ।
ತರದಯಾಚಕಜನಕೆಬೇಡಿದನಿತ್ತಮನದಣಿಯೆ ॥ ೬೭ ॥
ಅಂದಿಗಾದೇಸಾಯಿಸಂತಸ । ದಿಂದಲಾಪಸುಳಂಗೆಸ್ವಾಸ್ತಿಯ ।
ನಂದವಾಗಿರೆಹಾಕಿಕೊಟ್ಟನು ಬಹಳಮನ್ನಿಸಿಯೆ ॥
ಇಂದುಬಡತನಬಿಡಿಸಿದೈನೀ । ಕಂದವಂಶೋದ್ಧಾರಮಾಡಿದೆ ।
ಯೆಂದುತಾಯ್ತಂದೆಗಳುನಲಿದಾಡಿದರುಪರಿಲಿರಳು ॥ ೬೮ ॥
ಕೇಳಿನೃಸೀವೆಲ್ಲರುಂತ । ದ್ಬಾಲಕನುಗುರುಭಕ್ತನಾಗಿಯೆ ।
ನೀಲಕಂಠಾಖ್ಯೆಯಿಂಶೋಭಿಸಿಧೊರೆಗೆಬಿಡದೆಲಿಸಿ ॥
ಕಾಲಕಾಲಕೆಸರ್ವವಿದ್ಯಾ । ಕೀಲನೆನ್ನಿಸಿಬಹಳಕೀರ್ತಿಯ ।
ಶಾಳಿಬಾಳಿದನೆಲ್ಲರಿಗೆಪ್ರಿಯನೆನಿಸಿಲೋಕದಲಿ ॥ ೬೯ ॥
ಪೌರುವಿಪ್ರರುಬಾಗಿನಡೆವರು । ಕಾರಭಾರಿಗಳಂಜಿನಡೆವರು ।
ಧೀರವೆಂಕಪ್ಪಯ್ಯಧೊರೆಮೆಚ್ಚಿರುವನಾತನಿಗೆ ॥
ಸೇರಿದುದುಧನಕನಕಸಂಪದ । ಧಾರುಣಿಯೊಳಗ್ಗಳಿಕೆತೋರಿತು ।
ಸಾರಕರ್ತಗೆಸೇವೆಗೈದಾಬಲದಫಲವೆನಿತೋ ॥ ೭೦ ॥
ಆರರೆಬೈವರುಪ್ರೀತಿಮಾಡಿದ । ರರರೆಪಳಿವರುಹೊಗಳಹತ್ತಿದ ।
ರರರೆಬಾಧಿಪರೆಲ್ಲವೋದಂಗೊಡುವರಾತನಿಗೆ ॥
ಅರರೆಸೆಣೆಸುವರೆರಗುವರುಗಡ । ಬೆರಗದಲ್ಲವೆರೂಢಿಯುಲಿಶ್ರೀ ।
ಗುರುಕಟಾಕ್ಷದಸಾರಮಹಿಮಾತಂತ್ರವೇನಿಹುದೋ ॥ ೭೧ ॥
ಸತ್ಯಭಕ್ತಿಯಹಿಡಿದುನಡೆಯದೆ । ನಿತ್ಯಸಾಧುಸುಸಂಗವಿಲ್ಲದೆ ।
ಮತ್ತೆಶರಣರಸೇವೆಗೈಯದೆಕಾದಿದುವಿಷಯಲಿ ॥
ಹತ್ತರಿಸಿಗುರುಕೃಪೆಯಪಡೆಯದೆ । ಗೊತ್ತುತಿಳಿಯದೆಮೋಕ್ಷಮಾರ್ಗದ ।
ಸತ್ತುಹೋದಡೆಮುಕ್ತಿಯೆತ್ತಣದಯ್ಯಮಾನುಜರಿಗೆ ॥ ೭೨ ॥
ಉನ್ನತೋನ್ನತದುಃಖಸಾಗರ । ವೆನ್ನಿಸಿಹಸಂಸಾರಕಾರ್ಗಳು ।
ಮನ್ನಿಸುತೆತಾನಿಜವನರಿಯದೆಮೈಯ್ಯಕೊಬ್ಬಿನಲಿ ॥

ಮನ್ನಿಸದೆಶಿವಶರಣರಾಟಕೆ । ಬನ್ನದಿಂಪಾಡಳಿದುವಿಷಯದಿ ।
ಕುನ್ನಿಕೆಡುವನುಲೋಕದಲಿನರಕದಲಿಬೀಳುವನು ॥ ೬೩ ॥
ಪರಮಸದ್ಗುರುಬೋಧೆಗೇಳದೆ । ಗುರುವಿನಂಘ್ರಿಯನಂಬಿನಡೆಯದೆ ।
ದುರಿತಕರ್ಮದಮಾರ್ಗದಲಿನಡೆಯುತ್ತಹೆಮ್ಮೆಯಲಿ ॥
ಶರಣರನುಜರಿಜರಿದುಪಾಪೋ । ತ್ಕರದಬಾಳ್ವೆಯಬಳಸಿಕಡೆಗಾ ।
ನರಕದಲಿಬಿದ್ದಾಳ್ವುಬಳಲುವರಕಟದುರ್ಜನರು ॥ ೬೪ ॥
ಖೂಳಜನರನುಕಾಡಿಕೊಳ್ಳುತೆ । ಕೀಳುಗೆಲಸವನಡಿಸಿನಲಿಯುತೆ ।
ಮೇಳವಿಸಿದಾಸೆಯಲಿಸುಳಿಯುತೆಹಿರಿಯರಾದವರು ॥
ಹೇಳಿದಾಹಿತವಚನಕೇಳದ । ಲಾಳಿಗೊಳ್ಳುತೆಭಕ್ತಿಯಿಲ್ಲದೆ ।
ಲೋಲರಾಗಿವೆವಿಷಯದಲಿಪಾಮರರುಕೆಡುತಿಹರು ॥ ೬೫ ॥
ದುರಿತಕರ್ಮವನೀಗಿಬಿಡದಲೆ । ಪರಮಭಕ್ತಿಯಮಾರ್ಗಹಿಡಿಯದೆ ।
ಹರುಷಗೊಳ್ಳದೆಸಾಧುಜನರಿಗೆನೋಡಿದುರ್ಮದರು ॥
ಗುರುಪದದಮೇಲಿಟ್ಟುಶಬ್ದವ । ಜರಿವರವರಿಗೆಧರೆಯೊಳೆಂದಿಗು ।
ಗುರುವುವೆಚ್ಚನುಹರನುಮುನಿವನು ಹೇಳಲೇನದನು ॥ ೬೬ ॥
ಅಡಗಿಕೊಂಡೇಲೀಲೆಯಾಡು । ತ್ತಡಗಿಕೊಂಡೇಮಹಿಮೆದೋರು ।
ತ್ತಡಗಿಕೊಂಡೇಭಕ್ತರನುಮೇಲೆನಿಸುವಾತನಿಗೆ ॥
ಪೊಡವಿಯಲಿಬೇಳ್ಪರಿಗೆಬಿಡದಲೆ । ಕೊಡುವಸದ್ಗುರುಶಂಭುವಿಗೆಜಗ ।
ದೊಡೆಯನಿಗೆಕರ್ತನಿಗೆಬೆಳಗಿರಿಮಂಗಳಾರತಿಯಾ ॥ ೬೭ ॥
ಕಿರಿದಿನೊಳಗಡಗಿರ್ದಸದ್ಭ । ಕ್ತರಿಗೆಕೈವಿಡಿದೆತ್ತಿಕೊಂಡೈ ।
ಗುರುಸಮರ್ಥನುನೀನುಕರ್ತಪರಾಕುಮುದಿಪಾಚ್ಛಾ ॥
ಪುರುಷನಿರ್ಜರಧೇನುನೀನೈ । ಪರಮಮಹಿಮೂಪುರುಷನೀನೈ ।
ಗುರುನಿರಂಜನನೀನುಕರ್ತಪರಾಕುಪ್ರಭುರಾಯಾ ॥ ೬೮ ॥
ಗುರುಮಹತ್ವದಸಾರವಿಂತಿದು । ಗುರುಮಹತ್ವಮನಂತವಿಪ್ಪುದು ।
ಗುರುಮಹತ್ವವನರಿದುಪೇಳುವರಾರುಲೋಕದಲಿ ॥
ಗುರುಫಕೀರೇಶ್ವರನುಗಂಗಾ । ಧರನಮುಖದಿಂಪೇಳಿಸಿದನೀ ।
ತೆಂದಿಮುಗಿದುದು ಸಂಧಿಯೋಳನಯೆನಿಸುತಂದದಲಿ ॥ ೬೯ ॥

॥ಇತಿ ಶ್ರೀ ಶಿವಪುರಾನ್ನತ ಶಾನ್ಯಸಿಂಹಾಸನ ಶ್ರೀ ಭವಾನೀಭವಾತ್ಮಜ।
ಗಂಗನಿಂ ಪೇಳಿಸಿದ ಪೌರಾಣದೊಳ್ ಏಳನೆಯ ಸಂಧಿ ಸಮಾಪ್ತಮಿಂತು।
೪೩೭ ಪದ್ಯಂಗಳಿಗೆ ಮಂಗಲಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ

# ೮ನೇ ಸಂಧಿ.

## ಕತ ರು ಡಂಬಳದಲ್ಲಿ ಲಿಂಗಪಾವಾಡುಮಾಡಿದ್ದು

**ಸಂಧಿ ಸೂಚನೆ**

ಲಿಂಗಧರಿಸದಗುರು-ಫಕೀರನು । ಲಿಂಗವಂತರಪ್ರಸ್ತದಲಿಶಿವ ।
ಲಿಂಗನೆನಿಸಿಹನರಿಯಿರೈಲೌಕಿಕರುವೈದಿಕರು ॥ಪಲ್ಲ॥

ತನ್ನದಿನಮಾನವನುನೋಡುತೆ । ತನ್ನೊಳಗೆತಾನಡಗಿಕೊಳ್ಳುತೆ ।
ತನ್ನಕಾರಣಕಾರ್ಯನಡಿಸುತೆತಾನುಕಿರಿವಾಗಿ ॥
ಮನ್ನಣೆಯನುರೆಕೊಡುತೆಪರಜನ । ಕನ್ನವನುಕರುಣಿಸುತೇಲೋಕದೊ ।
ಳಿನ್ನುಮಾರಿಗುಸಿಲ್ಕದಾಡುವನಾಮಹಾತ್ಮಕನು ॥ ೧ ॥

ಘಾಸಿಮಾಡನುಯಾರಿಗಾದರು । ಮೋಸಗೈಯನುಜಗದೊಳೆಂದಿಗು ।
ದೂಷಿಸನುಗಡಲೋಕದೊಳಗನ್ಯರನು-ಗುರುರಾಯ ॥
ಆಶಿಸನುತನಗೇನ-ಮಿಳೆಯೊಳ । ಗೇಸುಕಾಲಕ್ಕಾದೊಡಂಮನ ।
ಮೊಸಲಾಗಿರೆಭಿಕ್ಷೆಬೇಡುವಹಿಡಿಯಿರೈಗುರು-ತಾ ॥ ೨ ॥

ನರಜನಕೆಮೈಗೂಡದಲಿರುವನು । ಪರಪರಿಯಕಾವ್ಯಾರ್ಥಕೊಡುವನು ।
ಹೊರಗೊಳಗತಾನಾಗಿಬೆಳಗುವನೀಜಗತ್ತಿನಲಿ ॥
ನಿರುತಮಾಯೆಯಬಲೆಗೆಬೀಳದ । ಲಿರುವನಾಗುರುನಾಥನಾತನ ।
ಗುರುತುಹಿಡಿಯಿರಿಹುಡಿಕಿಭುವನದಿಭಕ್ತರೆಂಬವರು ॥ ೩ ॥

ಆವಕುಲದೊಳಗಾದೊಡಂಪ್ರಭು । ದೇವನವತಾರವನುಮಾಡುವ ।
ನಾವಿಶೇಷವತಿಳಿಯನಂಶಿಕನಲ್ಲದನ್ಯನರಂ ॥
ಯಾವದುಂತಿಳಿಸದಲಶಿವಲೀ । ಲಾಪಿನೋದದೊಳಾಡುವನುಗುರು ।
ದೇವತೋರುವನಾತಗುರುತನ್ನಾರುಹಿಡಿಯುವರು ॥ ೪ ॥

ಹಾಗೆಯೆಂದಡೆಹೀಗೆಯಿರುವನು । ಹೀಗೆಯೆಂದಡೆಹಾಗೆಯಿರುವನು ।
ಹಾಗೆಹೀಗೆಯುಕೂಡಿತೋರುವನಾತನವನಿಯಲಿ ॥
ಹ್ಯಾಗೆಯೆಂದೊಡೆಕೇಳಲಸದಳ । ವಾಗಿಕಂಗೊಳಸುವನುಬಹುವಿಧ ।
ವಾಗಿಭಕ್ತಿಗೆಮಾತ್ರತೋರುವನಾತಸತ್ಯಪಿದು ॥ ೫ ॥
ಗುರುವೆನೀಗತಿಯೆನ್ನುವವರೇ । ಗುರುವಿನಾಟವನೊರೆವೆಕೇಳಿರಿ ।
ಧರೆಯೊಳಾಡಂಬಳದೊಳಾಗುರುನಾಥನಾಡುತಲಿ ॥
ಚರಣಭಕ್ತಗೆದ್ವಿಜಕುಮಾರಗೆ । ಹರಸಿಸಂಪದಗೊಟ್ಟುತಾನಿರು ।
ತಿರುವನತಿಗುಪ್ತದಲಿಬಹುದಿನಹೋದವನಿತರಲಿ ॥ ೬ ॥
ಪುರದಶೆಟ್ಟಿಯುಶೈವಮತದಲಿ । ಸಿರಿಯುಸಂಪದದಿಂದೆಮೆರೆಯುತೆ ।
ವರಗಣಾರಾಧನೆಯನೆಸಗುವದೆಂದುಮನದಂದಾ ॥
ತರಿಸಿದನುಮಾಡಿಸಿದನಾಬಹು । ತರದಸಂಗ್ರಹವೆಲ್ಲಮುಖ್ಯರ ।
ಕರಸಿಕೊಂಡಾರಂಭಿಸಿದನುರೆಪ್ರಸ್ತದುಜ್ಜುಗವಾ ॥ ೭ ॥
ಗುರುವಿನಂಘ್ರಿಯೊಳಾಜ್ಞೆಗೊಂಡೇ । ಹರಯಿಸಿದನೆಸ್ಥೆಸೆಗೆವಾರ್ತೆಯ ।
ನಿರವೆಗಣತತಿಕೂಡಿತಗಣಿತವೆನಿಸಿಶೀಘ್ರದಲಿ ॥
ತರತರದಶೋಭೆಯಲಿತತ್ಪುರ । ಮೆರೆದುದಾಜಂಗಮರಧನಿಕರ ।
ಗುರುಗಳೈಸಿರಿಕಣ್ಗೆಸೊಗಯಿಸತಿತ್ತುಬಹುವಿಧದೆ ॥ ೮ ॥
ಅರರೆಪ್ರಸ್ತದಪಾಕದುಜ್ಜುಗ । ಪರಿಪರಿಯುಮಾಳ್ಕೆಯಲಿನಡೆದುದು ।
ಪುರದೊಳೆತ್ತಲುಪ್ರಸ್ತದುತ್ಸವಕಾರ್ಯಸೊಗಯಿಸಿತು ॥
ಹರಿಹರಬ್ರಹ್ಮರನುತನ್ನೊಳ । ಗಿರಿಸಿಕೊಂಡತಿಲೀಲೆಯಾಡುವ ।
ಗುರುಫಕೀರನುಪರಿಕಿಸಲ್ಕೈತಂದನಸ್ಥಳಕೆ ॥ ೯ ॥
ನೀವುಶೆಟ್ಟರೆಭಕ್ತಿಮಾರ್ಗದೊ । ಳೀವಿಧದಪ್ರಸ್ತದಲಿಪ್ರಮಥಗ ।
ಣಾವಳಿಗೆಸಲೆತೃಪ್ತಿಬಡಿಪುದುಕೇಳುತಾಂಬಂದೆ ॥
ಆಶಿವಸ್ಮೃತಿಶ್ರುತಿವಿಚಾರದೊ । ಳೀವಿಷಯದಲಿಯರುವಿನಲಿನನ ।
ಗೀವಿರಕ್ತಾಂಗನ್ನಕೊಡುವಿರೋಯೆಂದನಾಕರ್ತಾ ॥ ೧೦ ॥
ಎರಡುದಿವಸವುಕೂಳ್ಕಾಣದ । ಲಿರುವೆನೀಪುರದಲ್ಲಿನಿಮ್ಮರು ।
ತರದಪ್ರಸ್ತಾನಂದದೊಳಗಾನಂದವೇನನಗೆ ॥

ಸರಸವೇಸಮ್ಮತವೆನಿಮಗುರೆ । ಹರುಷವೇಪೇಳೆನಲುಕೇಳ್ದಾ ।
ಪುರದಶೆಟ್ಟಿಯುಕಾಡೆಖತಿಗೊಂಡೆಂದನಾತನಿಗೆ ॥ ೧೧ ॥
ಲಿಂಗವಿಲ್ಲದಭವಿಯೆಕೇಳೀ । ಲಿಂಗವಂತರೊಳೇನುನಿನ್ನದು ।
ಜಂಗಮನೆಸೀಹೋಗುಸುಮ್ಮನೆಹೋಗೇಹೋಯೆನಲು ॥
ಸಂಗನಾಬಸವೇಶಗೊಡೆಯಗೆ । ಲಿಂಗಮಯಶಿವಲಿಂಗಮೂರ್ತಿಗೆ ।
ಜಂಗಮರುಹಾರಾಡಿಮಿಗೆನಿಂದಿಸಿದರೇವೇಳ್ವೆ ॥ ೧೨ ॥
ಗುರುಫಕೀರಗೆಲಿಂಗವಿಲ್ಲವು । ಪರಮಲಿಂಗಗಳುಂಟೆನಿಮ್ಮೊಳು ।
ಸರಸವಮಾತಿದುಮಾತಿಗೊಪ್ಪಿದೆನೆನ್ನುತಾಕರ್ತಾ ॥
ಹೊರಟನಲ್ಲಿಂಪುರದಬಸವೇ । ಶ್ವರನಮುಂದಿನಹಳ್ಳದಲಿಬಂ ।
ದೊರತೆಯೆಡೆಯಲಿಕುಳಿತನ್ನೆನೀವ್‌ಕೇಳಿರೈಮುಂದೆ ॥ ೧೩ ॥
ಇತ್ತಜಂಗಮರೆಲ್ಲರಾಗಳೆ । ಬಿತ್ತರಿಪಸಂರಂಭದಲಿಮನ ।
ವಿತ್ತುಹೊತ್ತಾಯ್ತೆಂದುಹಸಿದಿರೆಹೊಟ್ಟೆಚಿಂತಿಸುತಾ ॥
ಚಿತ್ತದಲಿತಳಮಳಿಸುತಿನ್ನುಂ । ಹೊತ್ತುಲಿಂಗಾರ್ಚನೆಗೆಬೇಕೆ ।
ನ್ನುತ್ತೆಲಿಂಗವಕಾಣದಲೆಕಂಗೆಟ್ಟರೇನೆಂಬೆ ॥ ೧೪ ॥
ಇಂದುಶೇಖರನೆಮಗೆಕಾಲವ । ತಂದನೆನ್ನುತ್ತಲ್ಲಿಜಂಗಮ ।
ರಂದುಬಹುಚಿಂತೆಯಲಿಮುಳುಗಿರಲಾಗಲಾಶೆಟ್ಟಿ ॥
ನಿಂದುಸ್ವೈವೆರಗಾಗಿಕೆಲಬಗೆ । ಯಿಂದೆಘನಭಕ್ತಿಯಲಿಕುಂದೇಂ ।
ಹೊಂದಿಕೊಂಡಿತೊಹೊಳೆಯದೆನ್ನೊಳುಶಿವಶಿವಾಯೆಂದಾ ॥ ೧೫ ॥
ಅಲ್ಲಿಜಂಗಮರೆಲ್ಲಕೂಡಿದ । ರಿಲ್ಲಿಗಂತ ವುನಮ್ಮದೆನುತಿರ ।
ಲಲ್ಲಿಜಂಗಮನಾಗಿಕರ್ತನುಬಂದನಾಕ್ಷಣಕೆ ॥
ಎಲ್ಲಲಿಂಗಗಳಾಫಕೀರನೊ । ಳಲ್ಲಿಸೇರಿಹವಾತನಂಬಿಡ ।
ದೆಲ್ಲಕಡೆಯಲಿಹುಡುಕಿಲಿಂಗವಪಡೆಯಿರೈಯೆಂದಾ ॥ ೧೬ ॥
ಶಿವನಲೀಲೆಯಗಾಧವಿರುವದು । ಭುವನದಲಿಬಹುವಿಧದಿಸಂಚರಿ ।
ಸುವನುಹುಡುಕುವಬನ್ನಿನೀವೆನ್ನುತ್ತಲಾಕರ್ತಾ ॥
ಭವಹರನಸದ್ಗುರುವಿನಾಟವೆ । ಶಿವಶರಣರದುಸತ್ಯವಿದುಮಾ ।
ನವರುತಿಳಿಯರೆನುತ್ತೆಹೊರಟನುಕರೆವುತೆಲ್ಲರನು ॥ ೧೭ ॥

ಕಂಡಿರಾಶಿವಮೂರ್ತಿಯನುನೀವ್ । ಕಂಡಿರಾಗುರುದೇವನನುನೀವ್ ।
ಕಂಡಿರಾಪ್ರತ್ಯಕ್ಷಶಿವಯೋಗೀಂದ್ರನನುನೀವು ॥
ಕಂಡಿರಾನಿಜಕರ್ತನನುನೀವ್ । ಕಂಡುಕಾಣದರೂಪನನುನೀವ್ ।
ಕಂಡಿರೇನ್ನೈಶ್ರೀಫಕೀರನಹೇಳಿರೆಂದೆನುತಾ ॥ ೧೮ ॥
ಕಂಡಿರಾನೀವ್ಶರಣರಾಪ್ತನ । ಕಂಡಿರಾನೀವ್ಭಕ್ತಕರುಣಿಯ ।
ಕಂಡಿರಾಪ್ರತ್ಯಕ್ಷಸದ್ಗುರುಮೂರ್ತಿಗುರುವರನ ॥
ಕಂಡಿರಾನೀವ್ವಿಶ್ವರೂಪನ । ಕಂಡಿರಾನೀವ್ಶ್ರೀಫಕೀರನ ।
ಕಂಡಿರಾಕಣ್ಣಿಂದೆಕಂಡಿರೆಹೇಳಿರೆಂದೆನುತಾ ॥ ೧೯ ॥
ಗುರುವೆನೀವಿಂತೇಕೆಹೋದಿರಿ । ಗುರುವೆನೀವೆಲ್ಲಡಗಿಕೊಂಡಿರಿ ।
ಗುರುವೆನೀವೆಲ್ಲಿರುವಿರೈಸೂಚಿಸಿರಿನನಗೆನುತಾ ॥
ಗುರುವೆನಿಮ್ಮನೆಹುಡುಕುತಿರುವೆನು । ಗುರುವೆತೋರೈತೋರದಿದ್ದೊಡೆ ।
ಮರಣಹೊಂದುವೆನೆನುತಹಳ್ಳದಕಡೆಗೆನಡೆತಂದಾ ॥ ೨೦ ॥
ಅಹುದನಾದಿಯಮೂರ್ತಿತಾನಿವ । ನಹುದುಪರತರವಸ್ತುತಾನಿವ ।
ನಹುದುಶಂಭುಜ್ಯೋತಿತಾನಿವನಿತ್ಯನಿರ್ಮಾಯ ॥
ಅಹುದುಶ್ರೀಗುರುವೀತತಾನಿವ । ನಹುದುತಾಗುರುಲಿಂಗಜಂಗಮ ।
ನಹುದುತಾನುಫಕೀರನೆಂದಡಗಿದನುತತ್ಕ್ಷಣಕೆ ॥ ೨೧ ॥
ಎರಗಿದರುಬಿಡದೆಲ್ಲರಂಜುತೆ । ವರಫಕೀರನಪಾದಪದ್ಮಕೆ ।
ಪರಮಕರ್ತನುನುಡಿದನವರಿಗೆಮಂದಹಾಸದಲಿ ॥
ಮರುಳುತನವ್ಯಾಮೋಹಅಜ್ಞಾನದ । ಕುರುಹೊತಿಳಿಯದುನೀವುಜಂಗಮ ।
ರೆರಗಲುಚಿತವೆನಾನುಹುಟ್ಟಫಕೀರನಿಹೆನೆಂದಾ ॥ ೨೨ ॥
ಧರಿಸಿದಾಲಿಂಗಗಳನೆಳಕೊಂ । ಡರವುಕೊಟ್ಟರಿಸಾಕುಶ್ರೀಗುರು ।
ವರನೆಪಾದಕ್ಕೆರಗಿಬೀಳ್ವೆವುಪಾಲಿಪುದುಬಿಡದೆ ॥
ಗುರುವೆತಾವೀತೆರದೊಳೆಂದೊಡೆ । ನರರಿಗೆಮಗಿನ್ನೇನುಗತಿಯೈ ।
ಮರೆಯಹೊಕ್ಕೆವುಕರುಣಿಸೈಬಿಡದೆಂದರಾಜನರು ॥ ೨೩ ॥
ಧರೆಗೆಪರಶಿವರೂಪರೈನೀವ್ । ಪರಮಲಿಂಗಾಂಗಿಗಳು ನಿಮ್ಮೊಳ ।
ಗಿರುವಲಿಂಗಗಳೆಲ್ಲಿಹೋದವುಗೊತ್ತು ನನಗೇನು ॥

ಧರೆಗೆಹುಟ್ಟಿದಬಳಿಕಲಿಂಗವು । ಕೊರಳಿಗಿಲ್ಲವು ನನಗೆಲಿಂಗದ ।
ಗುರುತದಿಲ್ಲವುನಿಮಗೆಲಿಂಗಗಳೆಲ್ಲಿತರಲೆಂದಾ ॥ ೨೪ ॥
ಗುರುವೆತಮ್ಮಯಗುರುತುಹಿಡಿದೇ । ಚರಣಕೆರಗಿಹೆವಿನ್ನುನೀವೀ ।
ತೆರದಿನುಡಿದರೆನಮಗೆಗತಿಬೇರಿಲ್ಲವಕಟಕಟ ॥
ನರತನುವಿನೀಪ್ರಾಣದಾಶೆಯು । ಭರವುತಗ್ಗಿತುತಾವುನಮ್ಮನು ।
ಕರುಣಿಸಿರಿಬಿಡದೆಂದುಮಿಗೆಮೊರೆಯಿಟ್ಟುದಾಜನವು ॥ ೨೫ ॥
ಮರಗುತಿಹಜಂಗಮರಜಾಲದ । ಪರಿಯನರಿದುರೆಕರ್ತನಾಗಳೆ ।
ಕರುಣಿಸಿದನೈಪರಮಭಕ್ತರೆಕೇಳಿರೈಮುಂದೆ ॥
ಬರತಿಯಲ್ಲಿರ್ದಪುದುಲಿಂಗೋ । ತ್ಕರವುನೀವೊಬ್ಬೊಬ್ಬರಾಗಿರೆ ।
ಗುರುವೆಗತಿಯೆನ್ನುತ್ತನೀವ್ ನೀರುಗ್ಗಿರೈಯೆಂದ ॥ ೨೬ ॥
ನೀರನುಗ್ಗುತ್ತಿರಲುತತ್ಕ್ಷಣ । ತೋರಿದದು ಗಡಲಿಂಗವೊಬ್ಬಗೆ ।
ಹರಣವುಳಿದತ್ತೆನ್ನುತಾತನುಲಿಂಗಕೈಕೊಂಡಾ ॥
ತೋರಿಸಿರ್ಪೀಪರಿಯೊಳೆಲ್ಲರು । ನೀರನುಗ್ಗಿದರೆಲ್ಲರಿಗೆಕೈ ।
ಸೇರಿದವುಗಡಲಿಂಗಗಳುಗುರುಕರ್ತನಾಜ್ಞೆಯಲಿ ॥ ೨೭ ॥
ಅವರುಹೊಂದಿದಹರುಷವನುಬಿಡ । ದವರುನುತಿಸಿದರೀತಿಯನುತಾ ।
ವವರುತಂತಮ್ಮೊಳಗೆನುಡಿದಾನಂದಸಂಗತಿಯಾ ॥
ಅವರಲಿಂಗಾನಂದವನುಪರ । ಶಿವನೆಬಲ್ಲನುಪೇಳಲಳವೇ ।
ಭವಹರಂಗಾಜಂಗಮರುಮಾಡಿದರುಬಿನ್ನಪವ ॥ ೨೮ ॥
ಕರವಮುಗಿಯುತೆಬುದ್ಧಿಯೆನ್ನುತೆ । ಕರುಣಿಸೆನ್ನುತೆಪಾದಕೆರಗುತೆ ।
ಪರಮಗುರುವೇತಾವುಬಿಜಯಂಗೈವುದೈಯೆನುತಾ ॥
ನೆರೆದಜಂಗಮರೆಲ್ಲಕರ್ತನ । ಚರಣಕಮಲಕೆಬಿದ್ದುಪ್ರಾರ್ಥಿಸು ।
ತಿರಲುಶೆಟ್ಟಿಯುನಮಿಸಿಕೈಮುಗಿದೆಂದಕರ್ತನಿಗೆ ॥ ೨೯ ॥
ದುರಿತಕರ್ಮರುಕುಲಛಲರ್ಕಳು । ಮರವಿಮನುಜರುನಾವುಗಡಶ್ರೀ ।
ಗುರುವೆತಮ್ಮಾಟವನುತಿಳಿಯದೆತಪ್ಪುಮಾಡಿದೆವು ॥
ಕರುಣದಿಂದಲೆಕ್ಷಮಿಸಿನಮ್ಮಾ । ಪುರಕೆಬಿಜಯಂಗೈದುನಿಜಕೃಪೆ ।
ಯಿರಿಸಿಪ್ರಸ್ತವಸಾಂಗಮಾಡುವದೆಂದುಪ್ರಾರ್ಥಿಸಿದಾ ॥ ೩೦ ॥

ಗುರುಫಕೀರನುನಿತ್ಯತುಷ್ಟನು । ನಿರಶನನುಗಡನಿಮ್ಮಭಕ್ತಿಯು ।
ಗುರುವಿಗತ್ಯಾನಂದಕೊಟ್ಟತುಸಾಕುಲೋಕದಲಿ ॥
ನೆರೆದಜಂಗಮಜಾಲವನುನೀ । ನರವಿನಲಿತೃಪ್ತಿಯನುಪಡಿಸೆಂ ।
ದೊರೆದಗೋಚರನಾಗಿಕರ್ತನುಹೊರಟನಲ್ಲಿರದೆ ॥ ೩೧ ॥
ಬರಿದೆಪೌರಾಣವನುಕೇಳುತೆ । ಬರಿದೆವಚನಂಗಳನುನೋಡುತೆ ।
ಬರಿದೆತತ್ವದಗ್ರಂಥವೋದುತೆಜ್ಞಾನಿಯಾನೆನುತೆ ॥
ಬರಿದೆಸಂಸಾರವನುಬಿಡುವದು । ಬರಿದೆವೈರಾಗ್ಯವನುತಾಳ್ವುದು ।
ಧರೆಯೊಳೊಳ್ಳಿತ್ತಲ್ಲವೆಚ್ಚನುಸಾಂಬಸದ್ಗುರುವು ॥ ೩೨ ॥
ತನ್ನಸಂಸಾರವನುಮಾಡುತೆ । ತನ್ನವ್ಯಾಪಾರವನುನಡಿಸುತೆ ।
ತನ್ನಸದ್ಗತಿಗಾಗಿಸಂತತಚಿಂತೆಮಾಡುವದು ॥
ತನ್ನಸದ್ಗುರುಧ್ಯಾನಮಾಡದೆ । ತನ್ನಗುರುವಿನಸೇವೆಗೈಯದೆ ।
ತನ್ನಸದ್ಗುರುಕೃಪೆಯಪಡೆಯದೆಮೋಕ್ಷಬಯಸುವರೆ ॥ ೩೩ ॥
ಹಿಂದಿನೆಚ್ಚರಹಿಡಿಯದಿರುವದು । ಮುಂದಿನಂಜಿಕೆಗೊಳ್ಳದಿರುವದು ।
ನಿಂದುನರಜನುಮದಲಿಲೋಭಿಗಳಾಗಿಕುದಿಯುವದು ॥
ಕುಂದನಿಡುವದುಸಾಧುಜನರಿಗೆ । ನಿಂದೆಗೈವುದುಶರಣರಿಗೆಸಲೆ ।
ಹಂದಿಜನ್ಮಕೆಮುಂದೆಹೋಗುವದೇನುಚಂದವಿದು ॥ ೩೪ ॥
ಪರರಜರಿಯುತೆಪರರಗುಣಗಳ । ನರಸುತಂದುರ್ವಿಷಯದಾಶೆಗೆ ।
ಸೊರಗುತಂಕೆಡಿಸುತ್ತೆಪರರನುಬಹಳಸೊಕ್ಕಿನಲಿ ॥
ಗುರುಹಿರಿಯರಿಗೆಮನ್ನಿಸದೆತಾ । ನಿರುತಡಂಭಾಚಾರದಲಿಗುರು ।
ಕರುಣವೆಮಗಿಲ್ಲೆಂದರಾಗುರುವೇನುಮಾಡುವನು ॥ ೩೫ ॥
ನರತನುವುನಿಜವಲ್ಲಕ್ಷಣಭಂ । ಗುರುವುತಾನಿಂತಿರ್ದೊಡಂಗಡ ।
ನರರುಮಾಯಾಬದ್ಧಲೌಕಿಕರಾಗಿಮೆರೆಯುವರು ॥
ಶರಣರಾಟಕೆಹರುಷಗೊಳ್ಳದೆ । ಗುರುವಿನೆಡೆಯಲಿಸೇವೆಗೈಯದೆ ।
ದುರಿತಕರ್ಮದೊಳಾಡಿಕೆಲವರುಕೆಡುವರಕಟಕಟಾ ॥ ೩೬ ॥
ನರರೊಳಗೆನರನೆನಿಸಿತೋರುತೆ । ಧರೆಯುಳುರೆವಾದಮಾಡುತೆ ।
ಪರಕೆಪರತರವಸ್ತುವೆನಿಸುವಶ್ರೀಫಕೀರನಿಗೆ ॥

ಗುರುವೆನೀಗತಿಯೆಂಬಜನರನು । ಕರುಣದಿಂಬಿಡದೆತ್ತಿಕೊಂಬಗೆ ।
ಪರಮಕರ್ತಗೆಸೀವುಬೆಳಗಿರಿಮಂಗಳಾರತಿಯಾ ॥ ೩೭ ॥
ಜಂಗುಳಿಯದೈವದಲಿಸೇರುತೆ । ಲಿಂಗದುಣುಪಾವಾಡುತೋರಿದೆ ।
ಸಂಗನಾಬಸವೇಶಕರ್ತಪರಾಕುಮುದಿಪಾಚಾ್ಛ ॥
ಹಂಗುದೊರೆದಾಜಂಗಮರಿಗುರೆ । ಲಿಂಗತೋರಿಸಿಕೊಟ್ಟೆನೀನ್ನೈ ।
ಲಿಂಗಮಯತನುಸಂಗಕರ್ತಪರಾಕುಪ್ರಭುರಾಯಾ ॥ ೩೮ ॥
ಗುರುಮಹತ್ವದಸಾರವಿಂತಿದು । ಗುರುಮಹತ್ವಮನಂತಮಿರ್ಪುದು ।
ಗುರುಮಹತ್ವವನರಿದುಪೇಳುವರ್ಯಾರುಲೆಂಕದಲಿ ॥
ಗುರುಫಕೀರೇಶ್ವರನುಗಂಗಾ । ಧರನಮುಖದಿಂಪೇಳಿಸಿದನೀ ।
ತೆರದಿಮುಗಿದುದುಸಂಧಿಯೆಂಟನೆಯೆಸಿಸುತಂದದಲಿ ॥ ೩೯ ॥

॥ಇತಿ ಶ್ರೀ ಶಿರಹಟ್ಟಿಪುರಸನ್ನುತ ಶೂನ್ಯಸಿಂಹಾಸನ ಶ್ರೀ ಭಗವಾನ್ ಫಕೀರಸ್ವಾಮಿಯ॥
ಗಂಗನಿಂ ಪೇಳಿಸಿದ ಪೌರಾಣದೊಳ್ ಎಂಟನೆಯ ಸಂಧಿಸಮಾಪ್ತಮಿಂತು ।
೪೭೦ ಪದ್ಯಂಗಳಿಗೆ ಮಂಗಲಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ

## ೯ನೇ ಸಂಧಿ

### ಸೋಮನಗೌಡನಿಗೆ ರಾಜ್ಯಕೊಡಿಸಿದ್ದು

**ಸಂಧಿ ಸೂಚನೆ**

ಆಮಹಾತ್ಮಕನಾದಕರ್ತನು ।ಸೋಮನಿಗೆ ರಾಜ್ಯವನುಭಕ್ತ ।
ಪ್ರೇಮಿಯಾಗಿಯೆಕೊಟ್ಟುಕಾಪಾಡಿದನುಕೈವಿಡಿದು ॥ ಪಲ್ಲ ॥
ಗುರುವುನಾರಾಯಣನುವಿಶ್ವಂ । ಭರನುಭಕ್ತೋದ್ಧಾರಕನುಗುರು ।
ನರಶರೀರವನಾಂತೊಡಂತಾನಿತ್ಯನಿರುಪಾಧಿ ॥
ಪರಮಗುರುವಿನಗುರುತನರರೇ । ನರಿವರಕ್ಕಟಬರಿದೆಕುಲಛಲ ।
ಮೆರೆದಮದಗಾಢಾಂಧಕರಿಗವನೇನುಸಿಲುಕುವನೆ ॥ ೧ ॥
ಗುರುಕಥಾಮೃತಪೇಳ್ವರಿಳೆಯೊಳು । ಗುರುಚರಿತ್ರನಕೇಳ್ವರೆಂದಿಗು ।
ಗುರುವೆಗತಿಯೆಂತೆಂದುನುಡಿವರುಸಕಲಲೌಕಿಕರು ॥

ಧರೆಯೊಳಾಪರವಸ್ತು ಸದ್ಗುರು । ದೊರಕುವನೊತಮಗೆಂದುನುಡಿವರು ।
ಸ್ಮರಣೆಯೆಳ್ಳನಿತಿಲ್ಲದಿರುವರುಕೇಳಿರೈನೀವು ॥ ೨ ॥
ಧರೆಗೆಗಡಶಿವಯೋಗಿಯೇಶಿವ । ಧರೆಗೆಗಡನಿಜಸಾಧುವೇಶಿವ ।
ಧರೆಗೆಗಡಸತ್ಪುರುಷನೇಶಿವರೂಪಸಿದ್ಧಾಂತ ॥
ದುರಿತಸಂಹರಣಾರ್ಥದಲಿವಿ । ಸ್ಫುರಿತಭಕ್ತ್ಯರ್ಥದಲಿಪರಮೇ ।
ಶ್ವರನೆತಾನವತರಿಸಿಬಹುಮುಖದಿಂದೆಬೆಳಗುವನು ॥ ೩ ॥
ಶಿವಗೆಸರಿಗಡಪರಮಗುರುವೂ । ಧವಗೆಸರಿಗಡಗುರುವುಕಮಲೋ ।
ದ್ಭವಗೆಸರಿಗಡಗುರುವುತನ್ನಯಗುರುವುತನಗಿನ್ನು ॥
ಭುವನದೊಳಗವರಿಂದಲಧಿಕವು । ಭವಹರನುನಿಜಮುಕ್ತಿದಾಯಕ ।
ನಿವನುನಮಗೆಂದರಿದುಸೇವೆಯಮಾಡಬೇಕವನ ॥ ೪ ॥
ತನಗೆಭಕ್ತರೆತಂದೆತಾಯ್ಗಳು । ತನಗೆಭಕ್ತರೆಬಂಧುಬಳಗವು ।
ತನಗೆಭಕ್ತಸಮೂಹವೇಬಿಡಗಾಪ್ತಸಂಕುಳವು ॥
ತನಗೆಭಕ್ತರೆಸಕಲಸಂಪದ । ತನಗೆಭಕ್ತರೆಸರ್ವಸಡಗರ ।
ವೆನುತಲಾಗುರುನಾಥಭಕ್ತರೊಳಾಡಿನಲಿಯುವನು ॥ ೫ ॥
ಪರಿಪರಿಯಸಂಸಾರಚಿಂತಾ । ಭರದಭಕ್ತರೆಕೇಳಿರೈ ಶ್ರೀ ।
ಗುರುವುಗುರುತನುಕೊಡದೆಡಂಬಳಬಿಟ್ಟುಚರಿಸುತಲಿ ॥
ಚರಣವನೆನೆನೆನೆನೆದುಕೊರಗು । ತ್ತಿರುವಲಿಂಗವ್ವನಿಗೆನಿಜಕೃಪೆ ।
ವೆರಸಿಕದಡಿಗೆಹೋಗಲೆಳಸಿದನಾನಿರಂಜನನು ॥ ॥ ೬ ॥
ಸುಳಿದುಕಲವೆಡೆಯಲ್ಲಿಕರ್ತನು । ಕುಲಛಲರನುರೆಮೆಟ್ಟಿಭಕ್ತರ ।
ಬಳಗದಲಿನಿಜದೋರಿಕದಡಿಗೆಬಂದನಾಕ್ಷಣಕೆ ॥
ಲಲಿತಸದ್ಗುರುಮೂರ್ತಿಯನುಕಂ । ಗಳಲಿಕಂಡುಬ್ಬಿದಳುಪಾದಕೆ ।
ನಲಿದೆರಗಿಕೈಮುಗಿಯೆಲಿಂಗವ್ವವ್ವನನಿತರಲಿ ॥ ೭ ॥
ಭರಮಗೌಡನುಸೋಮಗೌಡನು । ಗುರುವುಬಂದುದುಕೇಳಿಕೂಡಲೆ ।
ಹರುಷದಲಿಬಂದೆರಗಿದರುಭಯಭಕ್ತಿಭಾವದಲಿ ॥
ತಿರುಗಿದೆಡೆಗಳಲೀಲೆಗಳದು । ರ್ನರರನಿಂದಕರಾಟಗಳವಿ ।
ಸ್ತರಿಸಿಹೇಳ್ದಾನಂದಗೊಟ್ಟನುಭಕ್ತವತ್ಸಲನು ॥ ೮ ॥

ಕರೆದುಕೊಂಡೀಸೋಮನನುನೀ । ಹೊರಟುಬಾರೌನನ್ನಸಂಗಡ ।
ಗುರುವಿನಾಟವಿದೆಂದುಹೊರಟನುಗುರುಮಹಾತ್ಮಕನು ॥
ತ್ವರದೊಳಾಲಿಂಗವ್ವಮಗನನು । ಕರೆದುಕೊಂಡೇತನ್ನಗುರುವಿನ ।
ಚರಣಕಮಲವನಗಲದಲೆಸಾರಿದಳುಪಥವಿಡಿದು ॥ ೯ ॥
ಶರಣಪರಿಪಾಲಕನುಕರ್ತನು । ಶರಣರತಿಶಯಮಹಿಮೆಹೇಳುತ ।
ಗುರುಕಟಾಕ್ಷದಫಲವನರಿಸುತೆಹಾದಿನಡೆವುತಲಿ ॥
ನಿರುತಭಕ್ತಿಯಬಲುಮೆಯೊರೆಯುತೆ । ಗುರುಮಹತ್ವವನೆಲ್ಲತಿಳಿಸುತೆ ।
ಹರುಷಗೊಳಿಸುತ್ತವರನಗಲದೆಬಂದವಾಗಡಿಗೆ ॥ ೧೦ ॥
ಕೆಲವುದಿವಸಗಳಿರ್ದವಾಗಡಿ । ಯೊಳಗೆಸದ್ಗುರುರಾಯನೇಳ್ದನು ।
ಲಲಿತಲಕ್ಷ್ಮೇಪುರಿಗೆನಡೆದನುಕುಶಲಶಂಕರನು ॥
ನಲಿಯುತಾಲಿಂಗವ್ವೆಯಾಗಳೆ । ತಳವುಮೊಡದೆಸುತಸಹಿತಸಂ ।
ಕಲಿತಸದ್ಧ್ಯಾನದಲಿಹೊರಟಳುಗುರುವರನಬಿಡದೆ ॥ ೧೧ ॥
ಭರದಿನಡೆಯುತೆಪೋಗಿಮಾರ್ಗದಿ । ಗುರುವರನಕಂಡಲ್ಲಿಪಾದ ।
ಕ್ಕೆರಗಿದಳುಲಿಂಗವ್ವನನಿತರೊಳಾಯ್ತುಸಂಜೆಗಡಾ ॥
ಪರಮಮಮತೆಯಮಗಳೆಬಾರೌ । ತ್ವರದಿಬಾರೆನ್ನುತ್ತೆಕರ್ತನು ।
ಚರಿಸಿಲಕ್ಷ್ಮೇಪುರಿಗೆಮುಟ್ಟಿದನವರನಗಲದಲೆ ॥ ೧೨ ॥
ಅರಸನಂಕುಶಖಾನನಂದತಿ । ಹರುಷದಳಿಸತಿಯೊಡನೆಪಗಡಿಯ ।
ಭರಕೆಬಿದ್ದಿರೆತಿಳಿದುಸಮಯವಿದೆನ್ನುತಲಿಕರ್ತ ॥
ಪರಮಭಕ್ತಳನವಳಮಗನನು । ಕರೆದುಕೊಂಡರಮನೆಗೆಗಮಿಸಿದ ।
ನಿರುಳವಸ್ತಿಯಮಾಳ್ಪೆವೆಂದಿಳುಕೊಂಡನೇಪೇಳ್ವೆ ॥ ॥ ೧೩ ॥
ಗುರುವಿನತಿಮಾಯೆಯಲಿಸರ್ವರು । ಥೊರೆಯುಯಾರಿವರಿಲ್ಲಿಗೇತ ।
ಕ್ಕಿರುಳುಬಂದಿಹರೆಂಬಸುವಿಚಾರಂಗಳಿಲ್ಲದಲೆ ॥
ಮರವಿಯಲಿತಂತಮ್ಮಕೆಲಸದ । ಭರದೊಳಿದ್ದರುಸರ್ವರುಂಗುರು ।
ವರನುನಡಿಸಿದಕಾರ್ಯಭಾಗವನಾಲಿಸಿರಿಮುಂದೆ ॥ ೧೪ ॥
ಮೆಲ್ಲಮೆಲ್ಲನೆಜಾರುತಿರೆನಿಶೆ । ಯಲ್ಲಿಪಣತಿಯೊಳೆಣ್ಣೆತೀರಿದು ।
ದೆಲ್ಲಭೂಪನುನೋಡಿಸೇವಕಜನಕೆಸೂಚಿಸಿದ ॥

ಇಲ್ಲದಂತಃಯ್ಸ್ತ್ರಣ್ಣೆಯರಮನೆ । ಯಲ್ಲಿತಿಲಮರ್ದನರಮನೆಯೊಳ್ ।
ಗೆಲ್ಲಕಡೆಗಿಲ್ಲಾದ:ದೆಣ್ಣೆಯುಗುರುಮಹತ್ವದಲಿ ॥ ೧೫ ॥
ಇರುಳುಜವಿದುದುವಿ,ಗಿಳೆನಿಸುತನಿ । ತರೊಳೆತೀರಿತ್ತೆಣ್ಣೆದೀಪದ ।
ತೆರನನೋಡಿನಾಗಳಂಕುಶಖಾನನುರೆಮು,ಳಿದು ॥
ಚರರಗಪ್ಪಣೆಕೊಟ್ಟನೆಣ್ಣೆಯ । ತರಲಿಕೆಲ್ಲೆಡೆಯಲ್ಲಿಶೋಧಿಸಿ ।
ಧೊರೆಯೆಸಿಗಲಿಲ್ಲೆಣ್ಣೆಯೆಂದರುಮುಗಿದುಕೈಗಳನು ॥ ೧೬ ॥
ನೋಡಿದನುಬಹುರಾತ್ರಿಯಾದುದ । ನೋಡಿದನುಸೊಡರೆಣ್ಣೆತೀರ್ದುದ ।
ಬೇಡಿದನುಬಿಡದಾಟದಲಿಬಗೆಯಿಟ್ಟುತೈಲವನು ॥
ಬೇಡಿದುದನೇಕೊಡುವೆನೆಣ್ಣೆಯ । ನೀಡಿದವರಿಗೆನಾನುತಪ್ಪದೆ ।
ನೋಡಿರಿನ್ನಿಂತೆಂದನಂಕುಶಖಾನನೇವೇಳ್ವೆ ॥ ೧೭ ॥
ಇದುಸಮಯವಿದುನಿನ್ನಶುಭದಿನ । ವಿದುವೆರಾಜಶ್ರೀಯಪ್ರಾಪ್ತಿಯ ।
ಹದವಿದನುತಿಳಿಯೆಂದುಭಕ್ತಗೊರೆವುತಾಕರ್ತಾ ॥
ಮುದದಿಸೋಮನಗೌಡಗೆಂದನು । ಪದೆದುನೀಹೋಗಿನ್ನುತಡನೊ ।
ಡದಲೆತುಪ್ಪವನೀಡಿಬಾರೈಯೆಂದುಹರಿಸಿದನು ॥ ೧೮ ॥
ಶ್ರೀಗುರುವವುನವುಟ್ಟಿಧ್ಯಾನಿಸು । ತಾಗಳಾಸದ್ಭಕ್ತಸೋಮನು ।
ಹೋಗಿತುಪ್ಪವನೆರೆಯೆಪ್ರಜ್ವಲವಾಯ್ತುದೀಪವದು ॥
ಆಗಳಂಕುಶಖಾನಹರುಷಿತ । ನಾಗಿನಡಿಸಿದನಾಟಮುನದನು ।
ರಾಗದಿಂನಿಜರಮಣಿಯೊಂದಿಗೆಕಳೆದರಾತ್ರಿಯನು ॥ ೧೯ ॥
ಬೆಳಗುದೋರಲುಪಗಡಿಯಾಟವ । ನುಳಿದುಪರಿಯಂಕದಲಿದಂಪತಿ ।
ಗಳತಿಮುದದಲಿಕುಶಲಗೋಷ್ಠಿಗಳಾಡುತಿರಲಿತ್ತ ॥
ಎಳೆಯನನುತಜ್ಜನನಿಯನುಸಲೆ । ತಿಳುಹಿಗೂಢಾರ್ಥವನುರಾಜನ ।
ಬಳಿಗೆಕರಕೊಂಡೈದಿದನುಶಿವಯೋಗಿರೂಪದಲಿ ॥ ೨೦ ॥
ಬಿಟ್ಟುಮಣಿಪರಿಯಂಕವನುಧೊರೆ । ತಟ್ಟನೇನಡೆತಂದುನಿಜಶಿರ ।
ವಿಟ್ಟುಪಾದಾಂಬುಜಕೆನಮಿಸಿದನಾಪರಾತ್ಪರಗೆ ॥
ಇಷ್ಟುಮೊಯವದೇಕೆಮುನಿಪತಿ । ಶ್ರೇಷ್ಠನೈನೀನಿಂತುಮೊಯದಿ ।
ಕಷ್ಟಗೊಂಡರೆನರರಪಾಡೇನೆಂದನಾಕರ್ತಾ ॥ ೨೧ ॥

ಕಳೆಗಳಾಣ್ಮನುಬೆಳಗಲೆದುರಿಗೆ । ಹೊಳೆಯಲಾತ್ಮಜ್ಞಾನತನ್ನೊಳು ।
ತಿಳಿದನಂಕುಶಖಾನಲೌಕಿಕದಾಟಬೇಟವನು ॥
ಹೊಲಬನರಿದಾನಂದದಲಿತಾ । ನುಳಿದುಮಾಯಾಭ್ರಾಂತಿಯನುನಲಿ ।
ನಲಿದುಗುರುವಿಗೆವಂದಿಸಿದನೈಜಯಸಿನಾದದಲಿ ॥ ೨೨ ॥
ನಿನ್ನನಿರುಳೊಳುಪಗಡಿಯಾಟದೊ । ಳುನ್ನತಿಕೆಯಲಿನೀನುಕೊಟ್ಟ ।
ತ್ಪನ್ನದಾಸುಡಿಕೇಳಿನಮ್ಮವಸೋಮನೆಂಬವನು ॥
ತನ್ನಗುರುವಿನಕರುಣದಿಂದಲೆ । ನಿನ್ನನಂಬಿಮೆತುಪ್ಪಹಾಕಿದ ।
ನಿನ್ನನುಡಿನಡಿನೀನುಸರಿಗೈಯೆಂದನಾಕರ್ತಾ ॥ ೨೩ ॥
ಅರಸರೊಳಗುತ್ತಮನುನೀನುಂ । ಗುರುಸಮಾನನುಭೂಪಕೇಳ್ಳೆ ।
ತರಳಸೋಮನಗೌಡನೀತನುಪರಮಗುರುಭಕ್ತ ॥
ಧರೆಯರೂಢಿಗೆತನ್ನಕಾಮ್ಯವ । ನಿರದೆನಿನ್ನಿಂಪಡಿವೆನೆಂಬುವ ।
ನರವಿನೊಳುನೀಕೊಟ್ಟುಬಿಡುವದುನಿನ್ನಕಡೆಗೆಂದಾ ॥ ೨೪ ॥
ಮೃಡನುಹಾತ್ಮನೆಕೇಳುನಿನ್ನಯ । ನುಡಿಗೆವಿಾರುವನಲ್ಲಕೊಟ್ಟಾ ।
ನುಡಿಗೆತಪ್ಪುವನಲ್ಲವೆಂದೆನೆಭೂಪನಂದದಕೆ ॥
ಬಿಡೆಲೆರಾಜನೆನನ್ನಮಾತಿನ । ಗೊಡುವೆಯೇನದುಬರಿದೆಸೋಮನ ।
ಕಡೆಗೆಮಾತದುಕೇಳಿಕೋನೀನೆಂದನಾಕರ್ತಾ ॥ ೨೫ ॥
ಮಗನೆಹೇಳ್ಳೆಹೇಳುನಿನ್ನಯ । ಬಗೆಯದಾವುದುಹೇಳುಕೇಳ್ವೆನು ।
ಮಗನೆನಾಂವಚನವನುಕೊಟ್ಟುದುಸತ್ಯವಿದುಸತ್ಯ ॥
ಜಗದೊಳೆಂದಿಗುತಪ್ಪಿಸೆನುಗಡ । ನಗೆಯಮಾತಲ್ಲಿದುವೆಹೇಳ್ಳೆ ।
ಮಗನೆಕೊಟ್ಟಪೆಪಡೆದುಕೋನೀನೆಂದನಾಖಾನ ॥ ೨೬ ॥
ಅರಸನೇನೀನಿತ್ತವಚನಕೆ । ಭರವಸದಿತುಪ್ಪವನುಹಾಕಿದ ।
ಪರಿಯನಾಪ್ರಭುದೇವಬಲ್ಲನುಸುಡುಸುಡಾಶೆಯದು ॥
ಅರಸುತನದೊಳಗುಂಟುಲಕ್ಷ್ಮೀ । ಪುರವರಾಜ್ಯೈಶ್ವರ್ಯವನುಭೂ ।
ವರನೆಕೊಟ್ಟುವಚನಕೀಯುವದೆಂದನಾಸೋಮಾ ॥ ೨೭ ॥
ನುಡಿದನುಡಿಗೀರಾಜ್ಯಸಂಪದ । ಕೊಡುವೆನೈಶ್ರೀಗುರುವೆಲೋಕದ ।
ನಡತೆಗೆನ್ನಯಮಾತುನಡಿಸುವದೆಂದನಾನೃಪತಿ ॥

ನಡಿಸುವೆವುಭೂಪಾಲಸಂಶಯು । ಹಿಡಿಯದಿರುನೀನಿನ್ನರಾಜ್ಯವ ।
ಕೊಡುವದೀಸೋಮನಿಗೆನೀನಿಂತೆಂದುಗುರುನುಡಿದಾ ॥ ೨೮ ॥
ನೀವುಶಿವಮತದವರುಜಗದೊಳ । ಗಾವದೆಂದೊಡೆಮುಸಲಮೊನರು ।
ನಾವುನಮ್ಮಯರಾಜ್ಯಕೊಟ್ಟುದಕೇನುಗುರುತುಗಳು ॥
ನೀವುನಿಮ್ಮಾಚರಣೆಯಂತಿರೆ । ಭಾವಿಸಲ್ಕೆಮ್ಮಂತೆವರ್ತಿಪು ।
ದಾವಗುಂನೀವೆಂದನಂಕುಶಖಾನನಸುನಗುತಾ ॥ ೨೯ ॥
ವಾರಕುಲದಲಿನಿಮಗೆಶ್ರೀಗುರು । ವಾರವೇಮೇಲೆನಿಸಿಸಾಗಲಿ ।
ಸಾರಸಭೆಯಲಿಮುಸಲಮೊನರಭಾಷೆಶೋಭಿಸಲೀ ॥
ಧೀರಸದ್ಗುರುವಿಳೆಗೆತಾನುಫ । ಕೀರನೆನಿಸಲಿನಿಮ್ಮಮತದಾ ।
ಕಾರವೆಮ್ಮಂತೆನಿಸಿರಂಜಿಸಲೆಂದನಾಖಾನಾ ॥ ೩೦ ॥
ಹೆಸರುಬದಲಿಸಿಖಾನನೆನಿಪುದು । ಹಸರುವಸ್ತ್ರವಧರಿಸಿಕೊಂಬುದು ।
ಹಸರುಬಣ್ಣದಧ್ವಜವನಿಲಿಪುದುಲೋಕದೊಳಗಿನ್ನು ॥
ಅಸಮಸದ್ಗುರುಭಕ್ತನೀನೈ । ಕುಶಲಸೋಮನಗೌಡಕೇಳದ ।
ನೊಸೆದುನಡಿಸಿರಿಕೊಡುವೆಶಿಕ್ಕೆಯನೆಂದನಾಖಾನಾ ॥ ೩೧ ॥
ಧೊರೆಯೆನೀನೆಂದಂತೆನಡಿಸುವ । ದರಿದರಿದುಗಡನರರಿಗಸದಳ ।
ವಿರುವನಲ್ಲಮವಿಭುವನಾದಿಫಕೀರನಮಗೇನು ॥
ನರರಭಯವೇನಿಲ್ಲಸದ್ಗುರು । ವರನುತಾನೇತನ್ನಮಹಿಮೆಯೊ ।
ಳಿರದೆನಡಿಸುವನೆಂದುನುಡಿದನುನಗುತಲಾಕರ್ತಾ ॥ ೩೨ ॥
ಅರಿದುಸದ್ಗುರುವಾದದಾಟವ । ನಿರದಲಂಕುಶಖಾನನಂದಿಗೆ ।
ಶಿರಿಪುರದರಾಜ್ಯವನುಕೊಟ್ಟನುಕರ್ತನಡಿಗೆರಗಿ ॥
ಧರೆಗೆಸಾತ್ವಿಕರಾಜನೆನ್ನಿಸಿ । ಹರುಷದಲಿಪೊರಮಟ್ಟುಖಾನನು ।
ಪುರವಬಿಟ್ಟನುಕೇಳಿರೈಸಲೆಸಾಧುಸಜ್ಜನರು ॥ ೩೩ ॥
ದೇಶಕೋಶವನೆಲ್ಲವಾತಗೆ । ಭಾಷೆತಪ್ಪದೆಕೊಟ್ಟುತನ್ನೊಳು ।
ಘೋಸಿಯಾಗದೆರಾಜನಂಕುಶಖಾನನಂದಿಂತು ॥
ತೋಷದಿಂಸತ್ವರದಿಶ್ರೀಪುರ । ದಾಸನವತಾಂಬಿಟ್ಟುಲಕ್ಷ್ಮೀ ।
ವಾಸನೆನಿಸದೆಪರಮಶಿವಯೋಗೀಶನೆನಿಸಿದನು ॥ ೩೪ ॥

ಆವಿರಾಜಿತರಾಜಮುನಿಸುಮ । ನೋವಿಲಾಸಿಗನಾಗಿರಾಜ್ಯದ ।
ಶ್ರೀವಿಭವಮಂತೊರೆದುಯೋಗಾನಂದನಾಗುತಲಿ ॥
ಪಾವನತರದಮಂಜುಲಾಪುರ । ದಾವಿಭೂಷಣನೆನಿಸಿನೆಲಸಿ ।
ದಾವಿಧಿಗೆಪ್ರಿಯನೆನಿಸುತದರೊಳಗೈಕ್ಯನಾಗಿಹನು ॥ ೩೫ ॥
ನುಡಿದನುಡಿಗನುಸರಿಸಬೇಕೆಂ । ದೊಡನೆಸೋಮನಗೌಡನಾತರ ।
ದೆಡೆಗೆಮೆರೆದನುಖಾನಗೌಡನುತಾನುಜಗಕೆನಿಸಿ ॥
ಮೃಡಮಹಾತ್ಮನುದೇವದತ್ತನು । ನುಡಿದುಕೊಟ್ಟಾವಚನಕಾಗಿಯೆ ।
ಬಿಡದೆವರದಫಕೀರನೆನಿಸುತೆಶೋಭಿಸುವನಾದ ॥ ೩೬ ॥
ಈತೆರದೊಳಾಸೋಮನಿಗೆಗುರು । ನಾಥನೊಲಿದಾರಾಜ್ಯವನುತಾ ।
ನಾತನಿಗೆಕೊಡಿಸಿದನುಗಡತಾಸೋಮನಂದದಲಿ ॥
ಭೂತನಾಥನಕರುಣದಿಂದಲೆ । ಖ್ಯಾತಿವಡೆದುರೆರಾಜ್ಯವಾಳಿವ ।
ನಾತೆರವನಾಗುರುವೆಬಲ್ಲನುವೇಳಲೇನಳವೆ ॥ ೩೭ ॥
ಗುರುನಿರಂಜನನಲ್ಲಮಪ್ರಭು । ಧರೆಯನಾಳುವರಾಜಪದ್ಧತಿ ।
ಯಿರವನರುಹಿಸುತವ್ವಲಿಂಗವ್ವನನುನುಡಿಯಿಸಿದ ॥
ಪರಮಭಕ್ತಳೆತಾಯೆಕೇಳೌ । ಗುರುವುನಿನ್ನಿಷ್ಟಾರ್ಥವನುವಿಃಗೆ ।
ತ್ವರದಿಕೊನೆಗಾಣಿಸಿದನೌನೀಧನ್ಯಳೌಯೆಂದ ॥ ೩೮ ॥
ಪರಮಭಕ್ತನೆಸೋಮನೇಕೇಳ್ । ದೊರೆತುದೀಶ್ರೀಪುರದರಾಜ್ಯವು ।
ದೊರೆಯೆನಿಸುಪ್ರಜೆಗಳಸುಪಾಲಿಸುರಾಜನೀತಿಯಲಿ ॥
ಗುರುವರನಗುರುತನ್ನುಮರೆಯದಿ । ಗುರುವನಗಲದೆಧ್ಯಾನಬಿಡದಲೆ ।
ಶಿರಿಯುಸಂಪದಸೌಖ್ಯದಲಿಬಾಳೆಂದನಾಕರ್ತ ॥ ೩೯ ॥
ಧೊರೆಯೆಕೇಳ್ಕೈತಿಳಿಯದಾಶ್ರೀ । ಗುರುವಿನಾಟವುಜಗಕೆಪೊಸತಿಹು ।
ದರಿಯಲಾಗದುಹೋಗಿಬಹನಿನ್ನೆನ್ನುತಿರೆಕರ್ತ ॥
ಇರುವದಿಲ್ಲಿಯೆಯೆಂದುಭಕ್ತಿ । ಸ್ಫುರಣದಲಿನಿಜಶಿರವಚಾಚಿ ।
ತ್ತೆರಗಿವೊರೆಗಳನಿಟ್ಟೆರವರಾಗುರುಮಹೋನ್ನತಗೆ ॥ ೪೦ ॥
ಗುರುವುಯಾರವನಲ್ಲಭಕ್ತಿಗೆ । ಪರವಶನುತಾನಾಗಿಬಂದಿಹ ।
ಶಿರಿಯಸಂಪದರಾಜ್ಯಕೊಟ್ಟಹಕೊರತೆಯೇನಿನ್ನು ॥

ಗುರುವಿನಾಟವಹೊಡಬೇಕಿ । ನ್ನರಿಯಿರೌನೀವೆಂದುಸನ್ನುತಿ ।
ಯಿರಿಸಿಹೊರಟನುಗುರುದಿಗಂಬರವರಫಕೀರೇಶ ॥ ೪೧ ॥
ಕೆಲರುಸಾಧುಗಳೆನಿಸಿಮೆರೆವರು । ಕೆಲರುಯೋಗಿಗಳೆನಿಸಿಮೆರೆವರು ।
ಕೆಲರುಶರಣರುಮೆನಿಸಿಮೆರೆವರುಮರ್ತ್ಯಲೋಕದಲಿ ॥
ಕೆಲರುಶಿಷ್ಯರುಮೆನಿಸಿಮೆರೆವರು । ಕೆಲರುಭಕ್ತರುಮೆನಿಸಿಮೆರೆವರು ।
ಕೆಲವರೊಳಗವನಾವನೋನಿಜವಸ್ತುವಾದವನು ॥ ೪೨ ॥
ಅನ್ನಕೊಡುವದುಬಂದಜನರಿಗೆ । ಭಿನ್ನಭೇದವಮಾಡದಿರುವದು ।
ಸನ್ನಿತಿಳಿವುದುಭಕ್ತರನುಕೈವಿಡಿದುಸಲಹುವದು ॥
ತನ್ನವಾಕ್ಯವಸತ್ಯಮೊಳ್ಪುದು । ತನ್ನವೈಗೊಡದಾಡುವದುತಾ ।
ನುನ್ನತೋನ್ನತಮಹಿಮನೆನಿಪುದುಶರಣಲಕ್ಷಣವು ॥ ೪೩ ॥
ಗುರುವಿನೆಡೆಯಲಿಭಕ್ತಿಮಾಡಿರಿ । ಗುರುಪದಾಬ್ಜದಸೇವೆಗೈಯಿರಿ ।
ಗುರುವಿನುರುಕಾರಣವನಡಿಸಿರಿಮಾಡಿರುತ್ಸವವ ॥
ಗುರುವುದೊಡ್ಡವನೆಂದುತಿಳಿಯಿರಿ । ಗುರುವುಕಾಯುವನೆಂದುನಂಬಿರಿ ।
ಗುರುಕೃಪೆಯನುರೆಪಡೆಯಿರೆಂಬುದುಶರಣಲಕ್ಷಣವು ॥ ೪೪ ॥
ತಾನುದೊಡ್ಡವನೆಂದುಹೇಳನು । ತಾನುಸದ್ಗುರುವೆಂದುಹೇಳನು ।
ತಾನುಪಾಲಿಪೆನೆಂದುಪೇಳನುಪೇಳ್ದೊಡಂಗುರುವು ॥
ತಾನುಗುರುವಿನಪಾದಸೇವಕ । ತಾನೆಸದ್ಗುರುನಡಿಸಿಕೊಡುವನು ।
ತಾನುನಿಮ್ಮಂತೆಂಬುದಿದುಶಿವಶರಣಲಕ್ಷಣವು ॥ ೩೫ ॥
ಸ್ಮರಿಪರೆಡೆಯಲಿನಿತ್ಯನೆನಿಪುದು । ಹರನುಮುನಿದರುಕಾವನೆಂಬುದು ।
ದುರಿತಸಂಹಾರವನುಮಾಡುವನೆಂಬಬಿರುದುಗಳು ॥
ಪರಮಸದ್ಗುರುಪಾದದಲಿಶಿವ । ಶರಣರೆಡೆಯಲಿಬಿಡದೆಮೆರೆಯುವ ।
ವರರೆನರಗುರಿಗಳಲಿತೋರುವವೇನುಜಗದೊಳಗೆ ॥ ೪೬ ॥
ಭಕ್ತಿಯೆಡೆಯನುಕೊಂಬಗುರುವಿಗೆ । ಭಕ್ತರಿಗೆಬಲುನಡಿಸಿಕೊಡುವಗೆ ।
ಭಕ್ತರೇತಾಯ್ತಂದೆಗಳುತನಗೆಂದುತಿಳಿವವಗೆ ॥
ಭಕ್ತರನುಬಿಡದಿರುವಗುರುವಿಗೆ । ಭಕ್ತಜನರನುನೋಡಿಸಲಿವವಿ ।
ರಕ್ತನಿಗೆಕರ್ತನಿಗೆಬೆಳಗಿರೆಮಂಗಳಾರತಿಯ ॥ ೪೭ ॥

ಹಿಡಿದುಬಿಡದಾಭಕ್ತರಿಗೆಕೈ । ಪಿಡಿದುರಕ್ಷಿಸುವಾತನೀನೈ ।
ಪೊಡವಿಗುದ್ಧಾರಕನುಕರ್ತಪರಾಕುಮುದಿಪಾಚ್ಛಾ ॥
ನಡಿನುಡಿಗಳೊಂದೆನಿಸಿಕುಲಛಲ । ದೆಡೆಗೆಮೀರಿಯೆನಿಂತುತೋರಿದೆ ।
ಮೃಡಮಹಾತ್ಮನುನೀನುಕರ್ತಪರಾಕುಪ್ರಭುರಾಯಾ ॥ ೪೮ ॥
ಗುರುಮಹತ್ವದಸಾರವಿಂತಿದು । ಗುರುಮಹತ್ವಮನಂತವಿಪ್ಪುದು ।
ಗುರುಮಹತ್ವವನರಿದುಪೇಳುವರಾರುಲೋಕದಲಿ ॥
ಗುರುಫಕೀರೇಶ್ವರನುಗಂಗಾ । ಧರನಮುಖದಿಂಪೇಳಿಸಿದನೀ ।
ಕೆರದಿಮುಗಿದುದುಸಂಧಿಯೊಂಭತ್ತನೆಯದೆಂದೆನಿಸಿ ॥ ೪೯ ॥
॥ಇತಿ ಶ್ರೀ ಶಿರಃಪುರ ಸನ್ಮಠ ಶಖಿನ್ಯ ಸಿಂಹಾಸನ ಶ್ರೀ ಭಗವಾನ್ ಭ ವಾತ್ಮೀಯ॥
ಗಂಗನಿಂ ಪೇಳಿಸಿದ ಪೌರಾಣದೊಳೊಂಭತ್ತನೆಯ ಸಂಧಿಸವಾಪ್ತವಿಂತು ।
೫೧೯ ಪದ್ಯಂಗಳಿಗೆ ಮಂಗಲಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ

## ೧೦ನೇ ಸಂಧಿ.

### ಕರ್ತರು ಶಿರಹಟ್ಟಿಗೆ ಬಂದು ನಿಂತದ್ದು.

ಸಂಧಿ ಸೂಚನೆ
ಪರಮಕರ್ತನುವರಶಿರಃಪುರ । ಕಿರದೆಬಂದನುನಿಂತನಾಡು ।
ತ್ತರರೆಶಾನುಫಕೀರನೆನಿಸುತೆಶೋಭಿಸುವನಾದ ॥ ಪಲ್ಲ ॥
ಬಿದ್ದಭಕ್ತರನೆತ್ತಿಕೊಂಬುದು । ಹೊದ್ದಿದಪವಾದವನುಕಳೆವುದು ।
ಬುದ್ಧಿಹೋದಡೆತಿದ್ದಿಕೊಡುವದುಬಿರುದುಗುರುವಿನದು ॥
ಇದ್ದಮಾನವಕಳೆವನಂಬಿಗೆ । ಯಿದ್ದದನುಸಲೆಬಿಡಿಸಿಕೆಡಿಸುವ ।
ಬುದ್ಧಿಯುಳ್ಳವರೇನುಗುರುವಿನಬಿರುದಿಗೊಪ್ಪುವರೆ ॥ ೧ ॥
ನೀತಿಬಿಡುವವನಲ್ಲಸದ್ಗುರು । ಘಾತಮಾಡುವನಲ್ಲಸದ್ಗುರು ।
ಯಾತರವನೇನಲ್ಲಕುಲಛಲದಾತನವನಲ್ಲ ॥
ಸೋತುನಡೆವವನಲ್ಲಜಗದೊಳು । ಭೀತಿಗೊಳ್ಳುವನಲ್ಲಸದ್ಗುರು ।
ವಾತನಾಗುರುತನ್ನುಹಿಡಿಯಿರಿಭಕ್ತರೆಂಬವರು ॥ ೨ ॥

ಮಾತುಪಲ್ಲಟನಾಡಿನುಡಿವರು । ಸೋತುಮಾಯೆಗೆಕಷ್ಟಬಡುವರು ।
ಜಾತಿಧರ್ಮವಕೆಡಿಸಿಬಿಡುವರುಹಣವನೆಳೆಯುವರು ॥
ನೀತಿಮಾರ್ಗವಬಿಡಿಸುವರುಗುರು ।ನಾಥನಾಬಿರುದುಗಳಕಾಯ್ವರೆ ।
ಯಾತಕೆಸಿಪರೊಗುರುಗಳಾವೆಂತೆಂದುಲೋಕದಲಿ ॥ ೩ ॥
ನಾನುಸಾಧುವುನಾನುಯೋಗಿಯು । ನಾನುಶರಣನುನಾನುಶ್ರೀಗುರು ।
ನಾನುಸತ್ಯಾರೂಢನಾನೇಹರಿಹರಬ್ರಹ್ಮ ॥
ನಾನುಪರತರವಸ್ತುವೆಂದೇ । ಮಾನವರುಮೆರೆಯುವರುಜಗದೊಳ ।
ಗೇನುಹೇಳಲಿನಗುವನಾಪರವಸ್ತುಗುರುರಾಯ ॥ ೪ ॥
ಅಲ್ಲಶಿವನಂಶಿಕರುಭುವನದೊ । ಳಲ್ಲಶ್ರೀಬಸವೇಶನಂಶಿಕ ।
ರಲ್ಲಶಿವಶರಣಾಂಶಿಕರುತಾವಲ್ಲನೋಡಿದಡೆ ॥
ಅಲ್ಲಮಾಪ್ರಭುದೇವನಂಶಿಕ । ರಲ್ಲನಾಯೆಗೆಮಿಾರಿನಡೆಯುವ ।
ರಲ್ಲಬಗಲಾಮುಖಿಯುಸಂತತಿಯಲ್ಲನರರುಗಡ ॥ ೫ ॥
ಮೃಡಮಹಾತ್ಮನುಪರಮಕರ್ತನು । ಪೊಡವಿಯಲಿಸಂಚರಿಸುತಾದು ।
ತ್ತೊಡನೆಬಂದನುವರಶಿರಃಪುರಕಾಗಿಗುಪ್ತದಲಿ ॥
ದೃಢಸುಭಕ್ತಿಪ್ರಿಯನು ಶ್ರೀಗುರು । ವೆಡೆವಿಡಿದುಚಿಲುಮಿಯಲಿನಿಂತನು ।
ಜಡರುಕುಲಛಲವಿಡಿದುನಿಂದಿಪರಾದರೇವೇಳ್ವ ॥ ೬ ॥
ಇವರುಬಂದಿಹರಾರೊಹೊಸಬರು । ವಿವಿಧವಿನಯೋಕ್ತಿಯಲಿನಾವಿಂ ।
ದಿವರಮಾತಾಡಿಸುವದೆಂದೇತಮ್ಮೊಳಾಡುತಲಿ ॥
ಇವರದರ್ಶನವಾದರೆಲ್ಲವು । ನಮಗೆತಿಳಿದಪುದೆಂದುಸಜ್ಜನ ।
ನಿವಹಬಂದುದುನೋಡಿಕರೆದನುಕರ್ತನಸುನಗುತ ॥ ೭ ॥
ಅವರವರಿಗನುಸಂಸಿಮನ್ನಣಿ । ಯವರಿಗಿತ್ತನುಕರ್ತಕೂತರಿ ।
ಗಿವನುನುಡಿದನುಕೇಳಿರೈಸದ್ಗುರುವಿನೀಕಥೆಯ ॥
ಇವನುಪ್ರಭುವಿನಪಾದಸೇವಕ । ನಿವನುಸದ್ಗುರುದ್ವಾರಪಾಲಕ ।
ನಿವನಿಗೇನುಂಬರುವದಿಲ್ಲೆನುತೆಂದನಾಕರ್ತಾ ॥ ೮ ॥
ಇಂದುನಿಮ್ಮೊಳುಗಿಂತುನುಡಿದರೊ । ಬಂದಿರೋದರ್ಶನಕೆನೀವ್ಬಗೆ ।
ದಂದಿರೋದರ್ಶನದಿತಿಳಿವಿರೊಯೆಂದನಾಕರ್ತಾ ॥

ಅಂದವೂಕಿಡುಸತ್ಯವೆಲ್ಲವು । ಬಂದಿಹೆವುನಿಜಪಾದದರ್ಶನ ।
ಕಿಂದುಧನ್ಯರೆನುತ್ತಲವರೆರಗಿದರುಕರ್ತನಿಗೆ ॥ ೯ ॥
ಅಂದುಬಂದಾಜನರುತಿಳಿದರು । ಬಂದಸಾಧುಗಳವರುದೊಡ್ಡವ ।
ರೆಂದುಭಯಭಕ್ತಿಯನುಹಿಡಿದರುಬಹಳಗುಪ್ತದಲಿ ॥
ಅಂದಿನಿಂಗುರುವೆಂದುಭಾವಿಸು । ತಂದದಲಿನಡಕೊಳ್ಳಹತ್ತಿದ ।
ರಂದದಕೆಪಳಿಗೈವವಾಮರರಿರ್ದರೇನೆಂಬೆ ॥ ೧೦ ॥
ಅವರಿಗವರವರಂತೆತಾನಾ । ಗುವನುನುಡಿವನುನೋಡುತಾವಾ ।
ನವರುವಿಸ್ಮಿತರಾಗಿಭಯಭಕ್ತಿಯಲಿಮುಳುಗುವರು ॥
ಅವರವರಮನದಿಚ್ಛೆಯೆಂದದೊ । ಳವರವರಕಾವ್ಯಾರ್ಥವನುತಾ ।
ನವರವರಿಗಾಜ್ಞೆಯನುಕೊಡುವನುಗುರುಫಕೀರೇಶ ॥ ೧೧ ॥
ಗುರುದಿಗಂಬರಶಂಭುಲೀಲಾ । ಭರದೊಳಿರುತಿರೆಚಂಡುಜನರಾ ।
ಗುರುಮಹತ್ವವನರಿದುಬರಹತ್ತಿದರುದಿನದಿನಕೆ ॥
ಎರಗಿಪ್ರಾರ್ಥನೆಗೈವುತಿರುವರು । ಗುರುವೆತಮ್ಮಯಪಾದಭಕ್ತರೊ ।
ಳರಲಿನಿಜಕೃಪೆಯೆಂದುಸೇವಿಸುತಿಹರುನಿಷ್ಠೆಯಲಿ ॥ ೧೨ ॥
ಗುರುವುಭಕ್ತರನಿಷ್ಠೆಗೊಲೆಯುತೆ । ಕರುಣದಿಂದೀಕ್ಷಿಸುತಲವರಿಗೆ ।
ದುರಿತಕರ್ಮದೊಳೇನುಫಲವಿಲ್ಲೆಂದುಬೋಧಿಸುತೆ ॥
ಪರಮಶಿವಶರಣರ್ಕಳಾಟವ । ನರುಹಿಸುತ್ತಾತ್ಮೀಯಮಹಿಮೆಯ ।
ಕುರುಹುತೋರುತೆಗುಪ್ತದಿಂದಾಡುತ್ತಲಿರುತಿಹನು ॥ ೧೩ ॥
ತಿಳಿದುಭಕ್ತರುಗುರುವಿನಾಟವ । ನೊಳಗೆಸಂಶಯವಳಿದುನಿಜನಿ ।
ರ್ಮಲಿನಮಾನಸರಾಗಿಸೇವಾಸಕ್ತರಾಗಿರಲು ॥
ಲಲಿತಸದ್ಗುರುಮೂರ್ತಿಭಕ್ತರಿ । ಗೊಲೆದನೈಬಹುಪರಿಯೊಳವರಿಗೆ ।
ತಿಳುಹಿದನುಲೌಕಿಕದಪರಮಾರ್ಥಕದಸಂಗತಿಯಾ ॥ ೧೪ ॥
ಧರೆಯಭಕ್ತರೆಕೇಳಿರೈನೀವ್ । ವರಫಕೀರೇಶ್ವರನಕರ್ತನ ।
ಚರಣವಿಡಿದಾಭಕ್ತರೆಲ್ಲರು ಮೊಂದುದಿನಸದಲಿ ॥
ಗುರುವಿಗುನ್ನತಮಠವಕಟ್ಟಿಸಿ । ಪುರುದೊಳಿಡುವದುಸೇವೆಗೈವುದು ।
ಗುರುಕಟಾಕ್ಷವಪಡೆದುಕೊಳ್ಳುವದೆಂದುಸಿಕ್ಷಯಿಸಿ ॥ ೧೫ ॥

ಹರುಷದಿಂದವರೆಲ್ಲಕೂಡಿಯೆ । ಗುರುಮಹಾಸನ್ನಿಧಿಗೆಬಂದರು ।
ಕರವಮುಗಿದೇಶಿರವಬಾಗಿಸಿನಿಂತುನಿಷ್ಠೆಯಲಿ ॥
ಗುರುವೆನೀವಿಲ್ಲಿರಲುಬಾರದು । ಪುರಕೆಬಿಜಯಂಗೈವುದುತ್ತಮ ।
ತರದಮಠವನುಕಟ್ಟಿಸುವೆವೆಂತೆಂದರಾಜನರು ॥ ೧೬ ॥
ಅರಿದಭಕ್ತರೆನಿಮ್ಮಭಕ್ತಿಯು । ಭರಿತವಾಗಿದೆಸಾಕುತನಗೀ ।
ತರವುನಿಮ್ಮೊಳಗಾನುನಿತ್ಯಾನಂದಮಯನಿಹೆನು ॥
ಪುರವದೇತಕೆಮಠವದೇತಕೆ । ನರತನುವೆಪುರವೆನಗೆನಿಜಮಠ ।
ವಿರಲುಪೆರತಿನ್ನೇನುಬೇಕಿಲ್ಲೆಂದನಾಕರ್ತಾ ॥ ೧೭ ॥
ಗುರುವೆತಮ್ಮಯಭಕ್ತರಿಚ್ಛೆಯ । ನಿರದೆಪಾಲಿಪುದೆಂದುಪ್ರಾರ್ಥಿಸು ।
ತೆರಗಿನೀವ್ದಯಮಾಡಿರೆಬಿಡದೆಂದರಾಜನರು ॥
ಗುರುವಿನಾಟಕೆಸ್ಥಳವಕೊಡುವೀ । ಮರುಳತನವೆಲ್ಲಿಂದಬಂದುದು ।
ಹರುಷವೇನಿಮಗೆಂದುನುಡಿದನುಕರ್ತನಸುನಗುತಾ ॥ ೧೮ ॥
ಪುರವದೇತಕ್ಕೆನಗೆಸಲ್ಲದು । ಶರಣವತ್ಸಲಸಾಂಬಸದ್ಗುರು ।
ವರನುನಿಮ್ಮೊಳಗಿರುವನಗಲದೆಸರ್ವಕಾಲದಲಿ ॥
ಪರಮಭಕ್ತಿಯುನಿಮ್ಮೊಳಿರ್ದೊಡೆ । ಪುರದಬಡಗಣದಿಶೆಗೆಸ್ಥಳವನು ।
ಗುರುವಿಗೀಯುವದಲ್ಲಿವಾಸಿಪನೆಂದುಗುರುನುಡಿದ ॥ ೧೯ ॥
ಗುರುವೆಚಿತ್ತಾಧೀನವೆನ್ನುತೆ । ನೆರೆದಜನಕೈಮುಗಿಯಲಾಕ್ಷಣ ।
ಗುರುಪರಾತ್ಪರವಸ್ತುಕರ್ತನು ಚೆಲುಮೆಯನುಬಿಟ್ಟು ॥
ಹೊರಟನಲ್ಲಿಂಗ್ರಾಮಕುತ್ತರ । ಕಿರುವಕಾನನದಲ್ಲಿಹೊಕ್ಕನು ।
ಭರದೊಳಾಜನವೆಲ್ಲನಡೆದುದು ಪಾದವಗಲದಲೆ ॥ ೨೦ ॥
ಅಲ್ಲಿಹುತ್ತನುಕಂಡುಶ್ರೀಗುರು । ವಲ್ಲಿನಿಂತನುಬಹಳಸಂತಸ ।
ದಲ್ಲಿಭಕ್ತರೆಕೊಡಿರಿಸ್ಥಳವೆನಗಿಲ್ಲಿನೀವೆಂದ ॥
ಇಲ್ಲಿಭೀಕರಮೃಗಗಳಿರ್ದಪು । ವಿಲ್ಲಿರುವದೇನುಚಿತವೇಸಮ ।
ವಲ್ಲಪುರವೆಪ್ರಶಸ್ತವೈತೆಮಗೆಂದುದಾಜನವು ॥ ೨೧ ॥
ಬಲ್ಲನೈಸದ್ಭಕ್ತರೇನೀ । ವಿಲ್ಲಿಯೇಸ್ಥಳಕೊಡುವದೆನಗೆಂ ।
ದಲ್ಲಮಪ್ರಭುವೆನಲುವಿಸ್ಮಿತರಾಗುತಾಜನವು ॥

ಸಲ್ಲಿತೈಗುರುಪಾದಕೀಸ್ಥಳ । ವಿಲ್ಲಿಗುರುನಿಜಚಿತ್ತನೆಲಸಿ ।
ತ್ರಿಲ್ಲಿಯೇನಾವ್‌ಸೇವೆಮಾಡುವೆವೆಂದುದಾಜನವು ॥ ೨೨ ॥
ಗುರುಪದಾಂಬುಜಭಕ್ತರೆಲ್ಲರು । ನೆರೆದುಗುಡಿಸಲುಹಾಕಿಕೊಟ್ಟರು ।
ಪರಮಪರಶಿವಮೂರ್ತಿನೆಲಸಿದನಲ್ಲಿಹುತ್ತಿನಲಿ ॥
ಪರಿಪರಿಯನಿಜಲೀಲೆಯಲಿಸಂ । ಚರಿಸುತಂತಾನಲ್ಲಿಹುತ್ತಿನೊ ।
ಳಿರುತೆಕಂಗೊಳಿಸುವನುಭಕ್ತರುಬಂದೊಡಾಕ್ಷಣಕೆ ॥ ೨೩ ॥
ಸುತ್ತಮುತ್ತಲುಡಬ್ಬಗಳ್ಳಿಯ । ದೊತ್ತಿಬೆಳದಿಹಗಜಗಪೆಳೆಗಳ ।
ಮೊತ್ತಶೀಗೆಯಪೆಳೇಣುಜಾಲೆಯಪೆಳೆಯುಹಳವುಗಡ ॥
ಹುತ್ತಿನೊಳಗಿರುತಿರುತೆಕರ್ತನು । ಮತ್ತೆಗುಡಿಸಲದೊಳಗುಮಿರುವನು ।
ಸುತ್ತುಮುತ್ತಲೆಸುಳಿಯದಿರ್ದವುವನ್ಯಮೃಗಕುಲವು ॥ ೨೪ ॥
ಇರುತೆಹುತ್ತಿನೊಳಂತುಸದ್ಗುರು । ವರನುಕಳೆಯುತೆಕೆಲವುಕಾಲವ ।
ನರುಹದಿರ್ದನುನಿಜಮಹತ್ವವನೆಲ್ಲ ಲೋಕದಲಿ ॥
ಗುರುವಿನೊಳಲೀಲೆಯನುತಿಳಿದಾ । ಪುರದಭಕ್ತರುಕರ್ತನಂಘ್ರಿಗೆ ।
ಬರುವರಾದರುನಿತ್ಯದಲಿಸಿಂದಕರಿಗಂಜದಲೆ ॥ ೨೫ ॥
ಬರಿದೆತತ್ವವನೋದಿತಮ್ಮೊಳ । ಗಿರುವದಾಬ್ರಹ್ಮಾಂಡವೆಂದೇ ।
ಪರಕೆಪರತರವಸ್ತುತಾವೇಯೆಂದುಭಾವಿಸುತ ॥
ಸಿರಿಯುಸೊಬಗಿಗೆಸಿಲ್ಕಿಮೆರೆಯುತೆ । ದುರಿತಕರ್ಮದಮರವಿಮನುಜರು ।
ಗುರುಗಳೆನಿಸುವರಕಟನಗುವರುಪ್ರಭುವಿನಂಶಿಕರು ॥ ೨೬ ॥
ಕಂಡುಸುಖಿಸಿದರವರುಶರಣರು । ಕಂಡುನಲಿದಾಡಿದರುಶರಣರು ।
ಕಂಡುಹಾಡಿದರಂದುಶರಣರುಬಸವನಂಶಿಕರು ॥
ಕಂಡುಕಾಣಿಸಿಕೊಳ್ಳದಲೆಭೂ । ಮಂಡಲದೊಳಾಡಿದರುಗಡಜಗ ।
ಭಂಡರೀನರರೇನುಕಂಡರೊಗುರುಗಳೆಂತಹರೊ ॥ ೨೭ ॥
ಜಡಿದುಮೆಟ್ಟುವತ್ರಾಣವಿಲ್ಲವು । ಹಿಡಿದುನುಂಗುವತ್ರಾಣವಿಲ್ಲವು ।
ನಡಿಸಿತೋರುವಮಂತ್ರವಿಲ್ಲವುಶರಣರಂತೇನು ॥
ಕೊಡುವಕೊಳ್ಳುವಮಹಿಮೆಯಿಲ್ಲವು । ಜಡರುಮಾಯಾಬದ್ಧಮನುಜರು ।
ಕೆಡುವರೈಗುರುವೆನಿಸಿಹರಹರಪೇಳ್ವುದೇನದನು ॥ ೨೮ ॥

ಕಷ್ಟಕೊಡುವನೆಲೋಕದಲಿಮಿಗೆ । ಭ್ರಷ್ಟವೊಳ್ಪನನಂಬಿದವರಿಗೆ ।
ನಷ್ಟಗೈವನಕಷ್ಟಕಾಲಕೆಕಾಯದಿರುವವನ ॥
ಎಷ್ಟುಸ್ತುತಿಸಿದರೇನುಸೇವೆಯ । ದೆಷ್ಟುಮಾಡಿದಡೇನುಸಿತಾನೆ ।
ಳ್ಳಷ್ಟುಫಲವಿಲ್ಲಕಟನೋಡಿರಿಭಕ್ತರೆಂಬವರು ॥ ೨೯ ॥
ಭಕ್ತರರವಿಯಚಿಂತೆಯಲಿಸ । ದ್ಭಕ್ತರೂಟದಚಿಂತೆಯಲಿಸ ।
ದ್ಭಕ್ತರಾಹೊಲಮನೆಯಚಿಂತೆಗಳಲ್ಲಿನಂಬಿರುವ ॥
ಭಕ್ತಜನರೊಳಗಿರುವಚಿಂತೆಗೆ । ಭಕ್ತರಕ್ಷಕಗುರುಸಮರ್ಥನು ।
ಶಕ್ತಿಯಿಂವೊಯೆಯಲಿನಡೆಯಿಸಿಕೊಡುತಕಾಯುವನು ॥ ೩೦ ॥
ಚಿಲಿಮಿಯಲಿನಿಂತಡಗಿಶಿವಕಳೆ । ಗಳನುತೋರಿಸಿಗುಪ್ತಭಕ್ತರ ।
ಬಳಗಹೆಚ್ಚಿಸಿಹುತ್ತಿನೆಡೆಯಲಿನೆಲಸಿತೋರುವಗೆ ॥
ಇಳೆಗೆಕಾರಣಕಾರ್ಯನಡಿಸ । ಲ್ಕೆಳಸಿಶಿರಹಟ್ಟಿಯಲಿನಿಂತಾ ।
ಕಳೆಗಳಾಣ್ಮಗೆಬಿಡದೆಬೆಳಗಿರಿಮಂಗಳಾರತಿಯ ॥ ೩೧ ॥
ನಾನುನಿಮ್ಮಂತೆಂದುನುಡಿಯುತೆ । ನೀನುಶ್ರೀಗುರುವೆನಿಸಿಕೊಂಡೈ ।
ಸ್ವಾನುಭವಸುಜ್ಞಾನಮೂರ್ತಿಪರಾಕುಮುದಿಪಾಚ್ಛಾ ॥
ನಾನುನಿಮ್ಮವನೆಂದುಹೇಳುತೆ । ಧ್ಯಾನಬಲವನುಕೊಟ್ಟುಸಲುಹಿದೆ ।
ನೀನುಕಾರಣಪುರುಷಕರ್ತಪರಾಕುಪ್ರಭುರಾಯಾ ॥ ೩೨ ॥
ಗುರುಮಹತ್ವದಸಾರವಿಂತಿದು । ಗುರುಮಹತ್ವಮನಂತಮಿರ್ಪುದು ।
ಗುರುಮಹತ್ವವನರಿದುಪೇಳುವರಾರುಲೋಕದಲಿ ॥
ಗುರುಫಕೀರೇಶ್ವರನುಗಂಗಾ । ಧರನಮುಖದಿಂಪೇಳಿಸಿದನೀ ।
ತೆರದಿಮುಗಿದುದುಸಂಧಿಹತ್ತನೆಯೆನಿಸುತಂದದಲಿ ॥ ೩೩ ॥

॥ಇತಿ ಶ್ರೀ ಶಿರಃಪುರಸನ್ನುತ ಶೂನ್ಯಸಿಂಹಾಸನ ಶ್ರೀ ಭಗವಾನ್ ವಿಭುವಾತ್ರೀಯ॥ ಗಂಗನಿಂ ಪೇಳಿಸಿದ ಪೌರಾಣದೊಳ್ ಹತ್ತನೆಯ ಸಂಧಿಸಮಾಪ್ತಮಿಂತು ।

೩೩೨ ಪದ್ಯಂಗಳಿಗೆ ಮಂಗಲಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ

## ೧೧ನೇ ಸಂಧಿ.

ಕರ್ತರು ಕೋಳಿವಾಡದದೇವಿಗೆ ವಚನಕೊಟ್ಟದ್ದು.

ಸಂಧಿ ಸೂಚನೆ

ಉಡಿಯತುಂಬಿಸಿಗುರುರಥೋತ್ಸವ । ನಡೆವುದೆಂದಿಗುಮೆಂದುದೇವಿಗೆ ।
ನುಡಿದುಕರ್ತನುವಚನಗೊಟ್ಟನುಕೋಳಿವಾಡದಲಿ ॥ ಪಲ್ಲ ॥
ಲೋಕದಲಿಕುಲಧರ್ಮಗುರುಗಳ । ನೇಕರಿರ್ದಪರೈಸೆಠಾನದು ।
ಲೌಕಿಕದಪಥಬೇರೆ ಶರಣರಪಥವು ತಾಬೇರೆ ॥
ಕಾಕುಕೂಕರಿಗೇನುತಿಳವುದು । ಲೋಕಭಕ್ತರೆಕೇಳಿರೈಜಗ ।
ದೇಕಕರ್ತನಕಾರಭಾರವುಬಹಳಮೌಜಿನದು ॥ ೧ ॥
ಸೃಷ್ಟಿಕರ್ತನಗಾಧಮಹಿಮೆಗೆ । ದೃಷ್ಟಿಗೊಡದಲೆಜನರುವಿಷಯದಿ ।
ಕಷ್ಟಬಡುವರುಭ್ರಷ್ಟರಪ್ಪರುಮಾಡಿಪಾಪವನು ॥
ಎಷ್ಟುಕೇಡಿದುನೋಡಿರೈತನು । ವೆಷ್ಟುಮೇಲಿದುನೋಡಿರೈನೀ ।
ವಿಷ್ಟುತಿಳಿದಾಚರಿಸಿದೊಡೆನರಜನುಮಸಾರ್ಥಕವು ॥ ೨ ॥
ಮಹಿಯೊಳೀನರಜನ್ಮವೆಂಬುದು । ಬಹಳಪುಣ್ಯಪ್ರಾಪ್ತಜನ್ಮವು ।
ಬಹಳಪರಿಭವದಾಂಟಬಳಲುತೆಕಡೆಗೆಬಂದಿಹುದು ॥
ಬಹಳವಿಧದಲಿತಿಳಿದುನೋಡಿರಿ । ಮಹಿತಮಹಿಮರಮೃಡನಶರಣರ ।
ಸಹಜಪಥವನುಹಿಡಿಯೆಸದ್ಗತಿಮುಕ್ತಿದೊರಕುವದು ॥ ೩ ॥
ಶಕ್ತಿಯೇಹೆಚ್ಚೆಂದುಹಲವರು । ಯುಕ್ತಿಯೇಪಿರಿದೆಂದುಕೆಲವರು ।
ಶಕ್ತಿಯುಕ್ತಿಗಳೊಳಗೆತರ್ಕವಮಾಡಿದಣಿಯುವರು ॥
ಶಕ್ತಿಹೆಚ್ಚಿನದಲ್ಲತಿಳಿದಡೆ । ಯುಕ್ತಿಹೆಚ್ಚಿನದಲ್ಲಬಗೆದಡೆ ।
ಭಕ್ತಿಯೇಬಹುಶ್ರೇಷ್ಠವೆಂಬುದಕುಂಟು ಶ್ರುತಿಬಲವು ॥ ೪ ॥
ಶಕ್ತಿಯಲಿಪೂರ್ವದಲಿಕೆಟ್ಟರು । ಯುಕ್ತಿಯಲಿಪೂರ್ವಜರುಕೆಟ್ಟರು ।
ಶಕ್ತಿಯುಕ್ತಿಗಳಲ್ಲಿಬಲ್ಲಿದರಾಗಿ ಫಲವೇನು ॥
ಶಕ್ತಿಯಿಲ್ಲದೆಯುಕ್ತಿಯಿಲ್ಲದೆ । ಭಕ್ತಿಯಲಿಪೂರ್ವದಲಿಪಿರಿಯರು ।
ಮುಕ್ತಿಸಂಪದವಡೆದುಪರಿಭವದಾಂಟಸುಖಿಸುವರು ॥ ೫ ॥

ನಲಿದುಕೇಳಿರಿಭಕ್ತರೆಲ್ಲರು । ಲಲಿತಸದ್ಗುರುವೆನಿಸಿಹುತ್ತಿನ ।
ಬಳಿಯೊಳಡಗೊಂಡಾಡುತಾತ್ಮಾರಾಮನೊಂದುದಿನ ॥
ತಿಳಿದಭಕ್ತರುನೀವುನಿಮಗಾಂ । ತಿಳಿಸಿಹೇಳುವದೇನುಸಲೆಸಂ ।
ಚಲಿಸಿಬಂದಪೆನೆಂದುನುಡಿದನುಗುಪ್ತಭಕ್ತರಲಿ ॥ ೬ ॥
ಚರಿಸುವದುನೆರೆಭಿಕ್ಷೆಬೇಡುವ । ದಿರದೆಭಕ್ತಿಯನೋಡುವದು ಕಡು ।
ಕುರುಹುತೋರ್ಪುದುಗುರುತವಿಡುವದು ಗುರುವಿನಾಟವಿದು ॥
ಗುರುಫಕೀರೇಶ್ವರನಲೀಲೆಯು । ಪರಿಯದೆಂತಿಹುದೇನೊಗಡ ಸಂ ।
ಚರಿಸಿಬರಬೇಕೆಂದುಕರ್ತನುಪೇಳ್ದನಾಪ್ತರಿಗೆ ॥ ೭ ॥
ಪರಮಭಕ್ತರೆಕೇಳಿರೈನೀವ್ । ಗುರುಫಕೀರನುಹಳ್ಳಿಗಳ ಸಂ ।
ಚರಿಸಿಮನುಜರಭಕ್ತಿನೋಡಲ್ಕೆಂದು ಹೊರಟಿರಲು ॥
ಗುರುವಿನಾನಂದಪನುತಿಳಿದವ । ರರವುಮುಳ್ಳವರಾದಕೆಲವರು ।
ಹೊರಟರಾಗುರುಸೇವೆಮಾಡಲ್ಕೆಂದುಹರುಷದಲಿ ॥ ೮ ॥
ಪೊಡವಿಯೊಳಗವತರಿಸಿನರತನು । ವಿಡಿದುಗುಪ್ತದೊಳಿರುವಕರ್ತನು ।
ನಡೆವುತಲಿಭಕ್ತ್ಯರ್ಥದಲಿಸಂಚಾರವಾಡುತಲಿ ॥
ಬಿಡದೆಪಳಿವರಜಗಳತೆಗೆವರ । ಕೆಡಿಸಿನಲಿವರವೋಸಗೈವರ ।
ನಡಿಗಡಿಗೆಕಾಣುತ್ತೆನುಡಿದನುತನ್ನಭಕ್ತರಲಿ ॥ ೯ ॥
ಕಲಿಯುಮುಗಿವಡೆಕಡೆಯಕಾಲದ । ಬಲಿಯೊಮೇಣೀದುರಿತಲೋಕದ ।
ಮಲಿನಭಾವಪ್ರೊಭಕ್ತಿಯೇನೇನಿಲ್ಲವೆಂದೆನುತ ॥
ಪಲವುಪಳ್ಳಿಗಳಲ್ಲಿಕರ್ತನು । ಚಲಿಸಿಕಾಣದೆಭಕ್ತಿಯನುಮಿಗೆ ।
ತೊಳಲಿಪರಿಜನಸಹಿತಪೊಕ್ಕನುಕೋಳಿವಾಡದಲಿ ॥ ೧೦ ॥
ಬಂದುಸ್ಥಳದಲಿತನ್ನಪರಿಜನ । ಕಂದವಾಗಿರಲಲ್ಲಿತನ್ನಾ ।
ನಂದದಲಿತಾನಿಳಿದುಕೊಂಡನುಕರ್ತತತ್ಪುರದಿ ॥
ಹಂದಿಮನುಜರುಹಲವುನುಡಿದರು । ಮಂದಮತಿಗಳುನೋಡಿನಡೆದರು ।
ಬಂದವರದಾರೆಂದುಯಾರುಂಕೇಳಲಿಲ್ಲಕಟಾ ॥ ೧೧ ॥
ಗುರುಫಕೀರನಭಕ್ತರೇನೀ । ವರಿತುಕೊಳ್ಳಿರಿನೆನಪಿಗಿರಿಸಿರಿ ।
ಮರೆಯಬೇಡಿರಿಪೇಳ್ವೆನಾಸಂಚಾರ ಸಮಯದಲಿ ॥

ಎರಡುದಿವಸಕ್ಕೊಮ್ಮೆಕೂಳ್ಗಡ । ದೊರೆತರೇನದುಪುಣ್ಯಪರಿಜನ ।
ಸೊರಗಿಬಹುಕಷ್ಟದಲಿಕರ್ತಂಗೆರಗಿತಿಳಿಸಿದರು ॥ ೧೨ ॥
ಪರಮಕರುಣಾಕರನುಮಹಿಮಾ । ಪುರುಷನಾಗುರುದತ್ತಕರ್ತನು ।
ಪರಿಜನವುಪಸಿದಿರುವಪರಿಯನುತಿಳಿದುಸಂಜೆಯಲಿ ॥
ಚರಿಸಿಗುಡಿಯನುಹೊಕ್ಕುದೇವಿಗೆ । ಗುರುವಿನಾನಿಜತಾಯಿಯಾದೊಡೆ ।
ಭರದೊಳನ್ನವತಂದುನೀಡೌಯೆಂದುನಡೆತಂದಾ ॥ ೧೩ ॥
ಕಾಡುತನವೆಷ್ಟಿಹುದೊಲೋಕದ । ಮೂಢತನವಿನ್ನೆಷ್ಟೊವಾಯೆಯ ।
ಮೋಡಿಯಾಬಲವೆಷ್ಟೊನೋಡುವೆನೆನ್ನಮಕ್ಕಳಿರಾ ॥
ಮಾಡಬೇಡಿರಿಚಿಂತೆಸಂತಸ । ಮಾಡಿಕೊಳ್ಳಿರಿನಿಮ್ಮಗುರುತಾಯ್ ।
ನೀಡುವಳುನಿಮಗೆಂದುಕರ್ತನುಪೇಳುತಿರಲತ್ತ ॥ ೧೪ ॥
ಇತ್ತಕೇಳಿರಿಪರಮಭಕ್ತರೆ । ಮೃತ್ಯುಹರನಾಕರ್ತನಾಜ್ಞೆಗೆ ।
ಹೊತ್ತುಮಾಡದೆದೇವಿಪಕ್ವಾನ್ನವನು ಸಂಗ್ರಹಿಸಿ ॥
ಬತ್ತರದೊಳ್ಮತಂದುತಾ ಮುಂ । ದಿತ್ತುನನನಾಟಕಗೆಮಿಗೆಪೊಗ ।
ಳುತ್ತೆನಡೆದಳುಹೇಳಲೇನಾಸಾಂಬಲೀಲೆಯನು ॥ ೧೫ ॥
ದೇವಿತಂದಿಟ್ಟನ್ನವನುಗುರು । ದೇವನಾಪರಿಜನಕೆತೋರಿಸಿ ।
ನೀವಿದುಣ್ಣಿರಿಶಾಂತಿಗೊಳ್ಳಿರಿಯೆಂದುಪೇಳುತಿರೆ ॥
ದೇವದೇವನೆನಿನ್ನಸೂತ್ರವ । ನಾವನರಿವನುಲೋಕದೊಳಗಂ ।
ದಾವಿಭುಗೆಶಿರಬಾಗಿಸರ್ವರುಮೂಟಮಾಡಿದರು ॥ ೧೬ ॥
ಪರಮಭಕ್ತರೆಕೇಳಿರೈಸಲೆ । ಪುರದಧೀಶ್ವರಿದೇವಿಯಾಶ್ರೀ ।
ಗುರುವಿಗನ್ನವಕೊಟ್ಟುಹೋದಾಬಳಿಕತನ್ನೊಳಗೆ ॥
ವರದಗುರುಬಸವೇಶನಾಟದ । ಗುರುತುಹಿಡಿವವರಾರುಬಸವೇ ।
ಶ್ವರಗೆಸೇವೆಯಮಾಳ್ಪರಾರಿಂತೆಂದಳಾದೇವಿ ॥ ೧೭ ॥
ಅಂದಿನಾರಾತ್ರಿಯಲಿಚಿಂತಿಸಿ । ಬಂದತಂದೆಗೆಸೇವೆಮಾಡುವ ।
ದೆಂದುಮನದೊಳಗೊಂದುಪಾಯುವಕಂಡಳಾಕ್ಷಣಕೆ ॥
ಚಂದದಲಿಬಂಡಿಗಳನಿಳಯಿಸಿ । ಹೊಂದಿದಧ್ವದಶ್ರಮವಕಳೆಯ ।
ಲ್ಕೆಂದುಮಲಗಿರಲೊಬ್ಬಶೆಟ್ಟಿಯುತಿಳಿದಳಾದೇವಿ ॥ ೧೮ ॥

ಊರಹೊರಗಾಶೆಟ್ಟಿಮಿರ್ಪೆಡೆ । ಗಾರುಮರಿಯದತೆರದಿದೇವಿಯು ।
ಸಾರಿನಿಜಮಾಯೆಯಲಿಬಲುಬೊಬ್ಬಾಟವೆಸಗಿದಳು ॥
ಯಾರುಯಾರೆಂದೆನುತಶೆಟ್ಟಿಯು । ಭೂರಿಚಿಂತಾಕ್ರಾಂತನಾಗುತೆ ।
ದಾರಿಹಿಡಿಯಿರಿತೋರುತಿದೆಬೆಳಗೆಂದನಾಳ್ಗಳಿಗೆ ॥ ೧೯ ॥
ಇರಲುನಡುವಿರುಳವರುರಾತ್ರಿಯಃ । ತೆರವನರಿಯದೆದೇವಿತಂತ್ರದಿ ।
ಮರುಳರಾಗಿಯೆನಡಿಯೆಹಾದಿಯುಕಾಣದಂತಾಗೆ ॥
ಅರರೆಶೆಟ್ಟಿಯುಹಲವುಹಂಬಲ । ವೆರಿಸಿನನಗೇಂವಃಂದೆಗತಿಯೆಂ ।
ದೊರಲಿಪರಮೇಶ್ವರನಧ್ಯಾನಂಗೈಯ್ಯತೊಡಗಿದನು ॥ ೨೦ ॥
ಗುರುವೆನೀದಯಮಾಡುಶಂಕರ । ಸ್ಮರಿಪಭಕ್ತರಕಾವೆನೆಂಬುವ ।
ಬಿರುದುನಿನ್ನದುನಮ್ಮನೆಲ್ಲರನೀನೆಸಲಹುವದು ॥
ಇರುಳುಕಳಿದಾಬಳಿಕತೋರಿದ । ಪುರದೊಳಿಳಿದೇಪ್ರಸ್ತುಮಾಳ್ಪೆನು ।
ಹರನೆಬಂದಾಪತ್ತುಪರಿಹರಿಸೆಂದುಪ್ರಾರ್ಥಿಸಿದಾ ॥ ೨೧ ॥
ಧರೆಯಭಕ್ತರೆಕೇಳಿರೈನೀ । ವಿರುಳೊಳಾಗಳುಶೆಟ್ಟಿಪರಮೇ ।
ಶ್ವರನಪಾದಕೆನಮಿಸಿಬಿನ್ನಪಮಾಡುತಿರಲತ್ತ ॥
ಪುರದದೇವಿಯುಬಹಳಸಂತಸ । ವೆರೆದುತನ್ನಯತಂತ್ರದಿಂದಲೆ ।
ಮರಗುತಿರುವಾಶೆಟ್ಟಿಗಾಗಳೆಕರುಣಿಸಿದಳರರೆ ॥ ೨೨ ॥
ಬೆಳಗುತೋರ್ದಂತಾಗಳೂರಬು । ಬಳಿಯೊಳುರೆಕಣ್ಗೆಸೆಯೆಶೆಟ್ಟಿಯು ।
ನಲಿವುತೆಲ್ಲರಕೂಡಿಹೊಕ್ಕನುಕೋಳಿವಾಡದಲಿ ॥
ಸುಳಿಯುತಾಗ್ರಾಮದಲಿಶೆಟ್ಟಿಯು । ಕಳೆಗಳೊಃಪ್ಪುವಪರಮಕರ್ತನ ।
ಕಳೆಯರಿತುಸಾಷ್ಟಾಂಗವೆರಗಿದನಾಪರಾತ್ಪರಗೆ ॥ ೨೩ ॥
ಗುರುವೆಬುದ್ಧಿಯೆಪಾದಸನ್ನಿಧಿ । ಗಿರುವುದೆನ್ನಯಬಿನ್ನಹವುನೀಂ ।
ಕರುಣಿಸಲಿಬೇಕಯ್ಯಬಿಡದೆಂದೆನ್ನುತಿರೆಸೆಟ್ಟಿ ॥
ನಿರಘನಿರಶನನಾದಕರ್ತನು । ಪುರದದೇವಿಯಮಹಿಮೆನಿಜವೆಂ ।
ದರಿದುಭಕ್ತನೆಬಿನ್ನಪವಗೆಯ್ಯುನೀನೆಂದಾ ॥ ೨೪ ॥
ಮದನಮರ್ದನಭಕ್ತನಿನ್ನಯ । ಪುದಿದಭಕ್ತಿಗೆಮೆಚ್ಚಿದೆನುಸಂ ।
ಪದವುಹೆಚ್ಚಲಿಭಕ್ತಗಣರಿಗೆನೀಡುನೀಡೆನಲು ॥

ಮುದದಿಶೆಟ್ಟಿಯುತನ್ನತಾಣದೊ । ಳೊದಗಿಸಿದನಂದೈದೆಸರ್ವವ ।
ಹದವನಾಗಿಸಿಮಾಡಿಸಿದಪಕ್ವಾನ್ನದಡಿಗೆಗಳ ॥ ೨೫ ॥
ಎಲ್ಲಸಿದ್ಧತೆಗೈದುಶೆಟ್ಟಿಯು । ನಿಲ್ಲದಲೆನಡೆತಂದುನಮಿಸು ।
ತ್ತೆಲ್ಲರುಂದಯವಾಡುವದುಬಿಡದೆಂದುಕೈಮುಗಿಯೆ ॥
ಅಲ್ಲಮಪ್ರಭುಗುರುಫಕೀರನು । ನಿಲ್ಲದಲೆಕರಕೊಂಡುಭಕ್ತರ ।
ನೆಲ್ಲಬಿಜಯಂಗೈದನಾಘನಸೆಟ್ಟಿಹರ್ಷಿಸಲು ॥ ೨೬ ॥
ಅಲ್ಲಿಭಯಭಕ್ತಿಯಲಿಶೆಟ್ಟಿಯು । ದೆಲ್ಲಬಗೆಯಿಂಕರ್ತನಂಪ್ರಿಯೆ ।
ಳಲ್ಲಿಕೂಡಿದಭಕ್ತಮಂಡಳಿಗೆಲ್ಲಮನದಣಿಯೆ ॥
ಎಲ್ಲತೆರದಿಂತೃಪ್ತಿಬಡಿಸಿದ । ನೆಲ್ಲಬಗೆಯಿಂಕೊರತೆಯಾದುದ ।
ನೆಲ್ಲಕ್ಷಮಿಸಿರಿಯೆಂದುಶಿರಬಾಗಿದನುಗಡಶೆಟ್ಟಿ ॥ ೨೭ ॥
ಪೆರನದಾವನೊಬಣಜಿಗನುಬಂ । ದರರೆಪ್ರಸ್ತವಮಾಡಿದನುಮಿಗೆ ।
ಗುರುತದೇನದೊಗಡಫಕೀರಗೆಬಿನ್ನವಿಸಗೆಯ್ಯೆ ॥
ಎರಗಬಹುದೇಶಿವಮತರ್ಕಳು । ಧರೆಗಿದೇನಾಶ್ಚರ್ಯವೆಂದಾ ।
ಹರಮತದಜನನುಡಿಯಹತ್ತಿತುತಮ್ಮತಮ್ಮೊಳಗೆ ॥ ೨೮
ಹರಿಯಭಕ್ತರೆಲಾಲಿಸಿರಿನೀವ್ । ಹರನಭಕ್ತರೆನೀವುಕೇಳಿರಿ ।
ಪರಮದೇವಿಯಭಕ್ತರೇನೀವ್‌ಕೇಳಿರೈಬಿಡದೆ ॥
ನರಸುರೋರಗಲೋಕಪಾಲಕ । ಗುರುಫಕೀರೇಶ್ವರನುಕರ್ತನು ।
ಚರಣಭಕ್ತರಿಗೆಲ್ಲಪ್ರಸ್ತದೊಳುಣ್ಣಿಸಿದಬಳಿಕಾ ॥ ೨೯ ॥
ದೇವಿಮಾಡಿದಸೇವೆಗೊಸೆದಾ । ದೇವಿಯಂನಲವೆರ್ಚಿಪೊಗಳು ।
ತ್ತಾವಗುಂಶರಣಾಪ್ತಸಹಜಾನಂದಗುರುರಾಯ ॥
ದೇವಿನಿನ್ನಡಿದುಂಬಿಸುವ್ಗರು । ದೇವನಾರಥಕಾರ್ಯನಡೆಯಲಿ ।
ದೇವಿನೀನನಗಂಬೆಯೆಂದೇವಚನವನುಕೊಟ್ಟಾ ॥ ೩೦ ॥
ಸಿರಿಕಿರಿಯರೆನಿಸುವರೆಕೇಳಿರಿ । ಗುರುಫಕೀರೇಶ್ವರನಪಾದ ।
ಕ್ಕೆರಗುತಾಶೀರ್ವಾದಪಡೆದುರೆನಡೆದನಾಶೆಟ್ಟಿ ॥
ಗುರುದಿಗಂಬರನನ್ನದಾತನು । ಪರಮಗುರುಬಸವೇಶಕರ್ತನು ।
ವರಶಿರಃಪುರಕಾಗಿಬಂದನುತನ್ನಜನಸಹಿತ ॥ ೩೧ ॥

ಬಳಿಕಕೇಳರಿಕರ್ತಹುತ್ತಿನ । ಬಳಿಯೊಳಾಡುತೆಮತ್ತೆಗುಡಿಸಲ ।
ದೊಳಗೆತೋರುತೆತನ್ನಭಕ್ತರನೆಲ್ಲಕಾಯುತಲಿ ॥
ಖಳರಖುಲ್ಲರಬೋಡಿಗಳಸಂ । ಕುಳವನೆಂದಿಗೆಮುರಿವೆನೆನ್ನು ।
ತ್ತೊಳಗೆನೋಡುವನಾಗಿಕಳೆವನಾದಕಾಲವನು ॥ ೩೨ ॥
ಕರ್ಮಗುರುವಿನಗುರುತುಹಿಡಿಯಿರಿ । ಧರ್ಮಗುರುವಿನಗುರುತುಹಿಡಿಯಿರಿ ।
ಮರ್ಮಗುರುವಿನಗುರುತುಹಿಡಿಯಿರಿಭಕ್ತರೆಂಬವರು ॥
ಕರ್ಮಗುರುಕಷ್ಟವನುಕೊಡುವನು । ಧರ್ಮಗುರುದಾರಿಯನುತೋರ್ಪನು ।
ಮರ್ಮಗುರುವಸ್ತುವನುತೋರುವನೀಜಗತ್ತಿನಲಿ ॥ ೩೩ ॥
ಪರಮಗುರುಪದವಿಯನುಕೊಡುವನು । ಧರೆಯೊಳಿವರೇಮುಖ್ಯಗುರುಗಳು ।
ಗುರುತುಹಿಡಿದೇಸೇವೆಮಾಡಿರಿಭಕ್ತಿಭಾವದಲಿ ॥
ಹರಿವಹಳ್ಳದೊಳಿಲ್ಲಕುರುಡರು । ಹರಿದುಹೋದಂತಾಗಬಾರದು ।
ಗುರುಸಮರ್ಥನಹಿಡಿದುದಾಂಟಲಿಬೇಕುಪರಿಭವವ ॥ ೩೪ ॥
ಧರೆಗೆ ಶ್ರೀಗುರುಸುಲಭನಲ್ಲವು । ಕರುಣಿಸದ್ಗುರುದೊರಕುವದುಬಿಗಿ ।
ದೊರೆದೊಡಂ ನೆರೆನಂಬಿನಡಕೊಳ್ಳುವದುಬಲುಬಿಗಿಯು ॥
ಶರಣರಾಟವೆಗುರುವಿನಾಟವು । ಗುರುವಿನಾಟವನರಿವರಾರೀ ।
ದುರಿತಕರ್ಮಗಳೇನು ನಂಬುವರಾಪರಾತ್ಪರನ ॥ ೩೫ ॥
ಆರುಪಾಶಕೆಸಿಲ್ಕಿಕೆಡುವರು । ಮೂರುಬಲಿಯಲಿಬಿದ್ದುತೊಳಲುವ ।
ರಾರುನಡಿವರೊನಂಬಿಗುರುವನುಪಾರುಗಾಣುವರೊ ॥
ಸಾರಶಾಸ್ತ್ರಪುರಾಣವೇದಗ । ಳಾರಯಿದು ನೋಡಲ್ಕೆಮುಕ್ತಿಗೆ ।
ಕಾರಣವುಭಯಭಕ್ತಿಯಲ್ಲದಲಿಲ್ಲಪೆರತೇನು ॥ ೩೬ ॥
ತಿಳಿದುಲೌಕಿಕಹಾವಭಾವವ । ನೊಳಗೆಸರ್ವವನಳಿದುಲೋಕದ ।
ಬಳಿಕೆಯಂತಿರೆಬಿಡದೆಸಂಸಾರನುಮಾಡುತಲಿ ॥
ಅಳುಕದಲೆತಾಂ ಕುಂದುಕೊರತೆಗೆ । ಪಳಿಗೆಸಿಮ್ಮೆಟ್ಟದಲೆಸದ್ಗುರು ।
ಲಲಿತಪಾದವಹಿಡಿದುಬಿಡದವಧನ್ಯನವನಾರೋ ॥ ೩೭ ॥
ಪರಿಜನವ್ರಜಕೂಡಿಕೊಂಡೀ । ಧರಣಿಯಲಿಸಂಚರಿಸಿಭಕ್ತಿಯ ।
ಪರಿಯಕಾಣದೆತನ್ನಜನಕನ್ನವನುಕೊಟ್ಟವಗೆ ॥

ಧರೆಗೆಕುರುಹಿಂಗೆಕೋಳಿವಾಡದೊ । ಳಿರುವದೇವಿಯತಂದೆಯೆನಿಸಿದ ।
ಪರಮಕರ್ತಂಗೆತ್ತಿಬೆಳಗಿರಿಮಂಗಳಾರತಿಯಾ ॥ ೩೮ ॥
ಭಕ್ತಿನೋಡುವೆನೆಂದುಜಗದೊಳು । ಭಕ್ತರೊಂದಿಗೆಹೋಗಿಬಳಲಿದೆ ।
ಶಕ್ತಿಯಿಂಬಿಡದುಣಿಸಿಕಾದೆಪರಾಕುಮುದಿಪಾಭ್ಯಾ ॥
ಶಕ್ತಿಯಲಿಮಹಿಮೆಯನುತೋರಿಸಿ । ಭಕ್ತಿಹೆಚ್ಚಿಸಿಜಗಕೆಬೆಳಗಿದೆ ।
ಶಕ್ತಿಯಾದವನೀನೆನೀನುಪರಾಕು ಪ್ರಭುರಾಯ ॥ ೩೯ ॥
ಗುರುಮಹತ್ವದಸಾರವಿಂತಿದು । ಗುರುಮಹತ್ವಮನಂತವಿರ್ಪುದು ।
ಗುರುಮಹತ್ವವನರಿದುಪೇಳುವರಾರುಲೋಕದಲಿ ॥
ಗುರುಫಕೀರೇಶ್ವರನುಗಂಗಾ । ಧರನಮುಖದಿಂಪೇಳಿಸಿದನೀ ।
ತೆರದಿಮುಗಿದುದುಸಂಧಿಹನ್ನೊಂದನೆಯದೆಂದೆನಿಸಿ ॥ ೪೦ ॥

ಇತಿ ಶ್ರೀ ಶಿರಃಪುರ ಶೂನ್ಯಸಿಂಹಾಸನಸ್ಥಾಪನಾಚಾರ್ಯ ಶ್ರೀ ಭಗವಾನ್। ವಿಭು ವಾತ್ಮೀಯಗಂಗನಿಂ ಪೇಳಿಸಿದಪೌರಾಣದೊಳ್ ಹನ್ನೊಂದನೆಯಸಂಧಿಸಮಾಪ್ತ ಮಿಂತು ೫೯೨ ಪದ್ಯಂಗಳಿಗೆ ಮಂಗಲಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ

## ೧೨ನೇ ಸಂಧಿ.

### ಕರ್ತರು ಶಿರಹಟ್ಟಿಯಲ್ಲಿ ಲಿಂಗಪಾವಾಡು ಮಾಡಿದ್ದು.

ಸಂಧಿ ಸೂಚನೆ
ಹರಮತಕೆಹೊರಗೆಂದುಡಂಗುರ । ಭರದಿಹೊಯ್ಯಲುಸಿಂದಕರಹ ।
ಲ್ಯಾರಿದುಕರ್ತನುಲಿಂಗಪಾವಾಡಿನಲಿಶೋಭಿಸಿದ ॥ ಪಲ್ಲ ॥
ಹಲವುಮತಗಳಕುಲಛಲರ್ಕಳಿ । ಕುಲದಮಾತಲ್ಲಿದುವೆಕೇಳಿರಿ ।
ಕಲಹದಾಮಾತಲ್ಲತಿಳಿಯಿರಿಶಂಭುಲೀಲೆಯಿದು ॥
ತಿಳಿಯಲಚ್ಚರಿಹೇಳಲಚ್ಚರಿ । ಯಿಳೆಯೊಳಾಗುರುಮಹಿಮೆಯನುಹೊರ ।
ಗೊಳಗೆತಿಳಿದವರಾರೊಶರಣರಹೊರತುಲೋಕದಲಿ ॥ ೧ ॥
ಕುಲಕೆಸದ್ಗತಿಯಾಯಿತೆಂಬುದು । ಕುಲಛಲಕೆಶಿವನೊಲೆದನೆಂಬುವ ।
ದಿಳೆಯಪಾಂಡಿತ್ಯಕ್ಕೆಮೋಕ್ಷವದಾಯಿತೆಂಬುವದು ॥

ತಿಳಿದುಹೇಳಿರಿಸಕಲಶಾಸ್ತ್ರಂ । ಗಳಲಿಪೂರ್ವಜರೊರೆದವಾಕ್ಯಂ ।
ಗಳೊಳಗಿರ್ದೊಡೆಹೇಳಿರೊಂದೈತಿಹ್ಯದಂದವನು ॥ ೨ ॥
ಯಾವಕುಲಧರ್ಮದೊಳಗಿಲ್ಲವ । ದಾವಶಾಸ್ತ್ರಪುರಾಣದೊಳಗಿ ।
ಲ್ಲಾವವೇದಾಂತದೊಳಗಿಲ್ಲವುಭಕ್ತಿಹೊರತಾಗಿ ॥
ಯಾವನಿಗುದೊರೆತಿಲ್ಲಮುಕ್ತಿಯು । ಭಾವಿಸಲ್ಕಾಗಿಲ್ಲಸದ್ಗತಿ ।
ಯಾವನಿಗುನೀವ್‌ಕೇಳಿರೈನಿಜಸಾಧುಸಜ್ಜನರು ॥ ೩ ॥
ವಿಹಿತಸದ್ಗತಿಮೋಕ್ಷಗಳಿಗೀ । ಯಿಹದೊಳತಿಶಯವಚನವಾಕ್ಯಗ ।
ಳಿಹವುಗಡನೋಡುವರುನುಡಿವರುವಾದಮಾಡುವರು ॥
ಅಹುದಿದಲ್ಲವದೆಂಬನಿರ್ಣಯ । ವಹಿಸಲೊಲ್ಲರುಗಾದವಗುಬಿ ।
ದ್ದಿಹುದುಸಕಲರಿಗಕಟಕೇಳಿರಿಭಕ್ತರೆಂಬವರು ॥ ೪ ॥
ನಾನುಶಾಸ್ತ್ರಿಯುನಾನುರಸಿಕನು । ನಾನುಕೋವಿದನಾನುಧೀರನು ।
ನಾನೆಸ್ಯೆವೇದಾಂತಿನಾಸಿದ್ಧಾಂತಿಪರವಸ್ತು ॥
ನಾನೆನನಗಾರ್ಸರಿಯದೆಂದೀ । ಮಾನವರುಕೆಟ್ಟಪರುಗರ್ವದೊ ।
ಳೇನುಹೇಳ್ವಿದ್ದಡದೇನುಫಲವೀಮರವಿಮನುಜರಿಗೆ ॥ ೫ ॥
ಸಕಲಭಕ್ತರೆನೀವುಕೇಳಿರಿ । ಪ್ರಕಟನಾಗದಗುರುಸಮರ್ಥನು ।
ಭಕುತರೊಂದಿಗೆಕಾಲಗಳೆವುತೆದಿನಗಳೆಣಿಸುತಲಿ ॥
ಅಖಿಳರಿಗೆನಿಜಲೀಲೆತೋರಿಸಿ । ನಿಖಿಳದೇಶಂಗಳಲಿಮಹಿಮೆಯ ।
ಪ್ರಕಟಸಲ್‌ಬಗೆದಂದುಬೆಳಗುವನಾದದಿನದಿನಕೆ ॥ ೬ ॥
ತನ್ನೊಳಗೆತಾನಡಗಿಕರ್ತನು । ಕುನ್ನಿಮನುಜರಿಗೇನುತಿಳಿಸದೆ ।
ತನ್ನನಂಬಿದಭಕ್ತರೊಳಗಾಡುತ್ತೆಗುಪ್ತದಲಿ ॥
ಉನ್ನತೋನ್ನತಮಹಿಮನೆನಿಸುತೆ । ತನ್ನದಿನಮಾನವನುನೋಡುತೆ ।
ತನ್ನದಿನಬರಲಾಟಹೂಡುತೆಬೈಲಿಗೇಬಂದ ॥ ೭ ॥
ವರಶಿರಃಪುರದಾರ್ಯರೇನೀವ್ । ಕಿರಿಯರೇನೀವ್‌ಮೇಣುಲೋಕದೊ ।
ಳಿರುವಭಕ್ತರೆಬಿಡದೆಕೇಳಿರಿಗುರುವಿನಾಟವನು ॥
ಒರೆವೆನಾನಿಮಗಿನ್ನುಜಗದೀ । ಶ್ವರನುಕರ್ತನುಹೂಡಿದಂದವ ।
ನರಿದುಭಕ್ತ್ಯಾಚಾರಹಿಡಿದಡೆಜನುಮಸಾರ್ಥಕವು ॥೮ ॥

ಮೃತ್ಯುಹರಸದ್ಗುರುವುಕರ್ತನು ।ಹುತ್ತಿನೆಡೆವಿಡಿಪಲ್ಲಿಭಕ್ತರ ।
ವೊತ್ತದಲಿನಿಜಭಕ್ತಿಗೊಲಿದೇತೋರುತಾಡುತಿರೆ ॥
ಅತ್ತಲಕ್ಷ್ಮೆಯಪುರದರಾಜನು । ಸತ್ಯಭಕ್ತನುಖಾನಗೌಡನು ।
ಚಿತ್ತಚಂಚಲನಾಗಿಕರ್ತನಬಳಿಗೆನಡೆತಂದ ॥ ೯ ॥
ಗುರುವೆಪಾದವನಗಲಿಲಕ್ಷ್ಮೇ । ಪುರದಿವಾಸಿಸಲೆನಗೆಸೌಖ್ಯದ ।
ಪರಿಯುತೋರದುಮಲಿನವಪ್ಪುದುಮನವುಪಗಲಿರುಳು ॥
ಪರಮಗುರುವೇತಮ್ಮಪಾದದ । ಸರಿಸದಲಿವಾಸಿಸುವೆನೆಂದಾ ।
ದೊರೆಯುಸಾಷ್ಟಾಂಗಾಭಿವಂಡನೆಗೈದಕರ್ತನಿಗೆ ॥ ೧೦ ॥
ಸಿರಿಹುಪುರದೊಳಗಿರಲುಸರ್ವರ । ಸಿರಿಯುಸಂಪದಹೆಚ್ಚುವದುನಿಜ ।
ವಿರದುಮನವದುಚಿತ್ತಚಂಚಲವಾಗುವದುಸಹಜ ॥
ಹೊರಟುಬಾರೆನೆಕರ್ತನೊಸೆದಾ । ಪರಮಭಕ್ತನುಸಿರಿಯಪುರವನು ।
ತೊರೆದುಶಿರಹಟ್ಟಿಯಲಿವಾಸವಮಾಡುವವನಾದ ॥ ೧೧ ॥
ಎಲ್ಲಮೂತಿಗುನಿಂತುಭೂಪತಿ । ಯಲ್ಲಮಪ್ರಭುಪಾದಪದ್ಮದೊ ।
ಳೆಲ್ಲವಿಧದಿಂಸೇವೆಯನುನಡಿಸುತ್ತಲಿರುತಿರಲು ॥
ಖುಲ್ಲಮನುಜರುಕುಲಛಲಂಗಳ । ನೆಲ್ಲತೋರಿಸಿಕುಂದುಕೊರತೆಗ ।
ಳೆಲ್ಲಹೊರಿಸುತನಿಂದೆಗೈಯುವರಾದರಡಿಗಡಿಗೆ ॥ ೧೨ ॥
ಶಿವನಮತದಲಿಪುಟ್ಟಿದವತಾ । ನಿವನುಹುಟ್ಟಿಫಕೀರನೆನಿಪನು ।
ಶಿವಮತರ್ಕಳುಸೇವೆಮೂಳ್ಪರುಭವಿಗೆಗುರುವೆಣಿಸಿ ॥
ಶಿವಮತವೃಕಳೆಗುಂದಿತ್ಯೆಕೇ । ಳುವರುಯಾರಿಲ್ಲಕಟಜಗದೊಳು ।
ಶಿವಶಿವಾಯೆಂದೆನುತಸುಳಿದಾಡಿದರುಬಣಜಿಗರು ॥ ೧೩ ॥
ಪುರದಭೂಪತಿಶೈವಮತದವ । ನಿರುವನಾತಫಕೀರನೆಡೆಯೊಳು ।
ನಿರುತಸೇವಾಸಕ್ತನಾಗಿಯೆನಿಂತುಕೊಂಡಿಹನು ॥
ಹರಮತವುಹಸಗೆಟ್ಟುಹೋಯಿತು । ತಿರುಕರೇಂಮಾಡುವರುಹರಹರ ।
ಧರೆಯೊಳರಿದರಿದೆನುತೆಜರಿದಾಡಿದರುಜಂಗಮರು ॥ ೧೪ ॥
ಕುಲಛಲಂಗಳನೊಡ್ಡಿಕೋಪಿಸಿ । ಹಲವುಹಂಚಿಕೆಹಾಕಿಹಮ್ಮಿನ ।
ಬಲುಮೆತೋರಿಸಿಹೊರಟುಹೋದರುದುರ್ಗದಾಮಠಕೆ ॥

ತಲೆಯಬಾಗಿಸಿಗುರುವಿನೆಡೆಯಲಿ । ತಿಳಿಸಿಹೇಳಿದರದಕೆತದ್ಗುರು ।
ಮುಳಿದುಬಂದನುಪುಂಡಜಂಗಮರೊಡನೆ ಬೇಗದಲಿ ॥ ೧೫ ॥
ಕೇಳಿರೈಶಿರಹಟ್ಟಿಯಲಿಜನ । ಜಾಲಕೂಡಿತುಕುಲದಜಗಳವು ।
ಕೀಳುಮೇಲೆಂದೆನಿಸಿಗೊಂದಲವಾಯ್ತುಗ್ರಾಮದಲಿ ॥
ಬಾಲಲೀಲಾನಂದಕರ್ತಗೆ । ಹೇಳುತಿರ್ದರುಗುಪ್ತಭಕ್ತರು ।
ಕೇಳಿಕರ್ತನುನಗುತಲಿದ್ದನುದಿವಸಬಂತೆಂದು ॥ ೧೬ ॥
ಎಲೆಲೆಕೇಳಿರಿಕೇಳಿರೈಶಿವ । ಮತದಶ್ರೀಗುರುಮುರಗಿಸ್ವಾಮಿಯು ।
ಬಲುಮೆಯಪ್ಪಣೆಯಾಯ್ತುಹೊಯ್ಯುವೆನೀಗಡಂಗುರವ ॥
ಸುಳಿಯಲಾಗದುಗಡಫಕೀರನ । ಬಳಿಗೆಯಾರುಂಲಿಂಗವಂತರು ।
ಬಳಿಕೆಭೋಜನಮಾಡಲಾಗದುಜೋಕೆಬಲುಜೋಕೆ ॥ ೧೭ ॥
ಕುಲದಹೊರಗವಗಡಫಕೀರನು । ಕುಲದಹೊರಗಾಖಾನಗೌಡನು ।
ಕುಲದಹೊರಗೆಫಕೀರನೆಡೆಯಲಿಸೇವೆಮಾಡುವರು ॥
ಕುಲದಮಾತಿದುಜೋಕೆಯೆನುತಲಿ । ಸುಳಿವುತೆಲ್ಲೆಡೆಯಲ್ಲಿಸಾರು ।
ತ್ತೆಳದು ಡಂಗುರಹೊಡೆದನೋರ್ವನುಬಹಳಸಂಭ್ರಮದಿ ॥ ೧೮ ॥
ಸಿರಿಯರೆಲ್ಲರುಕೇಳಿರಾಪರಿ । ಪುರದೊಳಿತ್ತಲುಮಾಗೆಡಂಗುರ ।
ಪುರದರಸಗಾಖಾನಗೌಡಗೆಮುಟ್ಟಿತಾಸುದ್ದಿ ॥
ಅರಿದುತಾನದನೆಲ್ಲಚಿಂತಿಸಿ । ಗುರುವಿನಾದಿವಸಗಳುಬಂದವೆ ।
ಭರದಿಬೈಲಿಗೆಬರುವನೇಗುರುವೆನುತೆಹೊರಹೊರಟಾ ॥ ೧೯ ॥
ಖಾನಗೌಡನುಕೋಪದಲಿದು । ಮ್ಮಾನದಲಿಪಥವಿಡಿದುನಿಜಗುರು ।
ಧ್ಯಾನದಲಿಬಂದೆರಗಿಕರ್ತಗೆಪೇಳ್ದನಿಂತೆಂದು ॥
ಏನುಹೇಳಲಿಲೋಕದಾಟವ । ನೇನುಹೇಳಲಿಜಂಗಮರ ಮಾ ।
ತೇನುಹೇಳಲಿಗುರುವೆಚಿತ್ತೈಸೆಂದುಕೈಮುಗಿದಾ ॥ ೨೦ ॥
ಅಪ್ಪತಮ್ಮಡಿಯಲ್ಲಿಕುಲದಾ । ತಪ್ಪುಹೊಂದಿಸಿತಮ್ಮಸೇವೆಯೊ ।
ಳಿಪ್ಪಭಕ್ತರಮೇಲೆಡಂಗುರವಾಯ್ತುಪುರದೊಳಗೆ ॥
ಇಪ್ಪಮಾತಿದುಕುಂದುಕೊರತೆಯು । ಬಪ್ಪುದಕ್ಕಟಮುಂದೆನಿಜಪದ ।
ದಪ್ಪಣೆಯದೇನಹುದುಮಾಡುವೆನೆಂದನಾಭೂಪಾ ॥ ೨೧ ॥

ಎಲೆನರೇಂದ್ರನೆಚಿಂತೆಬಿಡುನಿ । ನೊಳಗೆಸಂತಸಗೊಳ್ಳುಲೌಕಿಕ ।
ಮಲಿನಭಾವರವಾತುಹಿಡಿಯಲಿಬೇಡನೀನಿನ್ನು ॥
ಇಳೆಯೊಳ್ಪೊದಿಗುಗುರುಸಮರ್ಥನು । ಬೆಳಗಿಮುರಿವನುನಿಂದಕರ ಹ ।
ಲ್ಗಳನುತಡೆನೋಡೆಂದುಕರ್ತನುಪೇಳ್ದನಾಥೊರೆಗೆ ॥ ೨೨ ॥
ಗುರುಸಮರ್ಥನು ಪಾರುಮಾಡುವ । ನಿರಲುತಾಪ್ರತ್ಯಕ್ಷನಾಗಿಯೆ ।
ನರರಭಯವೇನೆಂದುಭೂಪತಿಬಾಗಿಕುಳಿತಿರಲು ॥
ನೆರೆದಭಕ್ತರುನೀನೆಗತಿಯೆನು । ತಿರಲುಕರ್ತನುನೋಡಿಕಿರುನಗೆ ।
ವೆರಸಿವೈರಾಗ್ಯವನುತಾಳುತ್ತೆಂದನೀತೆರದಿ ॥ ೨೩ ॥
ಹೆದರಬೇಡಿರಿನನ್ನಮಕ್ಕಳೆ । ಹೃದಯದಲಿಹಂಬಲಿಸಬೇಡರಿ ।
ಕದನಬೇಡಿರಿಲೋಕದಂಡಡಿತಡಿಯಿರೈನೀವು ॥
ಸದಮಲಾತ್ಮಾರಾಮಮಹಿಮಾ । ಸ್ಪದನು ಶ್ರೀಗುರುವರಫಕೀರನು ।
ಹದದಿನಿಮ್ಮಯಮಾನರಕ್ಷಿಪನೆಂದುನುಡಿಗೆದ್ದ ॥ ೨೪ ॥
ನಿಂತಿರಲುಪ್ರತ್ಯಕ್ಷಸಾಂಬನು ।ಚಿಂತೆನಿಮಗೇಕಿನ್ನುಜಗದೀ ।
ಭ್ರಾಂತಿಬಿಟ್ಟೇಕುಳಿತುಕೊಳ್ಳಿರಿಯೆಂದುಹೇಳುತಲಿ ॥
ಅಂತುನಂಬಿಹಭಕ್ತರಿಗೆಮಿಗೆ । ಸಂತಸಂಗೊಳಿಸುತ್ತೆಬಿಡದಾ ।
ಕಂತುಹರಸದ್ಗುರುವುನುಡಿದನುತನ್ನಭಕ್ತರಲಿ ॥ ೨೫ ॥
ಜಂಗಮರೊಲಿಂಗಾಂಗಿಗಳೆನಾತಾವ್ । ಲಿಂಗವಂತರೊಸತ್ಯವ್ರೋಮೇಣ್ ।
ಸಂಗಮೇಶ್ವರಭಕ್ತರೋಲೋಕದಲಿನೋಡುವೆನು ॥
ಲಿಂಗತಮ್ಮವ್ರೊಸಮ್ಮವ್ರೋಯಿದ । ರಂಗವನುಸಲೆತಿಳಿವೆನೆಂನಾ ।
ಸಂಗಮೇಶ್ವರಕರ್ತಕಿಡಿಕಿಡಿಯಾದನಾಕ್ಷಣಕೆ ॥ ೨೬ ॥
ಜಗದಜಂಜಡರಾಟಮುರಿಯ । ಲ್ಜಗದಕರ್ತನುಜಂಗಮರಲಿಂ ।
ಗಗಳಿಗಪ್ಪಣೆಕೊಟ್ಟುತಾನೋಡಿಸಿದಮಾಯೆಯಲಿ ॥
ಜಗದೊಳಿರುವಸಮಸ್ತಭಕ್ತರೆ । ಜಗದೊಡೆಯನತಿಲೀಲೆಯದುಸೋ ।
ಜಿಗವಲಾಕುಲಭಲರಿಗೆಂದಿಗುತಿಳಿಯದಾಮಹಿಮೆ ॥ ೨೭ ॥
ನರರಚಲ್ಲಾಟವನುಕುಗ್ಗಿಸಿ । ಗುರುಮಹಾತ್ಮನುತೋರಿಮೆರೆವನು ।
ಧರೆಯೊಳೀತೆರವೆಂದಿಗಾದರುನಡೆವುತಿಹುದಿನ್ನು ॥

ಗುರುಮಹೋತ್ಸವದಿವಸಬಂದಿವೆ । ಹರನಲೀಲೆಯುತೋರಬಂದಿದೆ ।
ಹರುಷಗೊಳ್ಳಿರಿಯೆಂದುಕರ್ತನುಪೇಳುತಿರಲಾಗ ॥ ೨೮ ॥
ಅನಿತರಲಿತಜ್ಜಂಗಮರುನಿಜ । ಮನದೊಳಗೆತಾವ್ಬಂದಕಾರ್ಯವು ।
ಘನತೆಗೇರಿತುಕೀರ್ತಿಪಡೆದೆವುಲೋಕದೊಳಗೆನುತಾ ॥
ಅನಿಬರುರೆಹೊತ್ತಾಗೆಸ್ನಾನ । ಕ್ಕನುಕರಿಸಿನಿಜಲಿಂಗಕಾಣದೆ ।
ಮನಸಿನಲಿಗಡಬಡಿಸಿಚಿಂತಿಯೊಳಾಳ್ದರೇನೆಂಬೆ ॥ ೨೯ ॥
ಲಿಂಗವಿಲ್ಲದೆಭಂಗಬಡುತಲಿ । ಹಂಗುದೊರೆದಾಜಂಗಮರುತಾವ್ ।
ಸಂಗಳಿಸಿನಡೆತಂದರಾಮುರಗೇಂದ್ರಸನ್ನಿಧಿಗೆ ॥
ಲಿಂಗವೆಲ್ಲರವಿಲ್ಲನವುಗಾ । ಸಂಗನಾಬಸವೇಶಮುನಿದನು ।
ಲಿಂಗಮೂರ್ತಿಯೆಮುಂದೆಗತಿಯೇನೆಂದುಕೇಳಿದರು ॥ ೩೦ ॥
ತಿಳಿದುಶ್ರೀಮುರಗೇಂದ್ರಗುರುತಾ । ನಳಿದುಫಲವನುಮನದಸಂಶಯ ।
ಗಳನುಬಿಟ್ಟಂತೆಂದನಾಬಡಜಂಗಮರಕರೆದು ॥
ಫಲವನಡಿಯಿಸಿನೀವುಪೇಳಿದ । ಕೆಳಿಸಿಬಂದೆನುನಾನಿದಿಲ್ಲಿಗೆ ।
ತಿಳಿಯದಾದುದುಮೂಯೆಯಾಟವದೆಂದುಬಿಸುಸುಯ್ದು ॥ ೩೧ ॥
ಶಿವನಶರಣರಲೀಲೆತಿಳಿವುದೆ । ಶಿವನಶರಣರಮಹಿಮೆಹೊಳೆವುದೆ ।
ಶಿವನಶರಣರುಶಿವನೊಳಾಡುತೆವಿೂರಿತೊಳಗುವರು ॥
ಶಿವನಿಗಿಂತಲುಶಿವನಶರಣರು । ಭುವನದೊಳಗತ್ಯಧಿಕರೆಂತೆಂ ।
ಬುವಶ್ರುತಿಯುಸಟೆಯಲ್ಲತಿಳಿಯಿರಿಯೆಂದಮುರಗೇಂದ್ರ ॥ ೩೨ ॥
ನೆಟ್ಟಗಾಯಿತುಬಂದಕೆಲಸವು । ಬಿಟ್ಟುಬಿಡಿರೈನಿಮ್ಮಫಲಗಳ ।
ನಿಷ್ಟಲಿಂಗಗಳೆಲ್ಲಗಮಿಸಿದಬಳಿಕಸಂಶಯವೇ ॥
ಸೃಷ್ಟಿಕರ್ತನಿಗೀಫಕೀರನಿ । ಗೆಷ್ಟುಮಾತ್ರವುಭೇದವಿಲ್ಲವು ।
ನಿಷ್ಠೆಯಲಿನೀವ್ಬೇಡಿಕೊಳ್ಳಿರಿ ನಿಜಫಕೀರನಿಗೆ ॥ ೩೩ ॥
ಎಂದುಶ್ರೀಮುರಗೇಂದ್ರಸ್ವಾಮಿಯು । ನಿಂದುಕಳುಹಿಸಿಕೊಡಲುಜಂಗಮ ।
ವೃಂದವದುನಡೆತಂದುಗಾಮುದಿವಾಚ್ಛನಡಿಯೆಡೆಗೆ ॥
ಕುಂದುಕೊರತೆಗಳಾಡಲಂಜಿಯೆ । ಮುಂದಿಸಂದಣಿಸಿತ್ತುನೋಟಕ ।
ರಂದುಬಲುಬೆರಗಾದರೈನಾಹೇಳಲೇನದನು ॥ ೩೪ ॥

ದೇವಶಂಕರನೀನೆಹೌದೈ । ದೇವಪಶುಪತಿನೀನೆಹೌದೈ ।
ದೇವಸದ್ಗುರುನೀನೆಹೌದೈಸಲಹುನಮಗೆನುತಾ ॥
ದೇವಲೋಕದಸಿದ್ಧಲಿಂಗಗೆ । ದೇವದೇವಗೆ ಶ್ರೀ ಫಕೀರಗೆ ।
ಭಾವಶುದ್ಧಿ ಶ್ರೇಯದಲಿಬಾಗಿದರುಜಂಗಮರು ॥ ೩೫ ॥
ಪರಮಗುರುವೇತಮ್ಮವಾದದೊ । ಳರಿಯದಲೆನಾವ್‌ತಪ್ಪುಗೈದೆವು ।
ಮರೆತುಬಿಟ್ಟುದ್ಧರಿಸುವದುನಮಗಿತ್ತುಲಿಂಗಗಳಾ ॥
ಹರನುಮುನಿದರುಗುರುವುಕಾಯುವ । ಬಿರುದು ಶ್ರೀಗುರುಶಂಭುನಿನ್ನದು ।
ಕರುಣಿಪುದುನಮಗೆಂದುವಂದಿಸುತಿಹರುಜಂಗಮರು ॥ ೩೬ ॥
ಅಳಿದಹಮ್ಮಿನಮುರಿದಮನಸಿನ । ಕಳೆದಛಲದಾವೊರೆಯಬಾಯ್ಗಳ ।
ತಳೆದಸುಯ್ಗಳಮುಗಿವಕೈಗಳ'ಬೀಳ್ವಕಾಯಗಳ ॥
ತೊಳಲಿಬಳಲುವಜಂಗಮರಿಗಾ । ಕಳೆಗಳಾಣ್ಮನುನಿಜದಯಾಂಬುಧಿ ।
ಲಲಿತಸದ್ಗುರುಮೂರ್ತಿಕರ್ತನುಕರುಣಿಸಿದನರರೆ ॥ ೩೭ ॥
ಎಲವೊಕೇಳರಿಲೌಕಿಕರೆನೀವ್ । ಮುಳಿದಕರ್ತನುಶಾಂತನಾಗುತೆ ।
ಬಳಲುವಾಜಂಗಮರಿಗೆಂದನುಮಂದಹಾಸದಲಿ ॥
ಇಳೆಯೊಳಾರವನಲ್ಲನಾನೀ । ಕುಲಮತಕೆಬಂದಿಲ್ಲವೀಜಗ ।
ದೊಳಗೆಭಕ್ತಿಗೆಮಾತ್ರಬಂದವನೆಂದು ತಾಂ ನುಡಿದಾ ॥ ೩೮ ॥
ಸಂಗನಾಜ್ಞೆಗೆನಿಂತುನಿಮ್ಮಯ । ಲಿಂಗಬಾವಿಯೊಳಡಗಿಕೊಂಡಿವೆ ।
ಲಿಂಗವನುನೀವ್‌ಕೊಳ್ಳಿರೆಂದಾಕರ್ತತೋರಿಸಿದ ॥
ಜಂಗಮರುಬಾವಿಯಲಿಕೈಯಿಂ । ದಂಗವಿಸಿಹುಡುಕುತ್ತಲಿರಲಾ ।
ಲಿಂಗಗಳುಸಂಗಳಿಸಿಕಂಗೊಳಿಸಿದವುತತ್‌ಕ್ಷಣಕೆ ॥ ೩೯ ॥
ಕಂಡುಲಿಂಗಗಳಲ್ಲಿಸಂತಸ । ಗೊಂಡುತಜ್ಜಂಗಮರುಸಂಶಯ ।
ಗೊಂಡರೈತಾಯ್‌ತಮ್ಮದಾವದೊಯೆಂಬಭಾವದಲಿ ॥
ಕಂಡುಜಂಗಮರಾಟವನು ಬ್ರ । ಹ್ಮಾಂಡನಾಯಕಕರ್ತನಾಗಳೆ ।
ಕೊಂಡುತಜ್ಜಂಗಮಕೆಲಿಂಗಗಳಿತ್ತನವರವರ ॥ ೪೦ ॥
ಅಹುದಹುದುನಿಜವಸ್ತುತಾನಿವ । ನಹುದಹುದುಘನಮಹಿಮತಾನಿವ ।
ನಹುದಹುದುಶಿವಶಂಭುಲೀಲಾಮೂರ್ತಿತಾನಿವನು ॥

ಅಹುದಹುದುಸುರಜಾಲವಂದಿತ । ನಹುದಹುದುಗುರುಲಿಂಗಜಂಗಮು ।
ನಹುದಹುದುತಾನೆಂದುಶಿರಬಾಗಿದುದುಸಕಲಜನಾ ॥ ೪೧ ॥
ನಿಂದೆಹೊಂದದಲೋಡಿಹೋಯಿತು । ಕುಂದುಭಯುಬಟ್ಟಡಗಿಕೊಂಡಿತು ।
ಸಂಧಿಸದೆಬೆಂಗೊಟ್ಟು ನುಸುಳಿತುಬಾಧೆಕುಲಛಲರ ॥
ನಿಂದುತಲೆವಾಗಿತ್ತುಶಿವಮತ । ವಂದುಕಳೆದಳೆದತ್ತುಮುಖಸಿರಿ ।
ಹೊಂದಿದಾಭಕ್ತರಲಿಪೆರ್ಚಿತುಸಮ್ಮುದಾಂಬುಧಿಯು ॥ ೪೨ ॥
ಪೊಡವಿಯೊಳಗವತರಿಸಿಪ್ರಭುತಾ । ನಡಗಿರಲುನರರೂಪದಲಿಗಡ ।
ಜಡರುಕುಲಛಲಕಾಗಿಕಾಡಲುತನ್ನಭಕ್ತರಿಗೆ ॥
ಮೃಡನುಹಾಕ್ಮನುಗುರುಫಕೀರನೆ । ಗಡತಿಳಿಯಿರೆಂದೆನಿಸಿಬಿಡದಲೆ ।
ಜಡಿದುಪಾವಾಡಿನಲಿ ಶ್ರೀಗುರುಶಂಭುವೆನಿಸಿದನು ॥ ೪೩ ॥
ನರಸುರೋರಗಲೋಕರಕ್ಷಕ । ಶರಣವತ್ಸಲಶಂಭು ರ್ತನು ।
ನರಶರೀರವನಾಂತುತೋರುತ್ತಾಡುತಿರುತಿರಲು ॥
ಗುರುವುಲಿಂಗವುಜಂಗಮುವುತಾ । ಧರಣಿಯಲಿನಿಜವೆನಿಸಿಮಹಿಮಾ ।
ಪುರುಷನೆನಿಸುವದೇನುಸೋಜಿಗವೀಜಗತ್ರಿಸಲಿ ॥ ೪೪ ॥
ಹಿರಿದಿನೊಳಗವತರಿಸಿಸ್ವಾಮಿಯು । ಕಿರಿದಿನೊಳಗಾಡುತ್ತಲಿರುವನು ।
ಕಿರಿದಿನಲಿಸಲೆನಿಂತುಬಲುಮೇಲೆನಿಸುತಾಡುವನು ॥
ಹಿರಿದುಕಿರಿದುಗಳೆಂಬಭೇದಗ । ಳಿರಡರಲಿನರಜನಕೆಸಂಶಯು ।
ವೆರಸಿಗುರುತನುಕೊಡದೆಸಿಗದಾಡುತ್ತನಡೆಯುವನು ॥ ೪೫ ॥
ಯಾವಕಾಲಕ್ಕೆಲ್ಲಿಬರುವನೊ । ಯಾವಲೀಲೆಯನಾಂತುನಿಲ್ವನೊ ।
ಯಾವಸಮಯಕ್ಕೇನುಮೊಳ್ಪನೊತಿಳಿವರವರಾರು ॥
ಈವಸುಂಧರೆಯಲ್ಲಿಸ್ವಾಮಿಯ । ನಾವಗುರುತನುಹಿಡಿದುನಂಬಿಯೆ ।
ಸೇವೆಗೈವನೊಧನ್ಯನಾತನುಮೂರುಲೋಕದಲಿ ॥ ೪೬ ॥
ಕೇಳಿರೈಜಗದಾದಿಕರ್ತನ । ಲೀಲೆಯಿದುಭಕ್ತ್ಯರ್ಥದಲಿತನು ।
ತಾಳಿದಾಶ್ರೀಗುರುವಿನನುಪಮುಸತ್ಕಥಾಮೃತವು ॥
ಕೇಳದವರಿಗೆಪುಣ್ಯಜಗದೊಳು । ಹೇಳದವರಿಗೆಪುಣ್ಯಗಡಸಲೆ ।
ಕೇಳನಂಬದಸೊಕ್ಕಿನವರಿಗೆನರಕನಿಶ್ಚಯುವು ॥ ೪೭ ॥

ನೆನಿದಡೆಲ್ಲವುಪಾಪಪರಿಹರ । ನೆನಿದಡೆಲ್ಲವುಶಾಪಪರಿಹರ ।
ನೆನಿದಡೆಲ್ಲವುಶಾಪಪರಿಹರಗುರುವಿನುರುಕೃಪೆಗೆ ॥
ಚಿನುಮಯಾತ್ಮನದೇವದೇವನ । ಘನಮಹತ್ವವನರಿವರಾರ್ರೈ ।
ನೆನಹಿಗೊದಗುವಗುರುವರನ ನೀವ್ ನಂಬಿರ್ರೈಬಿಡದೆ ॥ ೪೮ ॥
ಆದಿಮೂರ್ತಿಯಪರಮಗುರುವಿನ । ಪಾದವೇಗತಿಯೆಂದುನಂಬಿಯೆ ।
ಸಾಧುಗಳಸತ್ಪುರುಷರೆಡೆಯಲಿಹೋಗಿನಲಿವವಗೆ ॥
ಮೇದಿನಿಯೊಳಡಿಗಡಿಗೆಬರುವವು । ಬಾಧೆಗಳುಬಂದೇನುಮಾಡುವ ।
ವಾದಯಾನಿಧಿಕರ್ತಕೈವಿಡಿದೆತ್ತಿಕೊಳ್ಳುವನು ॥ ೪೯ ॥
ಗುರುವಿನಂತರ್ಮಹಿಮೆತಿಳಿವುದು । ನರರಿಗಸದಳಬದ್ಧಲೌಕಿಕ ।
ರರಿಯದಾಗುರುಬಾಹ್ಯಲೀಲೆಗೆಪಳಿದುಕೆಟ್ಟಪರು ॥
ಧರೆಗೆಶರಣರಲೀಲೆಗುರುವಿನ । ಪರಮಮಹಿಮೆಗೆಸಾಕ್ಷಿಯೆಂಬುದ ।
ನರಿದುನುತಿಸುತೆನಂಬಿವಾತಗೆಗುರುವುಬಿಡದೊಲೆವ ॥ ೫೦ ॥
ಇದುನಿರಂಜನಪ್ರಭುವಿನಾಪಥ । ವಿದುಗುರೂನ್ನತಮಹಿಮನಾಪಥ ।
ವಿದುವೆಪರಶಿವಸತ್ಯಶರಣರದಿವ್ಯತರಪಥವು ॥
ಇದಕೆಹರಿಹರವಿಧಿಗಳೆಲ್ಲರು । ಮುದದಿಬಣ್ಣಿಸುತಿರುವರಾವಗು ।
ಮಿದಕೆನಂಬಿಗೆಹುಟ್ಟನಡೆವುದು ಪೂರ್ವದತಿಪುಣ್ಯ. ॥ ೫೧ ॥
ಗುರುಪದಾಂಬುಜಭಕ್ತಿಮಾರ್ಗಕೆ । ಸರಿಯದಾಗುವಪಥಗಳಿಲ್ಲವು ।
ಸರಸವಲ್ಲವುನಿತ್ಯಸೌಖ್ಯದಗತಿಗೆಸಾಧನವು॥
ಗುರುಮಹತ್ವದಕಥೆಗಳಿಗೆ ತಾ । ಸರಿಯದಾಗುವಕಥೆಗಳಿಲ್ಲವು ।
ನರರಿಗೇಕಿದುತಿಳಿಯಲೊಲ್ಲದೊಮಾಯೆಯಾಟಗಡ ॥ ೫೨ ॥
ದಿನದಿನಕೆಹೆಚ್ಚಾಗಿಬೆಳಗುತೆ । ಜನರೊಳಗೆಭಯಭಕ್ತಿಭಾವವ ।
ನನುನಯದೆಪುಟ್ಟಿಸುತೆಕೈವಿಡಿದೊಲೆವಗುರುವರಗೆ ॥
ಘನಮಹಿಮನೆಂದೆನಿಸುತಂದು । ಮನುಜರೆಲ್ಲರನಿರದೆಮೆಟ್ಟುತೆ ।
ನೆನಹಿಗಹಕರ್ತನಿಗೆಬೆಳಗಿರಿಮಂಗಳಾರತಿಯಾ ॥ ೫೩ ॥
ನರರಕುಲಛಲದಾಟತಗ್ಗಿಸಿ । ಚರಣಭಕ್ತರನೆತ್ತಿಕೊಂಡೈ ।
ಗುರುಸಮರ್ಥನುನೀನುಕರ್ತಪರಾಕುಮುದಿವಾಚ್ಛ ॥

ನರರಿಗೆಚ್ಚರಗೊಡುತೆನೆರೆದಿನ । ಬರಲುಬೈಲಿಗೆಬಿಡದೆಬಂದೈ ।
ವರಫಕೀರನುನೀನುಕರ್ತಪರಾಕುಪ್ರಭುರಾಯಾ ॥ ೫೪ ॥
ಗುರುಮಹತ್ವದಸಾರವಿಂತಿದು । ಗುರುಮಹತ್ವಮನಂತವಿರ್ಪುದು ।
ಗುರುಮಹತ್ವವನರಿದುಪೇಳುವರಾರುಲೋಕದಲಿ ॥
ಗುರುಫಕೀರೇಶ್ವರನುಗಂಗಾ । ಧರನಮುಖದಿಂಪೇಳಿಸಿದನೀ ।
ತೆರದಿಮುಗಿದುದುಸಂಧಿಹನ್ನೆರಡನೆಯದೆಂದೆನಿಸಿ ॥ ೫೫ ॥

**ಇತಿ ಶ್ರೀ ಶಿರಹಟ್ಟಿ ಶೂನ್ಯಸಿಂಹಾಸನಸ್ಥಾಪನಾಚಾರ್ಯ ಶ್ರೀ ಭಗವಾನ್। ವಿಭುವಾತ್ಮೀಯಗಂಗನಿಂ ಪೇಳಿಸಿದಪೌರಾಣದೊಳ್ ಹನ್ನೆರಡನೆಯ ಸಂಧಿ ಸಮಾಪ್ತಂ ಕ್ಕಂ ೬೪೭ ಪದ್ಯಂಗಳಿಗೆ ಮಂಗಲಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ**

## ೧೩ನೇ ಸಂಧಿ.

### ಸಿದ್ಧರಾಮೇಶ್ವರರು ಮರಿದೇವರಾದದ್ದು.

**ಸಂಧಿ ಸೂಚನೆ**

ಗುರುಫಕೀರನುಜಗದೊಳಾಡು । ತ್ತಿರುವತನ್ನಂಶಿಕಗೆರಾಮಗೆ ।
ಗುರುತುಹಿಡಿದೆಳಕೊಂಡುಮರಿಯನುಮಾಡಿಕೊಂಡೆಸೆದ ॥ ಪಲ್ಲ ॥
ಶಿವನಿಗುಣಿಸುವಶಿವನಕುಣಿಸುವ । ಶಿವನನುತಿಸುವಶಿವನನಗಿಸುವ ।
ಶಿವಗೆತೋರಿಯುಮಿರುತಾಡುವಶರಣರೆಂಬವರು ॥
ಶಿವನಕೂಡಿಯೆಭೂಮಿಗವತಾ । ರವನುಮಾಡಿಯೆಸಾಂಬನಮಹೋ ।
ತ್ಸವದಕಾರ್ಯಾನಂದದಿಂದಾಡುವರುಭಕ್ತರಲಿ ॥ ೧ ॥
ಒಡಲೊಳಗೆರವಿಕೋಟಿತೇಜವ । ನಡಗಿಸಿಯೆಬ್ರಹ್ಮಾಂಡನುಂಗುವ ।
ಮೃಡಮಹಾತ್ಮನಶರಣರತಿಲೀಲಾವಿನೋದದಲಿ ॥
ಬಿಡದೆನರರೂಪವನುತಾಳ್ದೀ । ಪೊಡವಿಯೊಳಗಾಡುತ್ತಲಿರುತಿರೆ ।
ಜಡರುಮಾಡುವದೇನುಬೈಲಿಗೆಬೈಲದೆನಿಪರಿಗೆ ॥ ೨ ॥
ಘನತರದನಿಗಮಾಗಮಾವಳಿ । ಗನುವನೀಯದೆತೋರದಿರ್ಪಾ ।
ಘನಮಹಾಪ್ರಭುದೇವನಂಶಿಕಶರಣರೆಂಬವರು ॥

ಮನುಜರೂಪಂಗೊಂಡುಮರೆಯಲಿ । ಮನುಜರೊಳಗಾಡುತ್ತನಿಂತಿರೆ ।
ಮನುಜರೇಂಮಾಡುವರುಮುಳಿದಾಗುರುಮಹಾತ್ಮರಿಗೆ ॥ ೩ ॥
ಎಂದಿಗಾದರುಬರುವತೆರದಲಿ । ಬಂದಪರುಶಿವಶರಣರಿಳೆಯೊಳು ।
ನಿಂದಕರುಮದರಂತೆಬಂದಪರವನಿಯಲಿಬಿಡದೆ ॥
ಎಂದಿನಂತಿರೆಶಿವನಶರಣರು । ನಿಂದಕರನುರೆಮೆಟ್ಟಮೆರೆವರು ।
ಹಂದಿಮನುಜರಿಗೇನುತಿಳಿವುದುಶರಣರಾಟವದು ॥ ೪ ॥
ಗುರುವುಪ್ರೌಢಪ್ರಚಂಡಪುಂಡನು । ಗುರುವುಮಿಂಡಾಖಾನನಾತನು ।
ಗುರುವುಗಂಡರಗಂಡಮಹಿಮೋದ್ದಂಡನೈಜಗಕೆ ॥
ಗುರುವುಬಂದಿಹಬರವುತಿಳಿವುದು । ಗುರುವುನಿಂತಿಹನಿಲವುತಿಳಿವುದು ।
ಗುರುವಿನೊಳಗುರುತನ್ನತಿಳಿವುಮಬಹಳದುಸ್ತರವು ॥ ೫ ॥
ಲೌಕಿಕರೆನೀವ್ಕೇಳಿರೈಗಡ । ಲೋಕದೀಮೊತಲ್ಲವದುಗಡ ।
ಲೋಕದೊಡೆಯನವಿಶ್ವರೂಪನಸಾರಲೀಲೆಯದು ॥
ಜೋಕಿಮನುಜರೆನಂಬಿನಡೆಯಿರಿ । ಜೋಕಿದುರುಳರೆಬಾಗಿರೈಜಗ ।
ದೇಕಕರ್ತನಮಹಿಮೆಪೇಳ್ವೆನುನಿಮಗೆಮುಂದಿನ್ನು ॥ ೬ ॥
ಬೀರಿಬ್ರಹ್ಮಾಂಡಾಳಿಗಳನೇ । ತೋರಿಮೂದೇವಿಯಲಿಮೌಜಿನ ।
ಕಾರಭಾರದೊಳಿರುವಕರ್ತನುಸ್ವಪ್ರಕಾಶದಲಿ ॥
ತೋರುತಾಡುತ್ತಿರಲುನಿಂದಕ । ರೇರಿಬರಲಾಕರ್ತನವರಿಗೆ ।
ಮೀರಿಲಿಂಗಮಹತ್ವನಾಗಿಸಿಜಜ್ಜಿದಾಬಳಿಕ ॥ ೭ ॥
ಅರರೆಕೇಳುವದೇನುಕರ್ತನ । ಚರಣಕಮಲಕ್ಕೆಲ್ಲಕುಲದವ ।
ರಿರದೆಬರಹತ್ತಿದರುಹರಿದುದುಸುದ್ದಿನಾಲ್ದೆಸೆಗೆ ॥
ಗುರುವೆಬುದ್ಧಿಯೆಪಾದಕರುಣವ । ನಿರಿಸಿಕಾಯಲಿಬೇಕುತಾವೆಂ ।
ದೆರಗಹತ್ತಿದರೆಲ್ಲಮತದವರಾಮಹಾತ್ಮನಿಗೆ ॥ ೮ ॥
ಹರಿಯಲಾಪರಿವಾರ್ತೆಸುತ್ತಲು । ಮಿರುವಹಳ್ಳಿಗಳಲ್ಲಿಲೌಕಿಕ ।
ರರಿದುಬರಲಾರಂಭಿಸಿದರಾಕರ್ತನಂಘ್ರಿಯಲಿ ॥
ಕರವಜೋಡಿಸಿಕೇಳಿಕೊಂಬರು । ಶಿರವಬಾಗಿಸಿಬೇಡಿಕೊಂಬರು ।
ಗುರುವೆನೀಸಲಹೆಂದುಭಕ್ತಿಯನೀವುತಿಹರಮಮೂ ॥ ೯ ॥

ಬರುತಲಿರುವರುದ್ರವ್ಯಕಾಮ್ಯರು । ಬರುತಲಿರುವರುಪುತ್ರಕಾಮ್ಯರು ।
ಬರುತಲಿರುವರುಸೌಖ್ಯಕಾಮ್ಯರುಕರ್ತನಡಿಗಳಿಗೆ ॥
ಬರುತಲಿರುವರುಭೂಮಿಕಾಮ್ಯರು । ಬರುತಲಿರುವರುವಿವಿಧಕಾಮ್ಯರು ।
ಗುರುವೆಪ್ರಭುವೇನಡಿಸಿಕೊಡುನೀನೆಂಬರೇನೆಂಬೆ ॥ ೧೦ ॥
ಪರಿಪರಿಯಕಾಮ್ಯಾರ್ಥಕಾಗಿರೆ । ನರಸಮೂಹವುನಿತ್ಯನೆರೆವುದು ।
ಗುರುವೆಸ್ವಾಮಿಯೆಕರುಣಿಸೈನೀನೆಂದುಬಾಗುವರು ॥
ಗುರುಫಕೀರೇಶ್ವರನುಕರ್ತನು । ಪರಿಕಿಸುತ್ತವರವರನಿಷ್ಠೆಗೆ ।
ತ್ವರದಿದಯಪಾಲಿಪನುತನ್ಮನದಂತೆಕಾಮ್ಯವನು ॥ ೧೧ ॥
ಎಲ್ಲತರದಲಿಮಾನವನುಕೊಡು । ತೆಲ್ಲಬಗೆಯಲಿಕ್ಷೇಮಕೇಳು ।
ತ್ತೆಲ್ಲವಿಧದಲಿತೃಪ್ತಿಬಡಿಸುವನಲ್ಲನು ಪ್ರಭುವು ॥
ಎಲ್ಲ ಶರಣರ ಲೀಲೆಹೇಳು ।ತ್ತೆಲ್ಲಕುರುಹುಗಳಲ್ಲಿ ತೋರು
ತ್ತೆಲ್ಲಜನಕಾನಂದಗೊಳ್ಳಿಸಿಭಕ್ತಿಹೆಚ್ಚಿಪನು ॥ ೧೨ ॥
ಕೊಡುವನಾಶೀರ್ವಾದಬೂದಿಯು । ಕೊಡುವನಾಶೀರ್ವಾದಫಲವನು ।
ಕೊಡುವನಾಶೀರ್ವಾದಪುಷ್ಪವಭಕ್ತಿಯುಳ್ಳರಿಗೆ ॥
ಕೊಡನುಲೋಕದದ್ರವ್ಯದಾಶೆಗೆ । ಕೊಡನುಭುವನದಕೀರ್ತಿಯಾಶೆಗೆ ।
ಕೊಡನುಭಿಡೆಯದಮಾತಿಗಾಗುರುಕರ್ತನೇನೇನು ॥ ೧೩ ॥
ಮನದೊಳನುಮಾನಿಸುವಜನರಿಗೆ । ಮನದಿನಿಂದಿಸುತಿರ್ಪನರರಿಗೆ ।
ಮನದಿಬಿರಿನುಡಿನುಡಿವಜನರಿಗೆಬಹಳಹೆಮ್ಮೆಯಲಿ ॥
ಮನದಿಕಲ್ಪನೆತೆಗೆವಮುಂದಿಗೆ । ಮನಸಿನಂದವಬಿಚ್ಚಿಹೇಳುತೆ ।
ಚಿನುಮಯಾತ್ಮಾರಾಮಕರ್ತನುಬಿಡದೆಬಾಗಿಸುವ ॥ ೧೪ ॥
ಗುರುವಿನಾಟವನರಿತುಪ್ರತಿದಿನ । ನೆರೆಯುಹತ್ತಿತುಜನವುಹರುಷದಿ ।
ಪರಿಶೆಯಂತಿರೆತೋರಹತ್ತಿತುಕರ್ತನಡಿಗಳಲಿ ॥
ಧರೆಯೊಳಿದುಬಲುಸೋಜಿಗವುಶಿವ । ಶರಣರಾಟವುಜಗದೊಳಿಂದಿಗೆ ।
ಶರಣರವತಾರಿಕರುಬಂದಂತಾಯಿತೆನ್ನುವರು ॥ ೧೫ ॥
ಜೋಕೆಮಾಡಿರಿಬೂದಿಯನುಸಲೆ ।ಜೋಕೆಮಾಳ್ಪುದುನಿಮಗೆಬೂದಿಯು ।
ಜೋಕೆಮಾಡಿರಿಕಾಮಿನಿಮ್ಮನುಕಾಯುವದುಕಾಯಿ ॥

ಜೋಕೆಮೂಡಿರಿಹೂವನಂದದಿ । ಜೋಕೆಮೊಳ್ಪುದು ಹೂವುನಿಮಗೈ ।
ಜೋಕಿಗಡಬಲುಜೋಕಿಯೆಂದೇಕೊಡುವನಾಕರ್ತಾ ॥ ೧೬ ॥
ಹೇಳಿದಂತಿರೆತಮ್ಮಕಾರ್ಯವು । ಕಾಲಗೊದಗಿರೆಹಿಗ್ಗಿಮನುಜರು ।
ಲೀಲೆಹೆಚ್ಚಿನದೆಂದುಮನದಲಿನಂಬಿಸಿಶ್ಲೈಸಿ ॥
ಭಾಳಲೋಚನನಾಟವಿದುಗೋ । ಪಾಲಕೃಷ್ಣನಮಹಿಮೆಯೆನ್ನುತೆ ।
ಕಾಲಕಾಲಕೆಬರುವರಾದರುವರಶಿರಃಪುರಕೆ ॥ ೧೭ ॥
ಮೆಲ್ಲಮೆಲ್ಲನೆಧನಬಲಾಢ್ಯರು । ಮೆಲ್ಲಮೆಲ್ಲನೆರಾಜಕೀಯರು ।
ಮೆಲ್ಲಮೆಲ್ಲನೆಬರಲುಹತ್ತಿದರೆಲ್ಲದೊಡ್ಡವರು ॥
ಸೊಲ್ಲುಸೊಲ್ಲಿಗೆತನ್ನಲೀಲೆಯೊ । ಳಿಲ್ಲಮನುಬಂದಿರುವನೆನ್ನುವ ।
ದೊಳ್ಳಿತಾಗಿಯೆಕುರುಹುಗಾಣಿಸಿನಗುವನಾಕರ್ತಾ ॥ ೧೮ ॥
ನಿಮ್ಮಭಕ್ತಿಯುನಿಮಗೆಕಾರಣ । ನಿಮ್ಮ ಸೇವೆಯುನಿಮಗೆಕಾರಣ ।
ನಿಮ್ಮನಿಷ್ಠೆಯುನಿಮಗೆಕಾರಣವೆನ್ನೊಳೇನುಂಟು ॥
ನಿಮ್ಮಹಾಗೆಯೆನಾನುಬಂದಿಹೆ । ನಿಮ್ಮ ಹಾಗೆಯೆನಾನುಬಳೆದಿಹೆ ।
ನಿಮ್ಮಹಾಗೇನಿಲ್ಲವೆನುನಾನೆಂಬನಾಕರ್ತಾ ॥ ೧೯ ॥
ನೋಟಕಾರರುನಡೆದುಕೊಂಬರು । ಮೂಟಗಾರರು ನಡೆದುಕೊಂಬರು ।
ಬೇಟೆಗಾರರುನಡೆದುಕೊಂಬರುಭಕ್ತಿಭಾವದಲಿ ॥
ಕಾಟಕರುಸಲೆನಡೆದುಕೊಂಬರು । ಲೂಟಿಗಾರರುನಡೆದುಕೊಂಬರು ।
ಕೀಟಕರುಬಲುಹೆದರಿನಡಕೊಳ್ಳುವರುಕರ್ತನಿಗೆ ॥ ೨೦ ॥
ಬಾಗುವರುಗರ್ವಿಷ್ಠರಂಜುತೆ । ಬಾಗುವರುಕೋಪಿಷ್ಠರಂಜುತೆ ।
ಬಾಗುವರುಬಹುಚೇಷ್ಟೆಗಾರರುಬೆದರಿಬೆಂಡಾಗಿ ॥
ಬಾಗಿನಡೆವರುಬಲ್ಲಿದರುಶಿರ । ವಾಗಿಪೋಪರುವೇಷಧಾರಿಗ ।
ಳಾಗುರೂನ್ನತವರಫಕೀರನಕರ್ತನಪ್ರಿಯಲಿ ॥ ೨೧ ॥
ವಾದಬಿಡುವರುವಾದಿಗಳುಮತ । ಭೇದಿಗಳುಮಿಸುಕಾಡದಿರುವರು ।
ಭೇದವೊಡರುಲೌಕಿಕರುಗುರುನಾಥನಡಿಗಳಲಿ ॥
ಹೌದುಶ್ರೀಗುರುವಲ್ಲಮಪ್ರಭು । ಮೇದಿನಿಯೊಳೀರೀತಿಬಂದಿಹ ।
ಹೌದುಹೌದೆಂಬುವರುಸುಜ್ಞರುಹೇಳಲೇನಿನ್ನು ॥ ೨೨ ॥

ಅರಿತುನುಡಿವರುಹುಟ್ಟುಗಿವುಡುವರು । ಸರಸನುಡಿವರುಮೂಕಮನುಜರು।
ಕುರುಡರೀಜಗಗಾಟಕಾಂಬರು ಗುರುಕಟಾಕ್ಷದಲಿ ॥
ಹಿಡಿನಡೆದಾಡುವರುಹೆಳವರು । ಶಿರಿಯಪಡೆವರುಗಡದರಿದ್ರರು ।
ಧರೆಯೊಳೆಂದೆನೆಹೇಳಲೇನಾಗುರುಮಹತ್ವವನು ॥ ೨೩ ॥
ನಿತ್ಯನೆರೆವುದುಸಕಲಕುಲಜನ । ನಿತ್ಯನಡೆವವುಮಂಗಳಾರತಿ ।
ನಿತ್ಯನಡೆವುದುಧೀನ್‌ಜಗಾಸುವದಾತನಂಘ್ರಿಯಲಿ ॥
ನಿತ್ಯಕುರಃಹುಗಳಾಗುತಿರುವವು । ನಿತ್ಯಪಾಪಾಡುಗಳುಮೆರೆವವು ।
ಮೃತ್ಯುಹರಸದ್ಗುರುವಿನಾಟವಬಣ್ಣಿಸಲ್ಕಳವೆ ॥ ೨೪ ॥
ಹೋದೆಡೆಗೆಸನ್ಮಾನದೊರೆವುದು । ಹೋದೆಡೆಗೆಪಕ್ವಾನ್ನಸಿಗುವದು ।
ಹೋದೆಡೆಗೆಬಹುಭಿಕ್ಷೆದೊರೆವುದುತವ್ಮಬೂದಿಯಲಿ ॥
ಆದಿಮೂರ್ತಿಗುತಮಗುಜಗದೊಳು । ಭೇದವೇನೇನಿಲ್ಲವೆಂದೀ ।
ಮೇದಿನೀಜಂಗಮರುಕರ್ತಂಗೆರಗಿವಂದಿಪರು ॥ ೨೫ ॥
ಧೀರಕರ್ತನುತನ್ನನಿಜಮಹಿ । ಮೋರುಲೀಲಾಮಾತ್ರದಿಂಸಿರಿ ॥
ದೋರುತಾಡುತ್ತಿರಲುಶಾಂತಮಹೋಗ್ರರೂಪದಲಿ ॥
ಊರುಪಾವನವಾಯಿತೆನ್ನುವ । ರೂರಪುಣ್ಯವನೋಡಿರೆನ್ನುವ ।
ರೂರದೈವವೃತೆರಿಯಿಃತೆನ್ನುವರೆಲ್ಲಕುಲದವರು ॥ ೨೬ ॥
ಈಪರಿಯೊಳಾಹುತ್ತಿನೆಡೆಯೊಳ । ಗಾಪುರಾತನಪುರುಷಶಿವಸ ।
ದ್ರೂಪವಿನಮಿತಭಕ್ತಜನಚಿಂತಾನಿವಾರಕನು ॥
ಪಾಪಪರಿಹರಮೋಕ್ಷದಾಯಕ । ಶಾಪಹರಣನುದೇವದೇವನು ।
ಶ್ರೀಫಕೀರನುಮೆನಿಸುತಿರುವನುಜನಕೆಪ್ಮ್ಯಗೊಡದೆ ॥ ೨೭ ॥
ಅವನಿಯಲಿವಾಸಿಸುವಭಕ್ತರೆ । ಕಿವಿದೆರೆದುಮಿಗೆಕೇಳಿತಿಳಿಯಿರಿ ।
ಭವಹರನುಗುರುಹೂಡಿದನುಪೊಸತೊಂದುಲೀಲೆಯನು ॥
ಭುವನದಲಿಭಕ್ತರಲಿತನ್ನಾ । ಟವನುತೋರುತ್ತಾಡುತಾಡು ।
ತ್ರವನುನುಡಿದಪನೊಂದಃದಿನತನ್ನಾಪ್ತಭಕ್ತರಲಿ ॥ ೨೮ ॥
ಬುವಿಯೊಳೆಲ್ಲಡಗಿಹನುಶ್ರೀಗು ೨। ಕುವರನೆನ್ನೆಡೆಗೆಂದುಬ ೨ವನೊ ।
ಶಿವಮಹೋತ್ಸವಕಾರ್ಯನಡಿಸುವನಾತಬೇಕಿನ್ನು ॥

ಅವನುತಾಚೆನ್ನಾಗಿತನ್ನಾ । ಟವನುಬೈಲಿಗೆತೆಗೆದುಮೆರೆಯುವ ।
ನವನದಾರಿಯನೀಕ್ಷಿಸುವೆನೆಂತೆಂದನಾಕರ್ತ ॥ ೨೯ ॥
ದೇವದೇವನೆನಿನ್ನಲೀಲೆಯ । ನಾವನರಿವನೊಮರ್ತ್ಯಲೋಕದೊ ।
ಯಾವಕಾಲಕ್ಕೇನುಕಾರ್ಯಂಗೈವೆಯೋನೀನು ॥
ಆವನೋನಿಜಶಿಷ್ಯನಿನ್ನವ । ನಾವುನಂನಮಗೇನುಹೊಳೆಯದು ।
ದೇವನೀನೇಬಲ್ಲಿಯೆಂದವರೆರಗೆಕರ್ತನಿಗೆ ॥ ೩೦ ॥
ಗುರುಫಕೀರೇಶ್ವರನುತದ್ಭ । ಕ್ತರಿಗದೆಲ್ಲವುತಿಳಿಸಿಸಮ್ಮುದ ।
ವೆರಸಿದನುಗಡಜಗಕೆಪಾಚ್ಛನಭಕ್ತರೇಂಕೃತರೋ ॥
ಬರುವನಿನ್ನಾಸಿದ್ಧರಾಮೇ । ಶ್ವರನುಬಂವಾಬಳಿಕನೋಡಿರಿ ।
ಗುರುಮಹತ್ವವನೆಂದುನುಡಿದನುಕರ್ತನಸುನಗುತ ॥ ೩೧ ॥
ಕರವಮುಗಿದುರೆಶಿರವಬಾಗಿಸಿ । ಗುರುವೆನೀನೇಗತಿಯುನಮಗೆನು ।
ತೆರಗಲಾಭಕ್ತರಿಗೆಕರ್ತನುಗುಪ್ತವೆಂದೊರೆದು ॥
ದರುಶನಾರ್ಥವುಬರುವನಾನಾ । ತರದಜನಕನ್ನವನುಕೊಡುತೀ ।
ಧರೆಗಿದಚ್ಚರಿಯೆನಿಸುತಿರುವನುಸಕಲಕುಲಜನಕೆ ॥ ೩೨ ॥
ಧಾರುಣೀಪತಿಯೆನಿಸಿಶೋಭಿಪ । ಧೀರಗುಣಗಂಭೀರರಾಜರೆ ।
ಸಾರಕರ್ತನಲೀಲೆಕೇಳಿರಿನೋಡಿರಾತ್ಮದಲಿ ॥
ತೋರುತಾಡುತಲಿರ್ದಕರ್ತನು । ದೂರದೇಶದೊಳಾತ್ಮತೇಜದೊ ।
ಯಾರೆದಾಸಾವಂತರೊಳಗವತಾರವಮಾಡಿದನು ॥ ೩೩ ॥
ಆರೆದಾಸಾವಂತರಲಿಸುಕು । ಮಾರನಾಗಿಯೆಪುಟ್ಟಿದಾತನು ।
ಧಾರುಣೀರೂಢಿಯಲಿಬೆಳೆದನುಬಾಲಕೇಳಿಯಲಿ ॥
ತೋರುತಾಡುತೆಹುಡುಗರಲಿನಿಜ । ಧೀರನೆನಿಸುತೆಸುಗುಣಗಣಗಂ ।
ಭೀರನೆನಿಸುತೆಸಿದ್ಧರಾಮಾಖ್ಯೆಯಲಿರಂಜಿಸಿದಾ ॥ ೩೪ ॥
ಮಾರಹರಜಗದಾದಿಗುರುಚರ । ಣಾರವಿಂದಾನಂದರಾಮನು ।
ವೀರಶೈವದೊಳೆಸೆವನಂದನುವಿರತಿತೇಜವಲಿ ॥
ಮೀರಿದತಿವೈರಾಗ್ಯದಲಿಗುರು । ವೀರನಂಪೂಜಿಸುತೆಹೃದಯದೊ ।
ಯಾರಿಗುಂಮೈಗೊಡದಲಾಡುತ್ತಿರುವನಾರಾಮೂ ॥ ೩೫ ॥

ಕಟ್ಟಿದನುಹೊಸಮೇಳವನುಗುರಿ । ಯಿಟ್ಟುಗುರುಪಾದದಲಿತಾನಡು ।
ಕಟ್ಟನಿಂತನಸಿದ್ಧರಾಮೇಶ್ವರನುಲೋಕದಲಿ ॥
ಕಟ್ಟಲೌಕಿಕದಾಟವನುವಿಗೆ । ಮೆಟ್ಟನಿಂದಕರಾಳಿಯನುಮುಂ ।
ದಿಟ್ಟಹೆಜ್ಜೆಯೊಳ್ಯೆದೆತಾಸಂಚಾರವಮಾಡಿದನು ॥ ೩೬ ॥
ಆಟವಾಡುತಲೋಕದಲಿಕೂ । ಗಾಟನಡಿಸುತನೆರವಿಯಲಿಬೊ ।
ಬ್ಬಾಟವಿಸಗುತೆಹಲವುಬಗೆಯಲಿನಿಂತುನಿಲ್ಲದಲೆ ॥
ಬೇಟವಮಾಡುತೆತೆರೆತೋರದ । ಲಾಟಹೂಡುತೆನಾಡಿನಲಿನಿಜ ।
ದಾಟವಾಡದೆನೋಡುತಿರ್ದನುತನ್ನದಿವಸವನು ॥ ೩೭ ॥
ಗುರುವರನಸ್ಮರಿಸುತ್ತಲಿರುವನು । ಗುರುಪದವೆಗತಿಯೆನ್ನುತಿರುವನು ।
ಗುರುಸುರೂಪವತನ್ನೊಳೀಕ್ಷಿಸಿನಲಿವನಾರಾಮಾ ॥
ಗುರುವಿನುನ್ನತಶೀಲೆಯನುಶ್ರೀ । ಗುರುವಿನುತ್ಕಟಮಹಿಮೆಯನುನಿಜ ।
ಗುರುಕಟಾಕ್ಷದಫಲವಪೇಳುತ್ತಿರುವನಾರಾಮಾ ॥ ೩೮ ॥
ಗುರುವುಕಾಡನಿಗಿಂತಕಾಡನು । ಗುರುವುಜಾಣನಿಗಿಂತಜಾಣನು ।
ಗುರುವುಹುಚ್ಚನಿಗಿಂತಹುಚ್ಚನುಕುಶಲನಿಂಕುಶಲ ॥
ಗುರುವುಬಡವನಿಗಿಂತಬಡವನು । ಗುರುವುಬಲ್ಲಿದನಿಂದಬಲ್ಲಿದ ।
ಗುರುಸುರೂಪವನರಿವರಾರ್ಯೆಯೆಂಬನಾರಾಮಾ ॥ ೩೯ ॥
ಗುರುವುಸುಳ್ಳನಿಗಿಂತಸುಳ್ಳನು । ಗುರುವುಕಳ್ಳನಿಗಿಂತಕಳ್ಳನು ।
ಗುರುವುತಕ್ಕನಿಗಿಂತಠಕ್ಕನುಸಕಲಲೋಕದಲಿ ॥
ಗುರುವುತಿರುಕನಿಗಿಂತತಿರುಕನು । ಗುರುವುರಾಜನಿಗಿಂತರಾಜನು ।
ಗುರುಸುಶೀಲೆಯನಾರುತಿಳಿದಪರೆಂಬನಾರಾಮಾ ॥ ೪೦ ॥
ಗುರುವುಬಾಲಕನಿಂದಬಾಲಕ । ಗುರುವುಪ್ರೌಢನಿಗಿಂತಪ್ರೌಢನು ।
ಗುರುವುಪೂರ್ವಜನಿಂದಪೂರ್ವಜವರುಲೋಕದಲಿ ॥
ಗುರುವುವೃದ್ಧನಿಗಿಂತವೃದ್ಧನು । ಗುರುವುಸಿದ್ಧನಿಗಿಂತಸಿದ್ಧನು ।
ಗುರುಚರಿತ್ರವನರಿವರಾರ್ಯೆಯೆಂಬನಾರಾಮಾ ॥ ೪೧ ॥
ಗುರ ವಿಗಂತಿಂತೆಂದುಪೇಳ್ವಡೆ । ಸುರಮುನೀಂದ್ರನಿಗೆಶೇಷನಿಗೆಶ್ರುತಿ ।
ಶಿರಕದರದರದೆಸಿಸುವದುಬ್ರಹ್ಮಾಂಡಜಾಲದಲಿ ॥

ಗುರುನಿರಂಜನದೇವನಾಟದ । ಪರಿಯನೀನರಮನುಜರೇನದ ।
ನರಿವರೇಂಗುರುತನ್ನಹಿಡಿಯುವರೆಂಬನಾರಾವೂ ॥ ೪೨ ॥
ಗುರುವನಂತಾರ್ಕಪ್ರಕಾಶದ । ಚರಣಕಮಲವೃಂದನಾತನು ।
ಹರಿಹರಬ್ರಹ್ಮಾದಿಗಳ್ಚರಿಯೆ ನಿಸುತಾಡುವನು ॥
ಧರಣಿಗುಪಕೃತಿಗೈಯಲೆಂದಾ । ನರಶರೀರವನಾಂತುಲೋಕದೊ ।
ಳಿರಲುಗುರುತನ್ನಾವಹಿಡಿಯುವನೆಂಬನಾರಾವೂ ॥ ೪೩ ॥
ಸಾರತರಗುಣಶೀಲರನುಪಮ । ಧೀರರತಿಶಯಮಹಿಮರಾವೂ ।
ರಾರಿಶರಣರುಬರುವರೀಭೂಮಿಯಲಿಭಕ್ತ್ಯರ್ಥ ॥
ಸಾರಸದಸದ್ವ್ಯಕ್ತಿಗೈಯದೆ । ಹಾರಿಹರಿಯುವಮನಕೆಸಿಲ್ಕಿಯೆ ।
ಧಾರುಣೀಜನಶರಣರಿಗೆಶೆಣಿಸಾಡಿಸಾಯುವರು ॥ ೪೪ ॥
ಚಾರುತರನರಹರಿಯಲೀಲರು । ಪಾರಮಾರ್ಥರುಮುಕ್ತಿದಾತರು ।
ಭೂರಿಮಂತ್ರರುಶಕ್ತಿವಂತರುಶರಣರೆಂಬವರು ॥
ಮಾರಿಮಾಯೆಗೆನಡೆದುಜಗದಲಿ । ತೋರುತಾಡುತ್ತಿರಲುಸೂಕ್ಷ್ಮವಿ ।
ಚಾರವೊಡವೆಜನವುಜರಿದಾನರಕಹೊಂದುವರು ॥ ೪೫ ॥
ಧೀರಗುರುಬಸವೇಶನಿಜರೂ । ಘೋರುತೇಜೋನ್ವಿತರುಸತ್ಯರು ।
ನಾರಸಿಂಹಪ್ರಮುಖರಾಶಿವಶರಣರೆಂಬವರು ॥
ಸಾರುತೀಲೋಕದಲಿಬಕ್ತ್ಯ । ಚಾರತೋರಿಸುತಿರಲುಭ್ರಾಂತಿಗೆ ।
ಜಾರಿಜನವಿದುಜರಿದುಜನನಾಳ್ಗಳಿಗೆಸಿಲ್ಕುವರು ॥ ೪೬ ॥
ಚಿನುಮಯರುಶಿವಲಿಂಗಲೀಲರು । ಘನಮಹತ್ವರುವಾರಶೀಲರು ।
ಜನಕೆಸಿಲ್ಕದಲಾಡುತಿರುವರುಶರಣರೆಂಬವರು ॥
ಅನುಪಮದಸದ್ಭಕ್ತಿಮಾರ್ಗವ । ನನುಕರಿಸಿತೋರುತ್ತಲಿರುತಿರೆ ।
ಜನವುಸುಮ್ಮನೆಹಳಿದುಹಂದಿಗಳಾಗಿಹುಟ್ಟುವದು ॥ ೪೭ ॥
ಬೇಟಗಾರರಿಗೆಲ್ಲಗಂಡರು । ಮಾಟಗಾರರಿಗೆಲ್ಲಗಂಡರು ।
ಕೀಟಕರಕೊಂಡೇರಗಂಡರುಶರಣರೆಂಬವರು ॥
ಬೇಟೆಗಾರರಗಂಡರವರೀ । ಬೇಟೆಯಾಡುತೆಲೂಟಮಾಳ್ಪರು ।
ಚಾಟಕರೆನಿಮಗೇಕೆತಿಳಿಯದುನಷ್ಟವಾಗುವದು ॥ ೪೮ ॥

ಆಟಗಾರರುಮೂಲಬೊಮ್ಮದ । ಮಾಟಗಾರರುಕ್ರೂರಕರ್ಮದ ।
ಲೂಟಗಾರರುಶರಣರೀಭೂಭಾರವಿಳಿಸುವರು ॥
ಆಟವಾಡುತೆನಿಂತುದುರ್ಜನ । ರಾಟನೋಡುತೆಕಡೆಗೆಯಮನಿಂ ।
ಲೂಟಗೈಸುವರೆಂದುಹೇಳ್ವನುರಾಮನಾಡುತಲಿ ॥ ೪೯ ॥
ಕೇಳಿರೈಸಜ್ಜನರುಭಕ್ತರು । ಕಾಲಕಾಲನಕುವರರಾಮನು ।
ಹೇಳುತೀಪರಿಕಾಲಗಳೆದನುಮರ್ತ್ಯಲೋಕದಲಿ ॥
ಮೇಲೆಲೌಕಿಕತೋರಿತನ್ನೊಳ । ಲೀಲೆಯನುತೋರಿಸದೆಜನಸಂ ।
ಮೇಳದೊಳಗಾಡುತ್ತಲಿರುವನುಕರ್ತನಾರಾಮ ॥ ೫೦ ॥
ಗುರುವು ಶ್ರೀಹರಿಯಿಂದಲಧಿಕವು । ಗುರುವುಶಾಂಬನಿಗಿಂತಲಧಿಕವು ।
ಗುರುವುಸಾಕ್ಷಾದ್ಬ್ರಹ್ಮಲೀಲಾಮೂರ್ತಿಪರದೇವಿ ॥
ಗುರುವನಾರ್ಹಿಡಿಯುದಲೆಮರ್ತ್ಯದೊ । ಳಿರಬಹುದೆಪಾರಾಗಬಹುದೇ ।
ಗುರುವನೆಂದಿಗೆಹೊಂದುವೆನೊಸಾನೆಂಬನಾರಾಮಾ ॥ ೫೧ ॥
ಎಂದುಬರುವವೊದಿವಸಗಳುಕೃಪೆ । ಯೆಂದುಸಂಘಟಿಸುವದೊಶ್ರೀಗುರು ।
ವೆಂದಿಗಾನಿಜಸೂತ್ರದಿಂದೆಳಕೊಂಬನೋತನ್ನ ॥
ಎಂದುರಾಮನುಚಿಂತೆಗೈಯುತೆ । ಮಂದಿಗೇನುಂತಿಳಿಸದಲೆಜನ ।
ದಂದವಲಿನಡೆಯುತ್ತಲಿರುವನುಬಹಳಗುಪ್ತದಲಿ ॥ ೫೨ ॥
ಉತ್ತಮರೆಸದ್ಭಕ್ತರೇನೀವ್ । ಚಿತ್ತವಿಟ್ಟೀನಲಿದುಕೇಳಿರಿ ।
ಮೃತ್ಯುಹರಗುರುಸೂತ್ರದಾಟವುಬಹುವಿಚಿತ್ರವಲಾ ॥
ಇತ್ತರಾಮನಚಿಂತೆಕರ್ತನಿ । ಗಿತ್ತಕರ್ತನಚಿಂತೆರಾಮನಿ ।
ಗೆತ್ತಲೊಂದೇಸೂತ್ರಮವರೊಳಹೊರಗೆಹೊಳೆಯುವದು ॥ ೫೩ ॥
ನಲಿದುಕೇಳಿರಿಸಾಧುಗಳೆಗುರು । ಪೊಳೆಯಲಪ್ಪಣೆಯಾಗಲಾಕ್ಷಣ ।
ತಿಳಿದುಮೇಳಂಗೊಂಡುಹೊರಟನುರಾಮಗುರುಪದಕೆ ॥
ಕೆಳೆಯರೇಳಾಲಿಸಿರಿಹುತ್ತಿನ । ಬಳಿಯೊಳಾಡುತ್ತಿರುವಕರ್ತನು ।
ತಿಳಿಸಿದನುತನ್ನವರಿಗಾಗಳೆರಾಮನೊಸುಗೆಯನು ॥ ೫೪ ॥
ಅವಿನಾಬಳಿಗಾಗಿಕರುವಮ । ಧಾವಿಸುತೆಬರ್ಪಂತೆಶ್ರೀಗುರು ।
ದೇವನಂಘ್ರಿಗೆರಾಮಬಂದನುವರಶಿರಃಪುರಕೆ ॥

ದೇವರಾಗುಡಿಯಲ್ಲಿಜಂಗಮ । ದೇವರಾಮಠವೆಲ್ಲಿತೋರಿಸಿ ।
ರಾವುಪರದೇಶದವರಿಂತೆಂದಾಡಿದನುರಾಮಾ ॥ ೫೫ ॥
ಆಟಗಾರರುನಾವುಗಡ ನ । ಮ್ಮಾಟಬಲುಮೌಜಿನದುಗಡನೀ ।
ವಾಟವಾಡಿಸಿನೋಡಿರೆಂನೇರಾಮನಾಡುತಿರೆ ॥
ನೋಟಕರುಕೂಡಿದರುತತ್‌ಕ್ಷಣ । ಕೀಟಕರು ಕೂಡಿದರುಗಡ ಚ ।
ಲ್ಲಾಟದಲಿಮಾತಾಡಿಸಿದರಾಸಿದ್ಧರಾಮನಿಗೆ ॥ ೫೬ ॥
ಊರಹೊರಗಾಹಳ್ಳದಾಚೆಗೆ । ತೋರಹುತ್ತಿನಗುಡಿಸಲೊಳಗೆ ಘ।
ಕೀರನಿರ್ದಪನಾತನೊಲಿದಡೆಸಕಲರೆಂಲೆಯುವರು ॥
ಊರನಡವಳಿಯಿದುವೆಗಡನೀ । ಸಾರಸೇರಾಗುರುವಿನಂಘ್ರಿಗೆ ।
ವಿೂರಿಕಾಮ್ಯವುನಿನಗೆದೊರೆಯುವವೆಂದರಾಜನರು ॥ ೫೭ ॥
ಇತ್ತರಾಮನುಗ್ರಾಮದೊಳಗಿರ । ಲತ್ತಕರ್ತನುತನ್ನಭಕ್ತರ ।
ವೊತ್ತದಲಿಮರಿದೇವನೈತಹಹನೆಂದುಹೇಳುತಿರೆ ॥
ಬತ್ತರಸಿಸರಿಸರಿಸಿನೆರವಿಯ । ನೊತ್ತಿರಾಮನುಕರ್ತನಂಘ್ರಿಯೊ ।
ಳುತ್ತುಮಾಂಗವನಿಟ್ಟನಚ್ಚರಿಯಾಯ್ತುಸಕಲರಿಗೆ ॥ ೫೮ ॥
ಗುರುವೆತಮ್ಮಡಿಯಲ್ಲಿಭಯವದು ॥ ಬರುತಲಿದೆಣಾವೆಲ್ಲಮಾತಿಗೆ ।
ಕರುಣದಲಿನಡಿಸಿದರೆ ನಾ ನನ್ನಾಟವಾಡುವೆನು ॥
ಗುರುವೆತಾವ್ ಕೈಹಿಡಿಯದಿದ್ದರೆ । ನರರುನಗರೇಸಾಕುಸಾಕೀ ।
ಧರೆಯೊಳೆನಗಿನ್ನಾತರಾಟವದೆಂದನಾರಾಮಾ ॥ ೫೯ ॥
ಕರವಹಿಡಿದೆನಗಭಯಕೊಟ್ಟರೆ । ಗುರುವೆನಾಸಿನ್ನಾಟವಾಡುವೆ ।
ನರರೊಳೆಂದಾರಾಮನಾತಾ್ಮರಾಮಗೆರಗಿದನು ॥
ಗುರುಸಮರ್ಥನುನಿನ್ನನೋಡುವ ।ನಿರದೆಹಿಡಿಯುವವಾರುಮಾಡುವ ।
ನರರಿಗರಿದರಿ ದೆನಿಸೆನೀನಾಡೆಂದನಾಕರ್ತಾ ॥ ೬೦ ॥
ಆದೊಡಾಗಲಿಗುರುವೆನಿಜಕೃಪೆ । ಯಾದರಾಯಿತುಮತ್ತೆನನಗೀ ।
ಮೇದಿನಿಯೊಳೇಂಬೇಕುತಮಗೊಪ್ಪಿಸುವೆನೀತನುವಾ ॥
ಭೇದಬುದ್ಧಿಗಳೇಕೆತಾನೇ । ನಾದರಾಗಲಿಗುರುವೆತಮ್ಮಯ ।
ಪಾದವಿರೆನಾನಂಜದಾಡುವೆನೆಂದನಾರಾಮಾ ॥ ೬೧ ॥

ಆದಿಯಲ್ಲಮನಾದಕರ್ತನ । ಪಾದಪದ್ಮಪ್ರಸರಲೀಲಾ ।
ಮೋದವಮಾನಸನಾಗಿ ರಾಮನು ನಮಿಸಿ ಕರಮುಗಿದು ॥
ಮೇದಿನಿಯೊಳಾಟವನುಹೂಡುವ । ನಾದನಾಗಸದಲ್ಲಿಸುರಕುಲ ।
ಮೋದಗೊಂಡುರೆನೋಡನಿಂತುದುರಾಮಲೀಲೆಯನು ॥ ೬೨ ॥
ಹೂಡಿದನುತನ್ನಾಟವನುಶ್ರುತಿ । ಗೂಡಿಗುರುಭಜನಾನುಭಾವದೊ ।
ಳಾಡಿದನುಭೂಲೋಕದಲಿತಾನರಶರೀರದಲಿ ॥
ಕೂಡಿನುಡುಬಲುಮಂದಿಯಂದಿಗೆ । ರೂಢಿಯಲಿಪೊಸತೆಂಡುಮಿಗೆಕೊಂ ।
ಡಾಡಿಕುಳಿತುದುಪೇಳಲೇಂನರಹರಿಯಸತ್ಕಥೆಯು ॥ ೬೩ ॥
ಆಡುತೀಲೌಕಿಕದೊಳಾಟವ । ನಾಡುತಿರೆನೋಽಪಾರಮೊರ್ಧದಿ ।
ನೋಡುವಾಜನವೆಲ್ಲಕುಳಿತಿರೆಬೊಂಬೆಯಂದದಲಿ ॥
ಪಿಡಿಬಂದಾಟದಲಿಕರ್ತನು । ನೋಡುತೆಲ್ಲರನೆಲ್ಲಿರಾಮನ ।
ನೋಡಿಬಿಡದಾತನಿಗೆಪದೆದಪ್ಪಿದನುಪ್ರೇಮದಲಿ ॥ ೬೪ ॥
ಕರವಿಡಿದುಕರಕೊಂಡುರಾಮನ । ಕರುಣದಲಿತಾಂತೊಡೆಯಮೇಲ್ಕು ।
ಳ್ಳಿರಿಸಿಕೊಂಡನುಕರ್ತಜನಕುಲಕಾಯ್ತುಕೌತುಕವು ॥
ಗುರುಕುವರನೀನಹುದುಹೌದೀ । ತೆರದೊಳ್ಳಿತಂದೆನಗೆಕೂಡಿದೆ ।
ಗುರುಗೆಶ್ರೀಮರಿದೇವರಾಗಿನ್ನೆಂದನಾಕರ್ತಾ ॥ ೬೫ ॥
ಇಂತುಶ್ರೀಗುರುಕರ್ತತನ್ನನಿ । ಜಾಂತರಾಳಗೆಸಿದ್ಧರಾಮನಿ ।
ಗಂತುಪಿಡಿದಿರಲವನುಮರುಳಾಡಿದನುಮಂದಿಯಲಿ ॥
ಕಂತುಹರಸದ್ಗುರುವೆತಮ್ಮಡಿ । ಗೆಂತುಸಲ್ಲುವೆನಾನುಪಾಮರ ।
ನಿಂತುಮರಿಯೆಂದೆಣಿಸುವರೆಬಿಡಿರೆಂದನಾರಾಮಾ ॥ ೬೬ ॥
ಮರುಳೆಬಾಬಾಮರಿಯೆನಮ್ಮೊಳ । ಗಿರದೆಪೋಗುವದೆಲ್ಲಿನಮ್ಮನು ।
ಮರತಿಯಾತತ್ವಾಂಗದರಗಿಳಿಮರಿಯೆಬಾರಿನ್ನು ॥
ಇರುವೆನೀಪ್ರಭುದೇವನಂಶಿಕ । ನರುವಿನಾಥೊರೆಯಾತ್ಮಲಿಂಗನು ।
ಮರವೆನಿನಗೇಕೆಂದುರಾಮನಿಗಪ್ಪಿದನುಕರ್ತಾ ॥ ೬೭ ॥
ಆಗರಾಮನುಕರ್ತನಿಗೆಶಿರ । ಬಾಗಿಕೈಮುಗಿದಿಂತುಪ್ರಾರ್ಥಿಪ ।
ನಾಗಿನುಡಿದನುಕೇಳಿರೈಗುರುಶಿಷ್ಯರೆಂಬವರು ॥

ಶ್ರೀಗುರುವೆತ್ರೈಮಲದಬಲಿಬೊಳ । ಗಾಗದಂದದೊಳೆನಗೆಕರುಣಿಪ ।
ರಾಗಿಪಾರಂಗೈವರಾದೊಡೆಶಿಷ್ಯನಹೆನೆಂದ ॥ ೬೮ ॥
ಸಿರಿವೆರಿಸಿಶೋಭಿಸುವಗುರುಗಳೆ । ಗುರುವಿನೆಡೆಯಲಿಮೆರೆವಮರಿಗಳೆ ।
ಹರುಷದಲಿತಿಳುಕೊಳ್ಳಿರೈಗುರುಶಿಷ್ಯರಂಡವನು ॥
ಚರಣಕಾನತನಾಗಿರಾಮನು । ಧರೆಗೆಮೂಯೆಗೆಸಿಲ್ಕದಂತಿರೆ ।
ಕರುಣಿಸೆನಗೆನೆಕರ್ತನಭಯವಸೀವುತಿಂತೆಂದಾ ॥ ೬೯ ॥
ಎಂದಿಗಾದರುಬಿಡೆನುನಿನ್ನೊಳು । ಹೊಂದಿನಾನೇನಿಂತುಬೆಳಗುವೆ ।
ನಿಂದಕರಹಲ್ಲುಗಳಮುರಿಯುವೆನಂಜಬೇಡಿನ್ನು ॥
ಹೊಂದಿಕೊಳ್ಳೈನೀನುನಮ್ಮೊಳ । ಗೆಂದುಕರ್ತನುಬೂದಿಹಚ್ಚಿದ ।
ನಂದುಸ್ಮೈವೆರಗಾಗಿಮೇಳವುಮುರಿದುದಡಬಡಿಸಿ ॥ ೭೦ ॥
ಬೇಟವಮೂಡಿದನಕಟಗುರುಕೈ । ಮೂಟದೋರಿದನೈಯ್ಯೊಬಲುಸವಿ ।
ಯೂಟಗಾರನುಪ್ರೌಢನೆಮ್ಮಯಹುಡುಗನೆನುತಿಂತು ॥
ಆಟಗಾರರುಮರುಗುತಿವನಿಂ । ದಾಟವೆಮ್ಮದುಮೇಲೆನಿಸಿಬೆಳ ।
ದಾಟಹಾಳಾಯ್ತೆಂದುಚಿಂತಿಪರಾದರವರಾಗ ॥ ೭೧ ॥
ಎಲ್ಲಿಹುಟ್ಟಿದೆವಕಟಸ್ನೇಹವ । ನೆಲ್ಲಿಗಳಿಸಿದೆವರರೆಕೂಡು ।
ತ್ತೆಲ್ಲಿಮೇಳಂಗೊಂಡೆವಕ್ಕಟತೊಳಲಿಬಳಲುತಲಿ ॥
ಎಲ್ಲಿಗೈತಂದೇನಿದಾಯಿತು । ಬಲ್ಲಿದಗೆಕಳಕೊಂಡೆವೆನ್ನು ।
ತ್ತೆಲ್ಲಜನರಾಕ್ರೋಶಗೊಂಡರುಹಲವುಹಂಬಲಿಸಿ ॥ ೭೨ ॥
ಅವರತಳಮಳಗೊಂಡಧ್ವನಿಗೇ । ಳ್ದವರಿಗಾಗುರುಹಸ್ತಕಮಲೋ ।
ದ್ಭವನುಶ್ರೀಮರಿದೇವರಾಮನುನುಡಿದನೇವೇಳ್ವ ॥
ಭವಹರನಪದವಿಡಿದಬಳಿಕೀ । ಭವದೊಳಭಿರಮಿಸುವೆನೆನಾಪರಿ ।
ಭವವದಾಂಟದೆನೆನ್ನಬಟ್ಟೆಯಬಿಡಿರಿನೀವೆಂದ ॥ ೭೩ ॥
ಮುನಿವುತಾಟದಜನರುತಮ್ಮೊಳು ಮುನಿಕುಲೋತ್ಕಟವೃಡನಮಹಿಮೆಯ
ಘನತೆಯರಿಯದೆಹೋದರಾಮುದಿಪಾಚ್ಛನಂಫ್ರಿಯಲಿ ॥
ಮನವದೆಂತೊಡಬಟ್ಟುದೋಹುಡು । ಗನಿಗೆಬಿಡದಿಹುದೆಂತೊಶಿವಶಿವ ।
ಮನಸಿಗಾಯಿತೆಹರುಷಬಿಡೆವೈಬಿಡೆವುಹುಡುಗನಿಗೆ ॥ ೭೪ ॥

ಎನುತೊದರಿಬಹುಕೋಪದಲಿ ಮುನು। ಮುನಿಗಳಾತ್ಮಾರಾಮುನಿಗೆಕ।
ರ್ತನಿಗೆನುಡಿದರುಪಳಿವುತತಿಗರ್ವೋಪಹಾಸ್ಯದಲಿ ॥
ಮನಕೆಬಂದಂತಾಡಿದರುಬಿಡೆ। ವೆನುತನಮ್ಮಯಹುಡುಗನನುಕೊಡೆ।
ವೆನುತವರುಕ್ಕೈಹಿಡಿದರಾಶಿವರೂಪಬಾಲಕನ ॥ ೬೫ ॥
ಶುದ್ಧಸಹಜಾನಂದಸದ್ಗುರು। ಸಿದ್ಧರಾಮುಪ್ರಿಯಸಾಂಬನು।
ಶುದ್ಧಮಾಡಿಯೆನನಗೆಮರಿಯನುಮಾಡಿಕೊಂಡಿಹನು ॥
ಶುದ್ಧಶಂಭರುನೀವುನಿಮ್ಮಯ। ಬುದ್ಧಿಸತ್ಫಲಗೊಡದುನಿಲ್ಲದ।
ಲೆದ್ದುಹೋಗಿರಿನಿಮ್ಮಗ್ರಾಮಕ್ಕೆಂದನಾರಾಮೂ ॥ ೬೬ ॥
ಬಳವಿಡಿದಕಟ್ಟಾಟದಾಜನ। ಗಳಹುತಿರೆಕೆಲಬಗೆಯನುಡಿಗಳ।
ನೆಳವುತಿರೆಗುರುಪುತ್ರನಂಬಿಡದಂದುಮೋಹದಲಿ ॥
ಖಳರಕೃತ್ಯವನೋಡಿಕರ್ತನು। ಮುಳಿದನದನೇವೇಳ್ವೆನಾಕ್ಷಣ।
ಕಿಳಿಯುನಡುಗಿದುದಕಟಮನುಜರಪಾಡದೇನೆಂಬೆ ॥ ೬೭ ॥
ಕೆಲರಕಣ್ಗಳುಕಾಣದಾದವು। ಕೆಲರಕಿವಿಗಳುಕೇಳದಾದವು।
ಕೆಲರಕಾಲ್ಗಳುಕೀಳದಾದವುತಮ್ಮತಮ್ಮೊಳಗೆ ॥
ಕೆಲರುಜಗಳಾಡಿದರುಮೂಕರು। ಕೆಲವರಾದರುಜಗದಗುರುಪ್ರ।
ಜ್ವಲಿತಮಹಿಮಾಮಾತ್ರಕಂಜಿತ್ತೆಲ್ಲಜನಜಾಲ ॥ ೬೮ ॥
ಗುರುವಿನಾಟವನರಿಯದಲೆಕೆ ಟ್ಟರಲುಲೌಕಿಕದಾಟಗಾರರು।
ಕರುಣಿಸಾಂಬನುರಾಮಗಾಕಡೆನೋಡಿಶಾಂತಿಯಲಿ ॥
ನೆರೆನಿರೀಕ್ಷಿಸಿಕರುಣಿಸಿದನಾ। ಗುರುವಿನುನ್ನತಮಹಿಮೆಯರಿದಾ ॥
ನರರುಭಯಗೊಂಡೆರಗಿತಪ್ಪಾಯ್ತೆನುತಗುರುವರಗೆ ॥ ೬೯ ॥
ಗುರುವೆತಮ್ಮಯಮಗನುತಮ್ಮಯ ಚರಣಕಮಲಕ್ಕೊಪ್ಪಿದನುನಾ।
ವರಿಯೆವೀಲೀಲೆಯನುನಮಗೇಂಗೂತ್ತುತಮ್ಮಾಟ ॥
ಕರುಣದಲಿಸಲುಹಿದಿರಿಸಾಕೈ। ಗುರುವೆನಮಗಪ್ಪಣೆಯುಕೊಡಿರೈ।
ಹರಿಸಿರೈನಮಗೆಂದುವಿನಮಿತರಾದರಾಜನರು ॥ ೭೦ ॥
ಯೋಗಿಯಾದನುಸಿದ್ಧರಾಮನು। ಹೋಗಿರೈನೀವ್ ಚಿಂತೆಮಾಡಲಿ।
ಕಾಗದೈಸಂತೋಷಗೊಳ್ಳಿರಿಯೆಂದನಾಕರ್ತಾ ॥

ಶ್ರೀಗುರುವೆನಿಜಕರುಣವಿರಲೆಂ । ದಾಗಳಾಟದಜನರುನಮಿಸುತೆ ।
ಯೋಗಿಯೊದನೆನಮ್ಮರಾಮನೆನುತ್ತೆಸಾಗಿದರು ॥ ೪೧ ॥
ಸಾಂಬನೇಗತಿಯೆನ್ನುತಾಜನ । ಸಾಂಬನಿಗೆಜಾನಿಸುತೆಮನದಲಿ ।
ಹಂಬಲಿಸದಲೆ ಹೋದರೈಸಲೆಕೇಳರಿನ್ನಿತ್ತ ॥
ಶಂಭುರಾಮುಂಗೆತ್ತಿಕೊಂಡೇ । ನಂಬಿದಾಭಕ್ತರಿಗೆಸಲಹುತೆ ।
ಕುಂಭರಾಹಲ್ಮುರಿವುತೆಸೆವವನಾವನನುದಿನವು ॥ ೮೨ ॥
ಪರಮಸದ್ಗುರುಕರ್ತರಾಮೇ । ಶ್ವರನಿಗಾಶ್ರಮಕೊಟ್ಟುಹಿಡಿದೀ ।
ಧರೆಗೆಶ್ರೀಮರಿದೇವರಂತಾಂಮಾಡಿಕೊಂಡೆಸೆಯೆ ॥
ಗುರುವಿನೆಡೆಯ೦ಲಿಸೇವೆಗೈವರು । ಸರಿಮಿಗಿಲುತನಗಿಲ್ಲವೆನ್ನಿಸಿ ।
ನಿರುತಸೇವಾಸಕ್ತನಾದನುರಾಮನಿಷ್ಕಾಮ ॥ ೮೩ ॥
ಗುರುವಿನಾಗುರುತವನುಹಿಡಿವನು । ಪರನುಶಿಷ್ಯನುತನ್ನಶಿಷ್ಯನ ।
ಗುರುತುಹಿಡಿವನುಗುರುವುಪರಶಿವಸೂತ್ರದಿಂದರಿದು ॥
ನರಜನಕೆಮೈಗೊಡದಲೀರ್ವರು । ಧರೆಯೊಳೊಂದೇಸೂತ್ರರಾಗಿರು ।
ತಿರುವರಿದುನಿಜವೆಲ್ಲರೊಂದೇಪ್ರಭುವಿನಂಶಿಕರು ॥ ೮೪ ॥
ಧರೆಗೆಮಾಯೆಗೆಸಿಲ್ಕದಾಡು । ತ್ತಿರುವವಸ್ತುವೆಗುರುವುತಾನವ ।
ಹರಿಯುಹರನುಂಬ್ರಹ್ಮನಹುದೀಮರ್ತ್ಯಲೋಕದಲಿ ॥
ಇರುವನೈತ್ರೈಮೂರ್ತಿಯೊಳಗವ ।ರಿರುವನುತನೊಳವರುಮಲ್ಲದೆ ।
ಬರಿದೆಮೆರೆವವೆಜಗದ ಶ್ರೀಗುರುವೆಂಬಬಿರುದುಗಳು ॥ ೮೫ ॥
ಸಿರಿಯಸೊಬಗಿಗೆಸಿಲುಕಿಸೊಗಯಿಸು । ತಿರುವಲೌಕಿಕಗುರುವಿಗಲ್ಲವೆ ।
ಧರಣಿಗುಪಕೃತಿಗೈವಗುರುವಿಗೆನಂಬದೀಜನವು ॥
ದುರಿತಕರ್ಮಾಸಕ್ತನಾಗಿಯೆ । ಮೆರೆವಡಂಭಾಚಾರಗಲ್ಲದೆ ।
ಪರಮಭಕ್ತನನೋಡಿನಲಿಯುನುಲೋಕವೀಗುರುವು ॥ ೮೬ ॥
ಧರೆಯೊಳವತರಿಸಿರುವಗುರುನಿಜ । ಪರನುಮಹಿಮಾಲೀಲೆತೋರದ ।
ಲಿರುವನಾದಿನಬರುವವರೆಗುಂಕುರುಹುತೋರಿಸುತಾ ॥
ನರಜನಕೆಭಯಭಕ್ತಿಭಾವವ । ನೊರೆವುತೆಚ್ಚರಹೇಳುತಿರುವನು ।
ಬರಲುದಿವಸಗಳೊತ್ತಿಬೈಲಿಗೆಬಂದುಬೆಳಗುವನು ॥ ೮೭ ॥

ಗುರುವುಬೈಲಿಗೆಬರುವವರೆಗೀ । ನರರುಧಿಕ್ಕರಿಸುವರುಹರಹರ ।
ಗುರುವುಪಕಸಕನಗುವನೈಗಡನೌನವುದ್ರಿಸುಲಿ ॥
ನರರೊಳಗೆನರರೆನಿಸಿಪರಂ । ಗಿರುವಶ್ರೀಬಸವಾದಿಪ್ರಮಥರ ।
ಪರಮಲೀಲೆಗೆಸೇರರೆಂದಿಗುಲೋಕಡಾಂಭಿಕರು ॥ ೮೮ ॥
ಮಂಗಳಾರತಿಯೆತ್ತಿಬೆಳಗಿರಿ । ಸಂಗಗಾಶರಣರಿಗೆಮಹಿಮೋ ।
ತ್ತುಂಗಮಹಾಹೇಶ್ವರರಿಗಾಬಸವಂಗೆಪ್ರಮಥರಿಗೆ ॥
ಲಿಂಗಮಹಿಮಗೆಮೃತ್ಯುಹರಗುರು । ಲಿಂಗಜಂಗಮನೆನಿಪಕರ್ತಗೆ ।
ಮಂಗಳಾರತಿಯೆತ್ತಿಬೆಳಗಿರಿ ಶ್ರೀಫಕೀರನಿಗೆ ॥ ೮೯ ॥
ನರರಿಗೇನುಂತೋರಿಸದೆ ನೀ । ನರರೆಭಕ್ತರಿಗೆಲ್ಲತಿಳುಹಿದೆ ।
ವರದಸದ್ಗುರುನೀನುಕರ್ತಪರಾಕುಮುದಿಪಾಚಾ ॥
ನರರಸಂತತಿಸಲ್ಲದೆಂದೀ । ಧರೆಗೆನಿನ್ನಂಶಿಕನತಂದೈ ।
ಪರಕೆಪರತರವಸ್ತುಕರ್ತಪರಾಕುಪ್ರಭುರಾಯಾ ॥ ೯೦ ॥
ಗುರುಮಹತ್ವದಸಾರವಿಂತಿದು । ಗುರುಮಹತ್ವಮನಂತವಿಪ್ರುದು ।
ಗುರುಮಹತ್ವವನರಿದುಪೇಳುವರಾರುಲೆ ಇಕದಲಿ ॥
ಗುರುಫಕೀರೇಶ್ವರನುಗಂಗಾ । ಧರನಮುಖದಿಂವೇಳಿಸಿದನೀ ।
ತೆರದಿಮುಗಿದುದುಸಂಧಿಹದಿಮೂರನೆಯದೆಂದೆನಿಸಿ ॥ ೯೧ ॥

ಇತಿ ಶ್ರೀ ಶಿವಃಪುರ ಶ ನ್ಯಸಿಂಹಾಸನಸ್ಥಾಪನಾಚಾರ್ಯ ಶ್ರೀ ಭಗವಾನ್ ವಿಭು ವಾಕ್ಶ್ರೀ ಮಗಂಗನಿಂ ಪೇಳಿಸಿದ ಪೌರಾಣದೊಳ್ ಹದಿಮೂರನೆಯ ಸಂಧಿ ಸಮಾಪ್ತ ಮಿಂತು ೩೩೪ ಪದ್ಯಂಗಳಿಗೆ ಮಂಗಲಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ



# ೧೪ನೇ ಸಂಧಿ.

## ಸಿದ್ಧರಾಮೇಶ್ವರನಿಗೆ ಅಭಯಕೊಟ್ಟದ್ದು.

**ಸಂಧಿ ಸೂಚನೆ**

ಜಗದಕರ್ತನುತನ್ನಮರಿಗೀ । ಜಗದೊಳಾಡ್ಯೆಯೆಂದುಬೈಲಿಗೆ ।
ತೆಗೆದುತಾನಾಡಿಸುತೆಸಕಲರಭ್ರಾಂತಿಬಿಡಿಸಿದನು ॥ ಪಲ್ಲ ॥
ಗುರುಮಹತ್ವವನರಿಯಬೇಕಾ । ಗುರುವಿನಾಟವತಿಳಿಯಬೇಕಾ ।
ಗುರುವಿನೊಳಗೇನುಂಟೊಯೆಂಬರು ಕುಂಭಡಾಂಭಿಕರು ॥
ದುರುಳರೇನಿಮಗೊರವೆಕೇಳಿರಿ । ಗುರುವುಸುಮ್ಮನೆತೋರ್ಪನಲ್ಲವು ।
ಬರಿದೆಬೈಲಿಗೆಬರುವನಲ್ಲವುಸುಲಭನೇನಲ್ಲ ॥ ೧ ॥
ಪರಮಶರಣರುಮೇಣುಸದ್ಗುರು । ಚರಣಭಕ್ತರಿಗಾಗಿಮಹಿಮೆಯ ।
ನಿರದೆತಿಳಿಪರುಗುಪ್ತದಲಿಕೋಲ್ಮಿಂಚಿನಂದದಲಿ ॥
ಕುರುಬರಂಜದೆಸೊಕ್ಕಿನಿಂದಲಿ । ಬರಲುಮೈಮೇಲೇರಿಬಿಡದಾ ।
ಗುರುವುಶರಣರುಮಾಯದಿಂದಲೆಮೆಟ್ಟಮೆರೆಯುವರು ॥ ೨ ॥
ನರರುಮುನಿದರುಸುಮ್ಮನಿರುವನು । ನರರುಪಳಿದರುಸುಮ್ಮನಿರುವನು ।
ನರರುಕಲ್ಲಿತುರೆಕುಂದನಿಟ್ಟರುಸುಮ್ಮನಿರುತಿಹನು ॥
ನನರುಬೈದರುಸುಮ್ಮನಿರುವನು । ನರರಗೋಷ್ಠಿಗೆಸುಮ್ಮನಿರುವನು ।
ನರರಹಾದಿಗೆಹೋಗದಿರುವನು ಗುರುನಿರಾಕಾರ ॥ ೩ ॥
ದುರುಳರನುದಂಡಿಸದೆಜಗದೀ । ಶ್ವರನುಗುರುಬಲುನಡಿಸಿಕೊಡುವನು ।
ಧರೆಯೊಳೆಂಬೀಭಾವತೋರ್ಪರುಬಡವರಾದವರು ॥
ಮೊರೆಯಮಾತಿದುಸತ್ಯಸುಜನರೆ । ಗುರುವಿನಿಂಗಿತವರಿತುಕೊಳ್ಳಿರಿ ।
ದುರಿತಕರ್ಮವಹೆಚ್ಚಿಸುವನನಯಮನಕಡೆಗಾಗಿ ॥ ೪ ॥
ಹರುಷಗೊಳ್ಳಲಿಯಮನದೂತರು । ಭರದೊಳೆಂದಾಜಗದಸದ್ಗುರು ।
ಕರುಣಿಸಿಯೆನೆರವಾಗುವನುಗಡಕುಜನಸಂಕುಳಕೆ ॥
ನರರಪಾಪವುನರರಶರಗಿಗೆ । ಹರನುಸಂಹರಿಸುವನುಬಿಡದೆಂ ।
ದರಿದುಸದ್ಗುರುಸುಮ್ಮನಿರುವನುತಿಳಿಯಿರೀಹವಣು ॥ ೫ ॥

ಎಲ್ಲಭಕ್ತರೆನೀವುಕೇಳಿರಿ । ಸಲ್ಲಲಿತಗುರುಮೂರ್ತಿಕರ್ತನು ।
ನಿಲ್ಲದಲೆಭಯಭಕ್ತಿಭಾವಕೆಕಾಮ್ಯವನುಕೊಡುತಾ ॥
ಎಲ್ಲಕುರುಹುಗಳಾಡಿತೋರಿಸು । ತೆಲ್ಲರಿಗೆಹಿತಕರ್ತನೆನಿಸಿರ ।
ಲೆಲ್ಲರುಂನೆರೆನಂಬಿಸೇವಕರಾದರಾತಸಿಗೆ ॥ ೬ ॥
ಮನುಜರೆಲ್ಲರುತಮ್ಮತಮ್ಮಯ । ಮನಸಿಗಿಚ್ಛೆಗೆಬಂನುದೆಲ್ಲವ ।
ನನುನಯದೊಳುರೆಕೇಳಿಕೊಂಬರುಕರ್ತನಂಘ್ರಿಯಲಿ ॥
ಮನದೊಳಗೆಮನೆಗೈದಕರ್ತನು । ಮನದಹವಣಿಕೆಯರಿತುಕೂಡಲೆ ।
ಜನಕೆತಿಳಿಸುತೆಹರಸಬೂದಿಯಕೊಟ್ಟುಕಳುಹುವನು ॥ ೭ ॥
ಅಳಿಯಸೊಸಗೆಯಕೇಳಿಕೊಂಬರು । ಹೊಲದಮಾತನುಕೇಳಿಕೊಂಬರು ।
ಕಳೆದುಹೋಗಿಹಧನದದನಗಳಮಾತುಕೇಳುವರು ॥
ಮಳೆಯಮಾತನುತೆಗೆದುಕೇಳ್ವರು । ಬಳಿಪಡಿದಕಾಡಾಟಹೇಳ್ವರು ।
ಕುಲದನ್ಯಾಯವಹೇಳಿಕೇಳ್ವರುಕರ್ತನಡಿಗಳಲಿ ॥ ೮ ॥
ಹೇಳುವರುತಮಗಿರುವಕಷ್ಟವ । ಹೇಳುವರುಬಾಧೆಯಪಿಶಾಚಿಯ ।
ಹೇಳುವರುಬಿಡದಿರುವಬೇನೆಯತರಗಳೆಲ್ಲವನು ॥
ಹೇಳುವರುಕೀಟಕರಬಾಧೆಯ । ಹೇಳಿಕೊಂಬರುತಮ್ಮಬಡತನ ।
ಹೇಳಬಿಡದೆಲ್ಲವನುಕೇಳ್ವರುಕರ್ತಗೆರಗುತಲಿ ॥ ೯ ॥
ಬಂದಜನರಂಗವೂನಮನ್ನಣೆ । ಬಂದಜನರಿಗೆಬಿಡದಲನ್ನವ ।
ಬಂದಜನರಿಗೆಕಾಮ್ಯಕೊಡುವನುಕರ್ತಬಗೆಯರಿತು ॥
ಬಂದಜನರಿಗೆಶಿವನಮಹಿಮೆಯ । ನಂದವಾಗಿಯೆತೋರಿಸುತ್ತಾ ।
ನಂದಗೊಳಿಸುತೆಬೆರಗುವಡಿಸುವನವನುಪ್ರತಿದಿವಸ ॥ ೧೦ ॥
ಧರೆಯೊಳಡಗಿಯೆತೋರುತಾಡು । ತ್ತಿರುವಕರ್ತನಸನ್ನಿಧಾನ ।
ಕ್ಕೆರಗುತಿರುವಾವಿವಿಧಕಾಮ್ಯಾರ್ಥಿಗಳುಮನದಣಿದು ॥
ಹರಯೆಶ್ರೀಗುರುವೆನಿಸುತಿರುವನೊ । ಹರನೆಸದ್ಗುರುವೆನಿಸುತಿರುವನೊ ।
ಶರಣರಾಟವೊಮೇಣಿದೆಂದಾಶ್ಚರ್ಯಗೊಳ್ಳುವರು ॥ ೧೧ ॥
ಪರಮಭಕ್ತರೆನೀವುಕೇಳಿರಿ । ಕರುಣಿಸದ್ಗುರುವೆನಿಪಕರ್ತನು ।
ಕರೆದುನಿಜಭಕ್ತರಿಗೆಹೇಳಿದನೊಂದುದಿವಸದಲಿ ॥

ಮರಿಯನಾವುವುಸಿದ್ಧರಾಮೇ । ಶ್ವರನುನಿಮಗಿವನಿಂದಿನಿಂಶ್ರೀ ।
ಗುರುವೃಶಾನೆನಿಸುವನುಸೇವೆಯಮಾಡಿರ್ಯೆಂದಾ ॥ ೧೨ ॥
ಮರಿಯುಮನುಜರಮರಿಯದಲ್ಲವು । ಮರಿಯುಗುರುವಿನದಿಹುದುತಿಳಿಯಿರಿ।
ಮರಿಯೆನಿಸುವೀಸಿದ್ಧರಾಮನುಬಸವನಂಶಿಕನು ॥
ಮರಿಯವೂತನುವಿೂರಬೇಡಿರಿ । ಮರಿಯನೀವ್‌ಸಲೆನಂಬಿಕೊಳ್ಳಿರಿ ।
ಮರಿಯಮಹಿಮೆಯನುಂದೆನೋಡಿರಿಯೆಂದನಾಕರ್ತಾ ॥ ೧೩ ॥
ಮರೀಯುತಾನವಯವನುವೂಗಿಯು । ನಿರವಯವನಾಗಿಹನುನಿತ್ಯದಿ ।
ಪರಮಶುದ್ಧನುಸಿದ್ಧರಾಮೇಶ್ವರನುಶಾನಿವನು ॥
ನಿರುಪಮನುನಿರ್ವೂಯನೀತನು । ನಿರುತನಿತ್ಯಾತ್ಮಕನುರಾಮನು ।
ಪರಮಗುರುನಿಮಗೆಂದುಪೇಳ್ದನುಶ್ರೀಫಕೀರೇಶ ॥ ೧೪ ॥
ಸತ್ಯಭಕ್ತನತನುವೆನಿಜತನು । ಸತ್ಯಭಕ್ತನಮನವೆನಿಜಮನ ।
ಸತ್ಯಭಕ್ತಸಪ್ರಾಣವೇಸುಪ್ರಾಣವಾತನಿಗೆ ॥
ಸತ್ಯಭಕ್ತಾಶ್ರಯನುಶ್ರೀಗುರು । ಸತ್ಯಭಕ್ತಾಧೀನನಾತನು ।
ಸತ್ಯವಿದುತಿಳಕೊಂಡುನಡೆಯಿರಿಯೆಂದನಾಕರ್ತಾ ॥ ೧೫ ॥
ಪರಮಸಜ್ಜನಸಂಗದೊರೆವುದು । ಪರಮಭಕ್ತರಸ್ನೇಹದೊರೆವುದು ।
ಪರಮಗುರುವಿನಪಾದದೊರೆವುದುಬಹಳದುಸ್ತರವು ॥
ಅರರೆನೀವ್‌ಕಣ್ಣಾರೆಕಂಡೀ । ಪರಮಗುರುವಿನಚರಣದೊಳಗಿರು ।
ತಿರುವಿರ್ಯೆನಿಮಗಾರುಸರಿಯೆಂತೆಂದನಾಕರ್ತಾ ॥ ೧೬ ॥
ಊದುಹಾಕಿರಿದೀನ್ಜಗಾಸಿರಿ । ಭೇದವೆಣಿಸದೆಸೇವೆಮೂಡಿರಿ ।
ವಾದನಡಿಸದೆಕೂಡಿನಡೆಯಿರಿನೀವುಪ್ರೇಮದಲಿ ॥
ಶೋಧಿಸಲುನರಜನ್ಮವಧಿಕವು । ಹಾದಿಹಿಡಿದಿರಿಬಿಡಲುಬೇಡಿರಿ ।
ಮೇದಿನಿಗೆನೀವ್‌ಧನ್ಯರ್ಯೆಂತೆಂದನಾಕರ್ತಾ ॥ ೧೭ ॥
ವಾಸಿಪಂಥದವಾಡುಮುರಿಯಿರಿ । ರೋಷದಾಶೆಯಕೀಲಕಳೆಯಿರಿ ।
ಹೇಸಿಕೆಯನಾಚಿಕೆಯಮೂಲವಮುರಿದುನೀವ್‌ಬಿಡಿರಿ ॥
ಈಶನಿಂಮಿಗಿಲೇದುಗುರುವಿಗೆ । ಸೂಸುವಾಸಂದಾತಿಶಯದಲಿ ।
ಮೋಸವಿಲ್ಲದೆಸೇವೆಮೂಡಿರಿಯೆಂದನಾಪಾಬ್ಫಾ ॥ ೧೮ ॥

ಗುರುಫಕೀರೇಶ್ವರನುತನ್ನಯ । ಚರಣಭಕ್ತರಿಗಿಂತು ತಿಳಿಯಿಸಿ ।
ಪರಮಭಕ್ತಚರಿತ್ರಪೇಳ್ದನುಬಹುರಹಸ್ಯದಲಿ ॥
ಧರೆಯಮೇಲಣಭಕ್ತರೇನೀ । ವರಿತುಕೊಳ್ಳಿರಿಕರ್ತಪೇಳ್ದುದ ।
ನೊರೆವೆನಾನಿಮಗಿನ್ನುನೀವ್ ತಿಳಕೊಳ್ಳಿರೈಬಿಡದೆ ॥ ೧೯ ॥
ಮತಿವಿಹೀನರುಪಳೆವುತಿರೆಮಿಗೆ ।ಸತಿಯುಕರಕರಿಮಾಡುತಿರೆಸಲೆ ।
ಸುತರುಚೀರಾಡುತ್ತಲಿರೆವಿಷಮಪ್ರಪಂಚದಲಿ ॥
ಸತತಸದ್ಗುರುಧ್ಯಾನದಲಿಸಂ । ಗತನುತಾನಾಗಿರ್ದುತನ್ನಯ ।
ಗತಿಗೆಚಿಂತಿಸಿಬಾಳ್ವನೊಳ್ಪನುಭಕ್ತನೆಂಬವನು ॥ ೨೦ ॥
ಸತಿಯುಸಮಸುಖಹೊಂದಿಸುಖಿಸಲಿ । ಸುತರುಗುರುಬಲಯುಕ್ತರಾಗಲಿ ।
ಹಿತರುಸದ್ಗತಿಮಾರ್ಗಹಿಡಿಯಲಿಬಂಧುಬಳಗವದು ॥
ಮತಿಯುಬೆಳಗಲಿಹೃದಯದೊಳಗೆಂ । ದತಿಶಯಾನಂದಾತ್ಮನಾಗಿಹ ।
ಕ್ಷಿತಿಯೊಳಾಗುರುಸೇವೆಗೈವನುಭಕ್ತನೆಂಬವನು ॥ ೨೧ ॥
ನರವಿತಾನವುಕಾಡುತಿರಲಾ । ಕರಣಚಯವದುಪೀಡಿಸುತ್ತಿರೆ ।
ಹೊರಗೊಳಗೆಸರಿಯೆನಿಸಿಲೌಕಿಕಪಾರಮಾರ್ಥದಲಿ ॥
ಪರಮಸಾಂಬನೆತಮ್ಮಪಾದವು । ಧರೆಯೊಳೀಪರಿದೊರೆದಬಳಿಕೀ ।
ದುರಿತಭವಕಿನ್ನಿದಿಸಬ್ಯಾಡೆಂಬುವನುನಿಜಭಕ್ತಾ ॥ ೨೨
ಬರಲಿಬೇಕಾದಷ್ಟುಕಷ್ಟವು । ಬರಲಿಬೇಕಾದಷ್ಟುವಿಘ್ನವು ।
ಬರಲಿಬೇಕಾದಷ್ಟುಚಿಂತೆಗಳೆಲ್ಲಬಳಿವಿಡಿದು ॥
ಬರಲಿಬಾರದ್ದೆಲ್ಲಭುವನದೊ । ಳಿರಲಿಸದ್ಗುರುಧ್ಯಾನಮನದೊಳ ।
ಗಿರಲಿನಿಜಕೃಪೆನಿತ್ಯತನಗೆಂತೆಂಬನಾಭಕುತಾ ॥ ೨೩ ॥
ಆಗುತಿವೆನುಡಿಯಲ್ಲಿತಪ್ಪುಗ । ಳಾಗುತಿವೆನಡೆಯಲ್ಲಿತಪ್ಪುಗ ।
ಳಾಗುತಿವೆಸಂಸಾರದಲಿಬಹುತರದತಪ್ಪುಗಳು ॥
ಬಾಗಿನಿಜಪಾದದಲಿಪರಿಭವ । ನೀಗಿಸುಖಿಸುವೆನೆಂಬೆನೈನಾ ।
ಶ್ರೀಗುರುವೆಕೈವಿಡಿದುನೀಕಡೆಹಾಯಿಸೆನ್ನುವನು ॥ ೨೪ ॥
ಮನಸಿನಿಚ್ಛೆಗೆಹರಿದುವಿಷಯಕೆ । ಮನುಜರಿಳೆಯಲಿಬಳಲುವರುಗಡ ।
ಮನವುಮರ್ಕಟವೆಂಬುದರಿಯರುಮರವಿಮಾನವರು ॥

ಮನಕೆಕೈವಶವಾಗಿಜನವಿದು । ನೆನಹಿಗೊದಗುವಪರಮಗುರುವನು ।
ನೆನೆಯದಲೆಕೆಡುತಿಹುದುಜಗದೊಳಗೆಂದುಚಿಂತಿಪನು ॥ ೨೫ ॥
ಮನವುಸವಿಸವಿಬಯಸುವದುಗಡ । ಮನವುಚಂಡವನೋಡುವದುಗಡ ।
ಮನವುಹರಿದಾಡುವದುಗಡದುರ್ವಿಷಯದೇಳ್ಗೆಯಲಿ ॥
ಜನದಮಾತಿಗೆನಲಿದುಕುಣಿವುದು । ಜನದಸಂಗತಿಗೋಡಿಹೋಹುದು ।
ಮನಸಿನಂದವನಾರುತಿಳಿಯುವರೆಂಬನಾಭಕುತಾ ॥ ೨೬ ॥
ಮನವುಚಂಚಲಮನವುಚಾಪಲ । ಮನವುದುರ್ಧರಮನವುದುಸ್ಥಿರ ।
ಮನವುಕಾಮ್ಯಕಮನವುಮರ್ಕಟಮನವುಕ್ಷುಲ್ಲಕವು ॥
ಮನಸಿಗಾಳುಗಳಾಗಿದುಃಖದ । ಘನತೆಗೇಗುರಿಯಾಗಿಬಳಲುವ ।
ಮನುಜರೇನಪರಾಪರೇಕಲಿಯುಗದಸಂತೆಯಲಿ ॥ ೨೭ ॥
ಹರಿದುಹೋಗುವಮನವೆಛೀಛೀ । ಬರಿದೆಬಯಸುವಮನವೆಥೂಥೂ
ತರತರದಹಂಚಿಕೆಯಹಾಕುವಮನವೆಛೀನಿನಗೆ ॥
ಹರಿದುನೀನೇಂಗಳಿಸಿಕೊಳ್ಳುವೆ । ಹರಿದುನನಗಿನ್ನೇನುಮಾಡುವೆ ।
ಧರೆಯೊಳೆಂದಾಪರಮಭಕ್ತನುನಗ-ವನಾತ್ಮದಲಿ ॥ ೨೮ ॥
ಮನವೆನೀನಾನಲ್ಲಛೀಥೂ । ಮನವೆನಾಸೀನಲ್ಲಥೂಛೀ ।
ಮನವೆನೀನಿಜವಾಗಿಗುರುಪಾದದಲಿಸುಖಿಯಾಗು ॥
ಮನವೆನಿನ್ನನುಕಟ್ಟಕೆಡಹುವ । ಗುರುಫಕೀರೇಶ್ವರನಬಲವೆನ ।
ಗೆನುತಲಾಸದ್ಭಕ್ತನಗುವನುತಾನೆತನ್ನೊಳಗೆ ॥ ೨೯ ॥
ಹರಿಯಚರಣಕೆಹರಿದುಸುಖಿಯಿಸು । ಹರನಪಾದಕೆಹರಿದುಸೊಗಯಿಸು ।
ಸರಸಿಜಾಸನಪಾದದಲಿಹರಿದಾಡಿಮುದವೆರಿಸು ॥
ಪರಮಶಕ್ತಿಯಸನ್ನಿಧಾನಕೆ । ಹರಿದುನೀಮುಗನಾಗಿವಂದಿಸು ।
ಗುರುವಿನಡಿಯಗುಲಾಮನಾಗೆಲೆಮನವೆನೀನೆಂಬ ॥ ೩೦ ॥
ಹಗಣದಲಿಹರಿದಾಡುವದುಮನ , ತಗಲಿನಲಿಕುಣಿದಾಡುವದುಮನ ।
ಬಿಗಿಗೆಮಿಗೆಹಿಂಜರಿವುದೀಮನವೆಲ್ಲವಿಷಯದಲಿ ॥
ಹಗುರವೆಂದೊಡೆಹಾರಿಹೋಹುದು । ಜಗಳಕಾದರೆಕಾಲುದೆಗೆವುದು ।
ಹಗಲಿರುಳುಕಾಡುವದುಮನವೆನಗೆಂಬನಾಭಕುತಾ ॥ ೩೧ ॥

ಅರುವಿನದುನರಜನ್ಮವೆನ್ನುವ । ರರವದಿದರೊಳಗೇನುಬೆಳಗದು ।
ಮರವಿಘಟವಿದಕೇನುಹೊಳೆಯದುಹಿಂದುಮುಂದಿನದು ॥
ಪರಮಮುಕ್ತಿಗೆಮನುಜಜನ್ಮವು । ದೊರಕಿರುವದಿದುಕಡೆಯದಾಗಿಯೆ ।
ಗುರುವೆಪಾಹಿತ್ರಾಹಿನೀಕಡೆಹಾಯಿಸೆನ್ನುವನು ॥ ೩೨ ॥
ಸೊರಗುವದುಸೊಕ್ಕುವದುಮನವಿದು । ಕೊರಗುವದುಕಳೆಗೊಂಬುದೀಮನ ।
ಮರಗುವದುಮುದಗೊಂಬುವದುಮನಹಾಳ್ದತನುವಿನಲಿ ॥
ಅರಿಕೆಯಿಲ್ಲವುಹಿಂದಿನದುಗಡ । ಮರೆತುಬಿಡುವದುಮುಂದಿನದುಗಡ ।
ದುರಳಮನವಿದುಗುರುವೆನೀಗತಿಯೆಂದುನಂಬಿಹನು ॥ ೩೩ ॥
ಗುರುವುಕೊಟ್ಟದ್ದರೊಳುಧರ್ಮವ । ನರವಿನಲಿಮಾಡುವನುನಿತ್ಯದಿ ।
ಪರಿಪರಿಯಸತ್ಕಾರ್ಯದಲಿಮುಂಬರಿದುನಲಿಯುವನು ॥
ಸ್ಮರಿಸುವನುಹೃದಯದಲಿಗುರುವಿನ । ಚರಣವನುದೃಢಭಕ್ತಿಭಾವದೊ ।
ಳಿರುವನಾನಿಜಭಕ್ತನೆಂಬವನೀಜಗತ್ತಿನಲಿ ॥ ೩೪ ॥
ತನ್ನಸದ್ಗತಿಸಾಧಿಸುವದುಳಿ । ದನ್ಯಚಿಂತೆಯಮಾಡುವದುತಾ ।
ನುನ್ನತಿಕೆತನಗಲ್ಲಮಾನುಷಜನ್ಮವಹಿಸಿದಕೆ ॥
ನನ್ನಿಯಿದುಶ್ರುತಿಮತವುಸೌಧಂ । ದೆನ್ನುತಾತನೊಳಗೆಶ್ರೀಗುರು ।
ವನ್ನು ನಂಬಿಯೆಸೇವೆಗೈವನುಭಕ್ತನೆಂಬವನು ॥ ೩೫ ॥
ಭಕ್ತನೆಂಬನುಬಿಡನುಬಾಳ್ವೆಯ । ಭಕ್ತಹೆದರನುಯಾವಕಾಲಕು ।
ಭಕ್ತಹಿಡಿಯನುಹ್ಯಾವಪಂಥವಕುಂದುಕೊರತೆಯನು ॥
ಭಕ್ತಬಿಡನಾತನ್ನಗುರುವನು । ಭಕ್ತಕೇಳನುಪರರಮಾತನು ।
ಭಕ್ತನಾರಿಗುಹೆಮ್ಮೆತೋರನುಬಾಯಮಾತಿನಲಿ ॥ ೩೬ ॥
ಹಿರಿಯರಿಗೆಬಾಗುತ್ತಲಿರುವನು । ಕಿರಿಯರನುಮನ್ನಿಸುತಲಿರುವನು ।
ಗುರುವಸಾಕ್ಷಾದ್ಬ್ರಹ್ಮವೆಂದೇನಂಬಿಕೊಂಡಿಹನು ॥
ದುರಿತಕರ್ಮಕೆಹೋಗದಿರುವನು । ಪರರಿಗೆಂದಿಗುಸಿಲ್ಕದಿರುವನು ।
ಪರಮಭಕ್ತನುಲೋಕದಾಟವನೋಡಿನಗುತಿಹನು ॥ ೩೭ ॥
ಧರೆಯೊಳಾಡುತ್ತಿರುವಸದ್ಗುರು । ಚರಣಕಾಶಿವಶರಣರಂಘ್ರಿಗೆ ।
ಪರಮಮಾಹೇಶ್ವರರಪಾದಕೆಸಾಧುಜನರಡಿಗೆ ॥

ಪರಿಕೆಗೋಸುಗಹೋಗಬಾರದು । ನರರುಹೋದಡೆಕೇಡುತಪ್ಪದು ।
ದರುಶನಕೆಬರಿಗೈಲಿಹೋಗಲುಬಾರದೆಂದೆಂದು ॥ ೩೮ ॥
ದರುಶನದಫಲವನ್ನುಪಡೆಯಲು । ಗುರುವಿನೊಳುಕೃಪೆಪಡೆಯೆತಾಂಮುದ ।
ವೆಸಿಹೋಗಲುಬೇಕುಭಕ್ತ್ಯಾಚಾರಮಾರ್ಗದಲಿ ॥
ಕರವಮುಗಿಯದಶಿರವಬಾಗದ । ಪರಮಭಕ್ತ್ಯಾಚಾರತೋರದ ।
ಲಿರುವಮನುಜರುಭಕ್ತರವರಲ್ಲೆಂಬನಾಭಕುತಾ ॥ ೩೯ ॥
ಸಿರಿರಹಿತಸಂಸಾರವಲಿಸೊರ । ಗಿರುವಭಕ್ತರೆಕಷ್ಟಬಂದರು ।
ಗುರುವನೀವ್‌ಬಿಡಬೇಡಿರೈದೃಢಮಾಡಿರೈಮನವ ॥
ಗುರುವುಮೊದಲಿಗೆಕಷ್ಟಕೊಡುವನು । ಪರಮಸೌಖ್ಯವಕೊಡುವಕಡೆಗಾ ।
ಗುರುಮಹಾತ್ಮನುಕೈಯಬಿಡುವವನಲ್ಲನಿಶ್ಚಯವು ॥ ೪೦ ॥
ಕಡವರವುಬಡವರಿಗಸಿಕ್ಕೊಡೆ । ಬಿಡುವರೇಕಸಕಡ್ಡಿಯನುತಾವ್ ।
ಪಿಡಿವರೇಸಂಸಾರವಿಷಯದೊಳಿಂತುಭಾವಿಸಲು ॥
ಮೃಡಮಹಾತ್ಮನುಗುರುಫಕೀರನು । ಪೊಡವಿಯಲಿಪ್ರತ್ಯಕ್ಷನಾಗಿರೆ ।
ಬಿಡುವರೇನೈಭಕ್ತರೆಂಬವರೆಂಬನಾಭಕುತಾ ॥ ೪೧ ॥
ಎಂದುಸದ್ಗುರುಕರ್ತತನ್ನಾ । ನಂದದಲಿಸದ್ಭಕ್ತನಾಟವ ।
ನಂದದಲಿಬಿಡದೊರೆದುರಾಮನಗುರುತುತಿಳಿಸಲು ॥
ಅಂದುಕೇಳ್ದಾಭಕ್ತಜನರಾ । ನಂದಭರದೊಳಗೆರಗಿಕರ್ತನಿ ।
ಗೆಂದುಕಾಂಬೆವುರಾಮಲೀಲೆಯನೆಂದರೇನೆಂಬೆ ॥ ೪೨ ॥
ಮೆರೆವಶಿರಹಟ್ಟಯಲಿವಾಸಿಪ । ಹಿರಿಯರೇನೀವಿನ್ನುಕೇಳಿರಿ ।
ಗುರುಫಕೀರನುತನ್ನಭಕ್ತರತಿದ್ದಿದಾಬಳಿಕ ॥
ಪರಮರಾಮನದಿವಸವೆಂದಿಗೆ ಬರುವವೋಬೈಲಾಟವೆಂದಿಗೆ ।
ಧರೆಗೆಮೆರೆವುದೊಯೆಂಮಭಕ್ತರುನೋಡಹತ್ತಿದರು ॥ ೪೩ ॥
ಶಿವನಭಕ್ತರೆನೀವುಕೇಳಿರಿ । ಶಿವಸಮೋನ್ನತನೆನಿಪವಾಜ್ಞನು ।
ಕುವರರಾಮನಿಗಾಪ್ತನಾಗಿಯೆತೋರುತಾಡುತಿರೆ ॥
ಬುವಿಗೆಜಂಗಮನಂತೆಶೋಭಿಸು । ತವನುರಾಮನುಗ್ರಾಮದಲಿಮೊ ।
ನವರಿಗಂಜದೆಭಿಕ್ಷೆಬೇಡುವನಾದನನುದಿನವು ॥ ೪೪ ॥

ಇವನುಯಾವದುನೋಡಿಕೊಂಡಿಹ । ನಿವನುಯಾವದುಕಂಡುಹಿಡಿದಿಹ ।
ನಿವನಮತವದುಯಾವದೋಪಥವಾವುದೋವೋಽಣು ॥
ಇವನುಜಂಗಮನಂತೆಯೋಲ್ರೂ । ಪವನುತೋರ್ಪನುಭಿಕ್ಷೆಬೇಡುವ ।
ನಿವನಪರಿಕಿಪುದೆಂದುಕೇಳ್ವರುಕೆಲರುರಾಮನನು ॥ ೪೫ ॥
ಆವನಿಗಮವನರಿಯೆನೈನಾ । ನಾವಶಾಸ್ತ್ರವನರಿಯೆನೈನಾ ।
ನಾವಪೌರಾಣಾದಿಗ್ರಂಥವನರಿಯೆನೈನಾನು ॥
ಭೂವಲಯದಲಿಕರ್ತಸದ್ಗುರು । ದೇವನುರುತರಪಾದದಲಿನಿಜ ।
ಸೇವೆಮೂಡುವದೊಂದೆಗೊತ್ತೆನಗೆಂಬನಾರಾಮೂ ॥ ೪೬ ॥
ಯಾವದುಂಹಿಡಿದಿಲ್ಲಜಗದೊಳ । ಗಾವದುಂಬಿಟ್ಟಿಲ್ಲಲೋಕದೊ ।
ಳಾವಕುಲದವನೇನೊಸಣ್ಣವನಃನುಧೇಶಿಕನು ॥
ನೀವುಕೇಳುವದಾದೊಡೆಮ್ಮಯ । ದೇವಸದ್ಗುರುಕರ್ತನಂಘ್ರಿಯೊ ।
ಳೀವಿಚಾರವತೆಗೆದುಕೇಳಿರಿಯೆಂಬನಾರಾಮೂ ॥ ೪೭ ॥
ಮನೆಮನೆಗೆಭಿಕ್ಷೆಯನುಬೇಡುವ । ಜನಮನದಭಾವವನುತಿಳಿಯುವ ।
ನನುನಯದೆತಿರುಗಾಡಿಬರುವನುಸಿದ್ಧರಾಮೇಶ ॥
ಚಿನುಮಯಾತ್ಮನುಕರ್ತನಾರಾ । ಮನನುಕಂಡತಿಹರುಷಬಡುವನು ।
ದಿನಸವಿೂಪಿಸಿಬಂದವೆಂದಾಡುವನುಭಕ್ತರಲಿ ॥ ೪೮ ॥
ಇವರುಕುಡವಕ್ಕಲಿಗರಾಕುಲ । ದವರುಲೀಲಾಮೂರ್ತಿಗಳುಹಾ ।
ದಿವರಮರಿಗಡರಾವನೆಂಬಸನಾರೆಕೂಡದವನು ॥
ಅವರೊಳಿವನಿಗದಂತೂಕೃಪೆಯು । ದ್ಭವಿಸಿತೋಬಹ.ಜನ್ಮದಾಪು ।
ಣ್ಯವದುಸಿಜವೆಂದಾಡಿಸಂತಸಪಡೆವರ್ಕೆಲರು ॥ ೪೯ ॥
ಅವರಕುಲವದುಬೇರೆಲೋಕದೋ । ಶಿವನಕುಲವಿದುಬೇರೆನೋಡ ।
ಲ್ಕವರಿಗಿವಮರದೇವನೆಂತಾಗುವನೊರೂಢಿಯಲಿ ॥
ಇವಗೆಸಮ್ಮತವಾಗುವದಲೋ । ಕವದುನೋಡಿರಿನೋಡಿರೆಂದಾ ।
ಶಿವಮತರ್ಕಳುನುಡಿವುತಿರುವರುತಮ್ಮತಮ್ಮೊಳಗೆ ॥ ೫೦ ॥
ಇವವಿಭೂತಿಯಧರಿಸಿಕೊಳ್ಳುವ । ನಿವನುರುದ್ರಾಕ್ಷಿಯನುಹಾಕುವ ।
ನಿವನುಜೋಳಿಗೆಹಿಡಿದುಜಂಗಮರಂತೆಬೇಡುವನು ॥

ಶಿವಮತಕೆಕುಂದಲ್ಲವೇನೈ । ಶಿವಮತದೊಳೇನಿಲ್ಲವೇಮರಿ ।
ಶಿವಶಿವಾದೊಡ್ಡವರಮಾತಿನ್ನೇನುಹೇಳುವದು ॥ ೫೧ ॥
ಎಂದುಲಿಂಗಾಯತರುತಮ್ಮೊಳು । ಕುಂದಿಕರ್ತನಿಗಂಜಿಬೈಲಿಗೆ ।
ಬಂದುಮಿಗೆಬಿಟ್ಟಾಡದಿರುವರುಹೇಳಲೇನದನು ॥
ಬಂದರಾಮುಗೆಮಾನಕೊಡುವರು । ಹಿಂದೆನಿಂದಿಸಿನಗುವರದಕಾ ।
ನಂದಪಡುವನುಜ್ಞಾನಿಯಾಶ್ರೀರಾಮುಗುಣಧಾಮಾ ॥ ೫೨ ॥
ಗುರುವಿನೆಡೆಯಲಿಸೇವಿಸುವಕಿಂ । ಕರರೆಕೇಳರಿಸಿದ್ಧರಾಮನು ।
ಪುರದೊಳೆಡೆಯಾಡುತ್ತಲಿರುವನುಭಕ್ತಜನರೊಡನೆ ॥
ಅರರೆಶ್ರೀಮರಿದೇವಬಂದಿಹ । ನೆರಗಿರೈನೀವೆಂದುನಿಂದಕ ।
ರೊರೆವಮಾತದುಕಿವಿಗೆಬೀಳ್ವುದುರಾಮುಪರಿಜನಕೆ ॥ ೫೩ ॥
ಗುರುವೆಕೇಳರಿಕೇಳಿರೆಂದಾ । ಪರಮಭಕ್ತರುಸಿದ್ಧರಾಮಂ ।
ಗೊರೆವರತಿಗುಪ್ತದಲಿಕೀಟಕರೇಳ್ಗೆಯನುಬಿಡದೆ ॥
ದುರುಳರೈಸಲೆಶರಣಮಹಿಮೋ । ತ್ಕರುಷಕಾರಣರವರುನೆರೆಯೊಳ ।
ಗಿರಲುಬೇಕುಪಕಾರಿಗಳುನಮಗೆಂಬನಾರಾಮಾ ॥ ೫೪ ॥
ನರರುಮಾನವಕೊಡುವದೇನದು । ನರರುಮಾನವಕಳೆವುದೇನದು ।
ನರರುಮಾಡುವದೇನುಕ್ಷಣಭಂಗುರರುಭುವನದಲಿ ॥
ಗುರುಸಮರ್ಥನುನಮ್ಮಕರ್ತನು । ಕರವಿಡಿದುಕಡೆಹಾಯಿಸುವನೈ ।
ಗುರುವನಂಬಿರಿಯೆಂದುರಾಮನುಪೇಳ್ವನಾಪ್ತರಿಗೆ ॥ ೫೫ ॥
ಧರೆಯೊಳುತ್ಕಟಧೀರನಾಗಲಿ । ಧರೆಯೊಳನುಪಮವೀರನಾಗಲಿ ।
ಧರೆಯೊಳಾವನುಮಾದೊಡಾಗಲಿಭೂಪನಾಗಿರಲಿ ॥
ಪರಮಸದ್ಗುರುಭಕ್ತರನುಧಿ । ಕ್ಕರಿಪನಾವನುಮಾದೊಡಾಗಲಿ ।
ಗುರುಫಕೀರೇಶ್ವರನುಬಿಡದಾತಂಗೆದಂಡಿಪನು ॥ ೫೬ ॥
ಸವರುವನುದುರ್ಜನರತತಿಯನು । ಸವರುವನುನಿಂದಕರಕುಲವನು ।
ಸವರುವನುಭೂಭಾರಕರನುರೆನಮ್ಮಪ್ರಭುರಾಯ ॥
ಭುವನದಲಿಭಕ್ತರನುಸಲೆಸಲ । ಹುವನುಕೈವಿಡಿದಿನ್ನುನಿಮಗಾ।
ಜವನಭೀತಿಯದಿಲ್ಲತಿಳಿಯಿರಿಯೆಂಬನಾರಾಮಾ ॥ ೫೭ ॥

ತರತರದಕಾವ್ಯದಲಿಬರುತಿಹ । ನರತತಿಗೆಸಂಪದದಬೋಧಿಯ ।
ನಿರದೆತತ್ತ್ವದಭಕ್ತರಿಗೆತಾಂಕೊಡುವನಾಕರ್ತಾ ॥
ತ್ವರದೊಳವರವರಂತೆಕಾವ್ಯವು । ಕೊರತೆಯಿಲ್ಲದೆಕೈಗೆಸೇರಿರೆ ।
ಹರುಷದಿಂದವರೆಲ್ಲಬರುವರುಕರ್ತನಡಿಗಳಿಗೆ ॥ ೭೧ ॥
ಗುರುವೆಸ್ವಾಮಿಯೆಸಾಂಬನೇನಿಜ । ಕರುಣದಿಂಕೈಗೂಡಿತೆಲ್ಲವು ।
ನರನೆನೀನರನಾಟಕನುಜಗದೈಯ್ಯಗುರುರಾಯಾ ॥
ಚರಣಕಮಲಕೆಭಕ್ತಿಮುಟ್ಟಲಿ । ಕರುಣವಿರಲೈಯೆಂದುಭಕ್ತರು ।
ಕರವಮುಗಿದುರೆಬಾಗಿಭಕ್ತಿಯನೀಡುತಿಹರರರೆ ॥ ೭೨ ॥
ವರಶಿರಃಪುರದಲ್ಲಿಶೋಭಿಪ । ಸಿರಿಗರೇನೀವ್‌ಕೇಳಿರೈಗುರು ।
ವರಫಕೀರೇಶ್ವರನುಪ್ರತಿದಿನತೊಳಗುತಾಡುತಿರೆ ॥
ಪುರದಕ್ರಿಮಿಕೀಟಕರುನಿಂದಕರಿರದಲಾಶ್ರೀಸಿದ್ಧರಾಮಗೆ ।
ಜರಿವುತಿರುವರುಕಾಡುತಿರುವರುಗುಪ್ತಭಕ್ತರನು ॥ ೭೩ ॥
ಎಂದುದುರ್ಜನರಡಗಿಹೋಗುವ । ರೆಂದುನಿಂದಕರಡಗಿಹೋಗುವ ।
ರೆಂದುವಾದಿಗಳಡಗಿಹೋಗುವರಕಟಲೋಕದಲಿ ॥
ಎಂದುರಾಮನಲೀಲೆಗಾಣುವೆ । ವೆಂದುಶ್ರೀಗುರುಬೈಲಿಗಾಹುವ ।
ನೆಂದುಭಕ್ತರುಚಿಂತೆಗೈಯುವರಾದರಡಿಗಡಿಗೆ ॥ ೭೪ ॥
ಬಂದಿಹನುಪ್ರಭುದೇವನೆಂದೇ । ಬಂದಿಹನುಶ್ರೀಬಸವನೆಂದೇ ।
ಬಂದುದಿನದಿನಗುಪ್ತದಲಿಗುರುಪಾದಪೂಜಿಪರು ॥
ಹೊಂದಿಸೇವೆಯಮಾಡುತಿರುವರು । ಬಂದಜನಕುಪಚಾರನೊಳ್ಪರು ।
ಹಂದಿಗಳುಸುಳಿದಾಡಿದರೆತಾವ್‌ಸುಮ್ಮನಿರುತಿಹರು ॥ ೭೫ ॥
ಕುರುಹುತಿಳಿಯರುಗುರುತುಹಿಡಿಯರು । ಮರವಿಮನುಜರುದುಷ್ಟರಾಗಿಯೆ ।
ಗುರುವಿಗಂಜದೆಯಮನಿಗಂಜದೆಬೊಗಳುತಿಹರಕಟಾ ॥
ಹರನದಿವಸವುಬರುವದೆಂದಿಗೊ । ದುರುಳರಡಗುವದೆಂದೊಯೆನುತಲಿ ॥
ಗುರುಸುಭಕ್ತರುಕರ್ತನಿಗೆಪ್ರಾರ್ಥಿಸುವರಡಿಗಡಿಗೆ ॥ ೭೬ ॥
ಹಿಡಿದಭಕ್ತರುನಿತ್ಯನಲಿವುತ । ಬಿಡದೆಗುರುಸೇವೆಯನುಮಾಡು ।
ತ್ತಡಿಗಡಿಗೆಧ್ಯಾನಿಸುತೆಕರ್ತನಪಾದಕೆರಗುತಲಿ ॥

ನಡೆದುಕೊಂಬರುರಾಮನಾಟವ । ಸಡಗರವುತವಮಗೆಂದುಕಾಂಬುದೊ ।
ಪೊಡವಿಯೊಳಗಿಂತೆಂದುವೊರೆಯಿಡುತಿಹರುಪಾಚಕ್ಕನಿಗೆ ॥ ೭೭ ॥
ನಗುತಸದ್ಗುರುಸಾಂಬಮೂರ್ತಿಯು । ಬಗೆದುತನ್ನೊಳೆತಾನುಭಕ್ತರ ।
ಬಗೆಗೆವಿಗೆನಲಿದಾಡುತೆಂದನುಗುಪ್ತಭಕ್ತರಲಿ ॥
ಜಗದಕಾರಣಪುರುಷರಾಮನು । ಸಗುಣರೂಪಂಗೊಂಡುಬಂದಿಹ ।
ಜಗದೊಳಾಡುವನಾತನಾಟವನೋಡಿರಿನ್ನೆಂದ ॥ ೭೮ ॥
ಪರಮಭಕ್ತರೆಬಳಲದಿರಿನೀವ್ । ಹರನಗುರುವಿನದಿವಸಬಂದಿವೆ ।
ಭರದಿಜೈಲಿಗೆಬರುವನೀವುರಿದೇವನೆಂಬವನು ॥
ಪರಕೆಪರತರವಸ್ತುರಾಮನು । ದುರುಜನಕೆನರಸಿಂಹನೆನಿಪನು ।
ಸೊರಗದಿರಿಗುರುಚಿಂತೆಯುಲಿನೀವೆಂದನಾಪಾಚ್ಛಾ ॥ ೭೯ ॥
ಸಾಗಿಪನುದಾಸೋಗವನುಚೆ । ನ್ನಾಗಿತೋರುವನಾತ್ಮಲೀಲೆಯ ।
ನಾಗಿಸುವನತಿಮಹಿಮೆಯನುಮುಟ್ಟುವನುನಿಂದಕರ ॥
ಬಾಗಿಪನುಭೂಪರನುಸಲೆತಲೆ । ದೂಗಿಪನುಯೋಗಿಗಳನೀಶಿವ ।
ಯೋಗಿರಾಮನುಭೀತಿನಿಮಗೇಕೆಂದನಾಕರ್ತಾ ॥ ೮೦ ॥
ಅಂದಿಗಾಸದ್ಭಕ್ತಜನರೆಂ । ತೆಂದುಕರ್ತನುಹೇಳ್ದುಗುಪ್ತವ ।
ನಂದದಿಂದರುಹಿಸಲುಹಾವೂದೇವಗತಿಯೆನುತ ॥
ನಿಂದುಹರುಷಿತರಾಗಿತಾವಭಿ । ವಂದಿಸಿದರಾಮೂಲಪಾಚ್ಛಗೆ ।
ಬಂದುರಾಮಂಗೆರಗಿದರುಭಯಭಕ್ತಿಭಾವದಲಿ ॥ ೮೧ ॥
ಇಂತುಸಂತಸಬಟ್ಟುಭಕ್ತರು । ಚಿಂತೆದೊರೆದಾವ್‌ಧನ್ಯರೆನ್ನುತೆ ।
ನಿಂತುಗುರುಸೇವೆಯನುಮಾಡುತ್ತಿರಲುನಿತ್ಯದಲಿ ॥
ಕಂತುಹರಗುರುಶ್ರೀಫಕೀರನು । ಶಾಂತಸದ್ಗುರುವೆನಿಸಿಕುಜನರಿ ।
ಗಂತಕನವ್ರೋಲ್‌ತೋರಹತ್ತಿದನುಗ್ರಲೀಲೆಯಲಿ ॥ ೮೨ ॥
ಬಂದುದಿನದೊಳುಕರ್ತತನ್ನಾ । ನಂದಭರದಲಿಸಿದ್ಧರಾಮನ ।
ಮುಂದೆನೀಬಾರೆಂದುನುಡಿದನುಬಹಳಗುಪ್ತದಲಿ ॥
ಬಂದಕಾರಣಕಾರ್ಯವನುಮರೆ । ದಿಂದುಸುಮ್ಮನೆಕೂಡ್ರಬಹುದೇ ।
ಕಂದಮುಂದಣಕಾರ್ಯನಿನ್ನದುನೀನೆನಡಿಸೆಂದ ॥ ೮೩ ॥

ಗುರುಮಹಾರಾಜಾಧಿರಾಜನೆ । ಗುರುಮಹಾಪ್ರಭುದೇವದೇವನೆ ।
ಚರಣಕಮಲಾರ್ಪಿತವುಸಕಲವುನನ್ನದೆಂಬುವದು ॥
ಅರಿಯಲೇನೇನಿಲ್ಲನನ್ನೊಳ । ಹೊರಗೆನೀನೇಯೆಂದುರಾಮನು ।
ಪರಮಕರ್ತನಪಾದದಲಿಚಾಚಿದನುನಿಜಶಿರವ ॥ ೮೪ ॥
ನರರೊಳಗೆಕೀಟಕರುಕಾಟಕ । ರಿರುವರಾಲುಚ್ಚೇರುನೀಚರು ।
ಮಿರುವರಾಕೊಂಡೇರುಭಂಡರುಯಿರುವರಕಟಕಟ ॥
ಇರುವರಾಕುಲಛಲರುಖುಲ್ಲರು । ಮಿರುವರಾಚೇಷ್ಟಿಗರುಭ್ರಷ್ಟರು ।
ಮಿರುವರಾಡಾಂಭಿಕರುಹುಂಬರುಭಕ್ತರಪರಾಪ ॥ ೮೫ ॥
ಧರಣಿಯಲಿಗುರುವೆನಿಸಿಮೆರೆವುದು । ಬಿರುದುಕೈಕೊಳ್ಳುವದುಬಲುಬಿಗಿ ।
ಮರವಿಜನರೊಳಗಾಡಿಕೆಡುವರುಗುರುಗಳೆಂಬವರು ॥
ನರರುತಮ್ಮೊಳಗೆಳೆವುತಿರುವರು । ಪರಿಕಿಸುತ್ತಿರುತಿಹಳುದೇವಿಯು ।
ಗುರುವೆತಾತನೆನೀನೆಹೊರಗೊಳಗಾಡಿಸುವದೆನಗೆ ॥ ೮೬ ॥
ಎನುತಲಾಶ್ರೀಸಿದ್ಧರಾಮನು । ಜನನಮರಣಾದ್ಯಂತರಹಿತನ ।
ಘನದಿಗಂಬರಪಾಚ್ಛನಡಿದಾವರೆಯುಪ್ರಾರ್ಥಿಸಲು ॥
ಮನಕೆಸಂಶಯವೇಕಬಿಡುನೀ । ಮನುಜನೇಗುರುಕುವರಬೆಳಗೈ ।
ಜನರಜವನಾಭೀತಿನಿನಗಿಲ್ಲೆಂದನಾಕರ್ತಾ ॥ ೮೭ ॥
ಧೀರಗುರುಗಳೆನೀವುಕೇಳಿರಿ । ವೀರಶಿಷ್ಯರೆಕೇಳಿರಾಕ ।
ರ್ತಾರನಾಮರಿಗಂದುಪದೆದಮರ್ದಪ್ಪಿಪ್ರೇಮದಲಿ ॥
ಯಾರುಕೇಳುವದೇನುಜಗದೊಳ । ಗಾರುನೋಡುವದೇನುನಿನಗಿ ।
ನ್ನಾರುಮಾಡುವದೇನುಬೈಲಿಗೆಬೀಳುನೀನೆಂದಾ ॥ ೮೮ ॥
ಕಾರಭಾರಿಗಳೆಲ್ಲಕೇಳಿರಿ । ಶೂರರಾಜರೆಲಾಲಿಸಿರಿಮಾ ।
ರಾರಿಕರ್ತನುಸಿದ್ಧರಾಮನನೋಡಿನಲಿದಾಡಿ ॥
ಮಾರಮರ್ದನನಾಗಿಮಾಯೆಗೆ ॥ ಮಾರಿನಡೆವವನಾಗಿನೀನೀ ।
ಧಾರುಣೀಹಿತಕಾಡುಬೈಲಿಗೆಬೆಳಗುನೀನೆಂದ ॥ ೮೯ ॥
ನರರೊಳಡಗಿಹೆಗುರುವಿನಂಘ್ರಿಯೊ । ಳಿರುವಭಕ್ತರೆಕೇಳಿರೈನೀವ್ ।
ಗುರುಫಕೀರೇಶ್ವರನುರಾಮಂಗೇನೊಬೋಧಿಸುತೆ ॥

ನಿರುತದಾಸೋಗವನುಸಾಗಿಸು । ಧರೆಯೊಳೆಂದಭಯವನುಕೊಟ್ಟಾ ।
ಮರಿಯಬೈಲಿಗೆತೆಗೆದುಬಿಟ್ಟನುತನ್ನಸೂತ್ರದಲಿ ॥ ೬೦ ॥
ಗುರುದಿಗಂಬರದತ್ತಕರ್ತನ । ಮರಿಯೆನಿಪಶ್ರೀಸಿದ್ಧರಾಮನು ।
ಭರದಿಬೈಲಿಗೆಬಿದ್ದುಲೀಲೆಯನಾಡಹತ್ತಿರಲು ॥
ನರಜನಕೆಬಲುಗಾದಬಿದ್ದುದು । ಸುರರುಹೂಮಳೆಗರೆದರೈಸಲೆ ।
ಹರಿಹರಾಬ್ಜಜದೇವಿನಲಿದಾಡಿದರುತಮ್ಮೊಳಗೆ ॥ ೬೧ ॥
ಕೇಳಿರೈಗುರುಭಕ್ತರೆಲ್ಲರು । ಕಾಲಕಾಲನಜಗದಕರ್ತನ ।
ಲೀಲೆಯುಲಿಶ್ರೀಸಿದ್ಧರಾಮನುತೊಳಗುತಾಡುತಿರೆ ॥
ಫಾಲನಯನನಪಾದಸೇವಾ । ಲೋಲರಾಗಿಹಗುಪ್ತಭಕ್ತರು ।
ಕಾಲಕಾಲಕೆಸುಖಿಸಹತ್ತಿದರಾತ್ಮಹರುಷದಲಿ ॥ ೬೨ ॥
ನಗುವನೈವೆಣ್ಗಳನುನೋಡು । ತ್ರೊಗೆವನೈಕಲ್ಗಳನುಕೂಡಲೆ ।
ತೆಗೆವನೈಕದನವನುರಾಮನುನೆವನೆವಂಗಳಲಿ ॥
ಜಗದಮೊಯಾಸತಿಯಸೊಬಗಿಗೆ । ಸಿಗದಲಾಗುರುಸಿದ್ಧರಾಮನು ।
ನಗರದಬಲಾಜನಕೆಕಾಡುವನಾದನನುದಿನವು ॥ ೬೩ ॥
ಪುರದೊಳತಿಭರದಲ್ಲಿಚರಿಸುವ । ನರರಕಣ್ಣಿಗೆಬೀಳ್ವನುಡಿಸುವ ।
ತಿರುಗುವನುಮನೆಮನೆಗೆಸೊಬಗಿನನಾರಿಯುರನೆಳೆವ ॥
ತರತರದಹುಡುಗಾಟನಡಿಸುವ । ನಿರದೆಕೇಕಿಯಹೊಡೆವನಾಗಳೆ ।
ನೆರವಿಯಲಿಸಿಗದೋಡಿಬರುವನುರಾಮನಿಷ್ಕಾಮ ॥ ೬೪ ॥
ಮೃಡಮಹಾತ್ಮನಮಗನುರಾಮನು । ಬಿಡದೆಪುರದೊಳಗೆಲ್ಲಕಡೆಯಲಿ ।
ನಡಿಸಿದಾಬೊಬ್ಬಾಟಕಾಜನರೆಲ್ಲಕೋಪದಲಿ ॥
ಹಿಡಿಯಹೋಗಲುಮಾಯವಾಗುವ । ಹೊಡೆಯಹೋಗಲುಮಾಯವಾಗುವ ।
ಕಡಿಯಹೋಗಲುಮಾಯವಾಗುವಪಾಚ್ಛನಾರಾಮಾ ॥ ೬೫ ॥
ನೀನುಹೆಂಡತಿನೀನುತಾಯಿಯು । ನೀನುತಂಗಿಯುಮಕ್ಕನೀನೌ ।
ನೀನುಮಗಳೌನೀನುಲೋಕದೊಳತ್ತೆಸೊಸೆನೀನು ॥
ನೀನೆಸರ್ವವುಮೆಂದುಬಿಡದನು । ಮಾನವಿಲ್ಲದೆಹೊಡೆದುಕೇಕಿಯ ।
ಮಾನಿನೀಜನಕಾಡಿಕಾಡುವನಾದನಾರಾಮಾ ॥ ೬೬ ॥

ತರುಣಿಯರತರುಬುವನುಚುಂಬನ । ಪೆಸಸುವನುನಗೆಯಾಡುವನುಮುಂ ।
ಗುರುಳಜಗುಗ್ಗವನಲ್ಲಿಯೇಲೀಲಾವಿನೋದದಲಿ ॥
ಸೆರಗುಹಿಡಿದೆಳೆಯುವನುಸೀರಿಯ । ಸಿರಿಯಮೇಲಕ್ಕೆತ್ತುವನುಸ ।
ತ್ವರದಿಮೊಲೆಯನುಹಿಡಿವನುಂಬನುರಾಮಗುಣಧಾಮೂ ॥ ೯೭ ॥
ಹರಕನಾಗುವಮುರಕನಾಗುವ । ಕುರುಬನಾಗುವಕೊರವನಾಗುವ ।
ತಿರುಕನಾಗುವಜೋಗಿಯಾಗುವಹೊಗುವಮನೆಗಳಲಿ ॥
ಹರದನಾಗುವವಿಪ್ರನಾಗುವ । ಪರಮಜಂಗಮನಾಗುವನುತಾ ।
ನರರೆತೋರ್ದಡಗುವನುಶ್ರೀಮುಧಿಪಾಚ್ಛನಾರಾವೂ ॥ ೯೮ ॥
ಊರೊಳೆಲ್ಲೆಡೆಯಲ್ಲಿರಾಮನು । ಸೇರಿನಡಿಸಿದಮೂಯದಾಟಕೆ ।
ಸೈರಿಸದೆಜನಕರ್ತನಡಿಯಲಿಮೊರೆಯನಿಡುತಿಹುದು ॥
ಧೀರನಿರುವನುತಮ್ಮಶಿಷ್ಯನು । ನಾರಿಯರಮೂನವನುಕಳೆವನು ।
ಮೀರಿನಡೆವನುಗುರುವೆಚಿತ್ತೈಸೆಂಬುದಾಜನವು ॥ ೯೯ ॥
ನೆರೆದುಪುರದಲಿಹಿರಿಯರೆಲ್ಲರು । ಗುರುದಿಗಂಬರಪಾಚ್ಛನಡಿಗಳಿ ।
ಗೆರಗುವರುಕೈಮುಗಿದುಪ್ರಾರ್ಥನೆಗೈವರೊರೆದೊರೆದು ॥
ಗುರುವೆನಿಜಮರಿದೇವರಾಟವ । ನೊರೆವುದಾಗದುತಮ್ಮಪಾದ ।
ಕ್ಕರವದೆಲ್ಲವುಬಾಳ್ವಗೆಡರಾಯ್ತೆಂಬರೇವೇಳ್ವೆ ॥ ೧೦೦ ॥
ನೀವುಬಿಗಿಮಾಡುವದುಮಾಡಿರಿ । ನೀವು ನಡಿಸುವದೆಲ್ಲನಡಿಸಿರಿ ।
ನೀವುಸಂಶಯಗೊಳ್ಳಬೇಡಿರಿಯಾವದಕ್ಕೇನು ॥
ನೀವುಮಾಡುವದೆಲ್ಲಮಾಡಿರಿ । ನೀವುನಮಗೇನಂಜಬೇಡಿರಿ ।
ನೀವುಚಿಂತಿಸಬೇಡಿರೆಂಬನುಗುರುಫಕೀರೇಶ ॥ ೧೦೧ ॥
ಹಿಡಿದುಹಾಕಿರಿಕಟ್ಟಿಹಾಕಿರಿ । ಹೊಡೆದುಹಾಕಿರಿಹಿಡಿದುತನ್ನಿರಿ ।
ಬಿಡದಲಾತಗೆಶೀಕ್ಷೆಮಾಡುವದೆಲ್ಲರುಂಕೂಡಿ ॥
ಕಡೆಗೆಕೇಳದಲಿದ್ದರವನನು । ಕಡಿದುಹಾಕಿರಿದೋಷವಿಲ್ಲವು ।
ಬಿಡಿರಿನಾವಿದಕೇಕೆಸೊರಗುವದೆಂಬನಾಕರ್ತಾ ॥ ೧೦೨ ॥
ಇನ್ನುಮರಿಗುರೆಸಿಟ್ಟುಮಾಡುವೆ । ವಿನ್ನುಮರಿಗಾಂಬುದ್ಧಿಹೇಳುವೆ ।
ವಿನ್ನುಬಿಗಿಮಾಡುವೆವುನಾವಾಸಿದ್ಧರಾಮನಿಗೆ ॥

ಇನ್ನುಚಿಂತಿಸಬೇಡಿರೈನೀ । ವಿನ್ನುನಿಮ್ಮಯಬಾಳ್ವೆಮಾಡಿರಿ ।
ಯೆನ್ನುತವರನುಕಳಿಸಿಕೊಡುವನು ಗುರುನಿರಂಜನನು ॥ ೧೦೩ ॥
ಎಷ್ಟುಹೇಳಿದರೇನುತಾನಿವ । ಗೆಷ್ಟುಮಾತ್ರವುತಿಳಿಯಲೊಲ್ಲದು ।
ಕ್ಲಿಷ್ಟಮತಿಗಳುಬೋಧಕೊಟ್ಟವರಾರೊತಿಳಿಯದದು ॥
ದುಷ್ಟತನವೆಲ್ಲಿಂದಬಂದುದೊ । ಕಷ್ಟವಾಯ್ತುಕಟಕಟನಿಮಗಿವ ।
ನಿಷ್ಟನೆನಿಪನುಹೋಗಿರೆಂಬನುಗುರುಮಹಾತ್ಮಕನು ॥ ೧೦೪ ॥
ಮಾತುಮೀರುವನಲ್ಲನಮ್ಮವ । ನೀತಘಾತಕನಲ್ಲಸ್ತ್ರೀಯರಿ ।
ಗಾತುನಿಲ್ಲುವನಲ್ಲಸಿಲುಕುವನಲ್ಲಮಾಯದಲಿ ॥
ಏತಕಿಂತಾಡುವನೊಲೋಕದೊ । ಳಾತನಿಗೆಶಿವಮಂತ್ರತಂತ್ರದ ।
ನೀತಿಗಿರಸುವೆನೆಂದುನುಡಿವನುಗುರುದಿಗಂಬರನು ॥ ೧೦೫ ॥
ಇವಗೆಹೇಳುವದೆಲ್ಲಹೇಳಿಹೆ । ನಿವಗೆತಿಳಿಸುವದೆಲ್ಲತಿಳಿಸಿಹೆ ।
ನಿವನುಮಹಿಮಾಪುರುಷನೆಂಬಂತೆಮಗೆತೋರುವದು ॥
ಇವಗೆನಾನೇಹೆದರಿನಡೆಯುವೆ । ನಿವನುಲೀಲಾಮೂರ್ತಿಸದ್ಗುರು ।
ವಿವನಿಗೆಲ್ಲರುಭಕ್ತರಾಗಿರಿಯೆಂಬನಾವಾಚಾಳ ॥ ೧೦೬ ॥
ನನಗೆಮರಿಯೆಂದೆನಿಸಿರಾಮನು । ನನಗೆಸೇವಿಸಿನನಗೆಪೂಜಿಸಿ ।
ನನಗೆತಾಬಿಡದೊಲಿಸಿಗುರುವಿಗೆಮುಟ್ಟಿಗುರುವಾದ ॥
ನನಗೆಮೀರಿಯೆನಡೆವನಾತನೊ । ಳಿರುವೆನಾನೇತಿಳಿದುಕೊಳ್ಳಿರಿ ।
ಗುರುವುನಿಮಗವನೆಂದುಹೇಳ್ವನುಕರ್ತನೆಲ್ಲರಿಗೆ ॥ ೧೦೭ ॥
ಹೋಗುವನುಪುರದಲ್ಲಿರಾಮನು । ಬಾಗಿದವರಿಗೆಹರಸುವನುಮಿಗೆ ।
ಬಾಗದವರಿಗೆಬಾಗಿಸುವನಾತ್ಮೀಯತಂತ್ರದಲಿ ॥
ಕಾಗೆಗೂಗೆಗಳೆನಿಸಿಲೋಭಿಗ । ಳಾಗಿಮೆರೆವರನೋಡಿನಗುವನು ।
ಹೋಗಿಕೂಡ್ರುವನಾಪ್ತಭಕ್ತರಸಕಲಗೃಹಗಳಲಿ ॥ ೧೦೮ ॥
ಹಾರುವವುಕಣ್ಣಿಂದೆಕಿಡಿಗಳು । ಹಾರುವವುನುಡಿಯೊಡನೆಕಿಡಿಗಳು ।
ಹಾರುವವುಧಗಿಧಗಿಪಕಿಡಿಗಳುಪಾದದೆಡೆಗಳಲಿ ॥
ಹಾರುವವುನಗೆಯೊಡನೆಕಿಡಿಗಳು । ತೋರುತೀಪರಿತೋರದಾಡುತೆ ।
ಯಾರಿಗುಂಮೈಗೊಡದಲಾಡುತ್ತಿರುವನಾರಾಮಾ ॥ ೧೦೯ ॥

ತಿಂದುನಗುವನುಸೂಜಿಡಬ್ಬಣ । ತಿಂದುನಗುವನುಕಾಜುಬಳೆಯನು ।
ತಿಂದುನಗುವನುಹರಳುಕಲ್ಲನುಪಾಷ್ಟನಾರಾವೂ ॥
ಮಂದಿಗಾಬರಿಯಾಗಿಸೋಜಿಗ । ಹೊಂದಿಸರಿಯಲುಸಿದ್ಧರಾಮನು ।
ನಿಂದುಬಾಯ್ದೆರೆದಗ್ನಿತೋರುತೆತೊಳಗುತಾಡುವನು ॥ ೧೧೦ ॥
ಪರಮಧಾಮನುಬಿಡದಲಾಪರಿ । ಪುರದೊಳಾಡುತೆಕುರುಹುದೋರುತೆ ।
ಧರೆಗಿದಚ್ಚರಿಯೆನಿಸುತಿರುವನುದಿವಸದಿವಸದಲಿ ॥
ಪುರದಸಾತ್ವಿಕಜನರುತವ್ಮೊಳು । ಶರಣರಾಟವಿದೆಂದುತಿಳಿದುರೆ ।
ಹರುಷಬಡುವರುಭಕ್ತಿಯಲಿಬಾಗುವರುರಾಮನಿಗೆ ॥ ೧೧೧ ॥
ಬಹಳಕುರುಹನುತೋರುತಾಡುತೆ । ಬಹಳಲೀಲೆಗಳಲ್ಲಿಹೊಳೆಯುತೆ ।
ಬಹಳರೂಪದೆತೋರಿಹೇಳುತೆಸಿದ್ಧರಾಮೇಶ ॥
ವಿಹಿತಭಕ್ತ್ಯಾಚಾರವನುತಾ । ಸಹಜವಾಗಿಯೆಹೋಗಿಪುಟ್ಟಿಸು ।
ತಿಹನುಪ್ರತಿದಿವಸದಲಿನಾನಾಕುಲದಮನೆಗಳಲಿ ॥ ೧೧೨ ॥
ಬಂದಜನಕತಿಹರುಷದಿಂದಲೆ । ನಿಂದುತೃಪ್ತಿಯಪಡಿಪನನ್ನದೆ ।
ಮಂದಹಾಸದೊಳೆಲ್ಲರಾಸುಕ್ಷೇಮಕೇಳುವನು ॥
ಬಂದುದಕ್ಕೇನಂಜಬೇಡಿರಿ । ಮುಂದೆನಿಮಗೇಮಹಿಮೆತಿಳಿಯುವ ।
ದೆಂದುರಾಮನು ಕಳಸುವನುಗುರುನಾಥನಡಿಗಳಿಗೆ ॥ ೧೧೩ ॥
ಹರಿಯಭಕ್ತರೆಕೇಳಿರೈಗುರು । ವರನುಬಂದಾಸರ್ವಭಕ್ತರಿ ।
ಗೊರೆವುತಿರುವನುರಾಮನುರುಲೀಲಾಮಹತ್ವವನು ॥
ಪರಮಮಂಗಲಮೂರ್ತಿಗಡನರ । ಹರಿಯುತಾನಿವನೆನಗೆಮರಿಯೆನಿ ।
ಸಿರುವನಾತನನಂಬಿಕೊಳ್ಳಿರಿಯೆಂಬನಾಕರ್ತಾ ॥ ೧೧೪ ॥
ಸೋಮಭಕ್ತರೆಕೇಳಿರಾಗುರು । ಮೈಮೆಯನುಮುಂದಿನ್ನುಶ್ರೀಗುರು ।
ಸ್ವಾಮಿಕರ್ತನುರಾಮಗಿಂತಾಡಿಸುತೆಬೆಳಗುತಿರೆ ॥
ಕಾಮಹರಪಥದಲ್ಲಿನಿಂತಾ । ರಾಮಪಗಲಿರುಳಲ್ಲಿಭಾಸ್ಕರ ।
ಸೋಮತೇಜದೊಳೆಸೆವನಾದನುಜನದಕಣ್ಮನಕೆ ॥ ೧೧೫ ॥
ಅವರಿವನಘನಸೂತ್ರಪೊಂದಿಹು । ದವರಿವನನಿಜಲೀಲೆಯೊಂದಿಹು ।
ದವರಿವನಶಿವಕಳೆಯುಮೊಂದಿಹುದಂತರಂಗದಲಿ ॥

ಅವರುಶ್ರೀಗುರುವೆನಿಸಿತೊಳಗುವ । ಶಿವನುಮರಿಯೆಂದೆನಿಸಿಬೆಳಗುವ ।
ರವರಿವನುಮುಂದೇನುಮಾಳ್ಪರೊಯೆಂಬುದೈಜನವು ॥ ೧೧೬ ॥
ಕುಲದಮಾತೇನಿಲ್ಲವಿವನೊಳು । ಛಲದಮಾತೇನಿಲ್ಲಮಹಿಮೋ ।
ಜ್ವಲಿತಮುನಿಕುಲಮೌಳಿಯೆಂದದೊಳೊಪ್ಪುವನುರಾಮ ॥
ತಿಳಿಯದೀತನಮಹಿಮೆಯದುಪೊಸ । ತಿಳೆಗೆಪೌರಾಣದಲಿಕೇಳುವ ।
ಸರಸಲೀಲೆಯೆಕಣ್ಗೆಕಾಣುವದೆಂಬರೈಜನರು ॥ ೧೧೭ ॥
ಇಲ್ಲನಿಂದಕಜನರಸಂಭ್ರಮ । ವಿಲ್ಲಖೂಳರಕೆಲಸವೆಂದೆನ ।
ಲಿಲ್ಲಪುಂಡರಚೋರಜಾರರಸುಳಿವುಸುದ್ದಿಗಳು ॥
ಇಲ್ಲದೆವ್ವಪಿಶಾಚಿಬಾಧೆಗ । ಳಿಲ್ಲಸಿಡುಗುಗಳಾವುವೆಂದೆನ ।
ಲಲ್ಲಮನಶಿರಹಟ್ಟಿಶೋಭಿಪುದಾಯ್ತುಶಿವಸುಖದೆ ॥ ೧೧೮ ॥
ಹಿಂದೆಕಲ್ಯಾಣದಲಿಬಂದಾ । ನಂದಿಕೇಶನುಶರಣರೊಂದಿಗೆ ।
ನಿಂದುತೋರಿದಲೀಲೆಮಹಿಮೆಗಳೆಲ್ಲವೀಜಗಕೆ ॥
ಇಂದಿಗಾವ್ಕಣ್ಣಾರೆಕಾಣುವೆ । ವೆಂದುನುಡಿಯುವಜನರಶಬ್ದಗ ।
ಳಿಂದೆರಂಜಿಪುದಾಯ್ತುಪಾಚ್ಛನವರಶಿರಃಪುರವು ॥ ೧೧೯ ॥
ಗುರುಫಕೀರೇಶ್ವರನುರಾಮೇ । ಶ್ವರನುನಿತ್ಯದೊಳಾಡುತಿಹಭೀ ।
ಕರಸುಲೀಲಾಮಾತ್ರಕಾಪುರಜನವುಗದ್ಗಮಿಸೆ ॥
ಗುರುವೆಗುರುವೇಗುರುವೆನೀಗತಿ । ಕರುಣಿಸುರಕ್ಷಮಿಸೆಂದುನೆನೆವರ ।
ಮೊರೆಯನುಡಿಗೆಡೆಯಾಗಿಶಿರಹಟ್ಟಿಯದುಸೊಗಯಿಸಿತು ॥ ೧೨೦ ॥
ಧರೆಯೊಳಿಂದಿಗುಬಿಡದೆಸುಲಭದಿ । ಕರವಿಡಿದುಕಡೆಹಾಯಿಸುವಶ್ರೀ ।
ಪರಮಗುರುವಿಗೆಯೋಗ್ಯಶಿಷ್ಯನುಸಿಗುವದಪರೂಪ ॥
ಗುರುವೆಸಕಲವುನೀನೆಯೆಂದರಿ । ದರವಿನಲಿನಿಜಸೇವೆಮಾಡುವ ।
ಪರಮಶಿಷ್ಯಗೆಯೋಗ್ಯಸದ್ಗುರುದೊರೆವುದಪರೂಪ ॥ ೧೨೧ ॥
ನೀನೆಪರತರವಸ್ತುಶ್ರೀಗುರು । ನಾನುನಿನ್ನಯಭೃತ್ಯನೆಂದನು ।
ಮಾನವಿಲ್ಲದೆಸೇವೆಮಾಡುವಪರಮಶಿಷ್ಯನಿಗೆ ॥
ನೀನೆನಾನೆಂದರಿದುಜಗದೊಳ । ಗೇನುಬಂದೊಡಮೆತ್ತಿಕೊಂಬರು ।
ಮೌನಕರ್ತನುಶರಣರಲ್ಲದಲನ್ಯರೇನೊಳರೇ ॥ ೧೨೨ ॥

ಭಕ್ತಿಗಾಗಿಯೆನಲಿದುಬಂದುವಿ । ರಕ್ತನಾಗಿಯೆನಿಂತುಜಗದೊಳು ।
ಭಕ್ತಿಮಾರ್ಗದೊಳೆಚ್ಚರಂಗೊಡುತಿರುವಗುರುವರಗೆ ॥
ಭಕ್ತವತ್ಸಲನೀತನೆಂದಾ । ಸಕ್ತಿಯಲಿನೆರೆನಂಬಿನಡೆವರು ।
ಮುಕ್ತಿಮಾರ್ಗದಭಕ್ತರಲ್ಲದಲನ್ಯರೇನಹರೆ ॥ ೧೨೩ ॥
ಗುರುವುಬಲುದೊಡ್ಡಾತಭುವನದಿ । ಗುರುಸಮಾನರುಜಗದೊಳುಂಟೇ ।
ಗುರುಧಯಾನಿಧಿಬುದ್ಧಿಹೋದಡೆತಿದ್ದಿಕೊಡುವವನು ॥
ಶರಣಪಾಲಕನಾತನಲ್ಲದೆ । ಸಿರಿಯಸಡಗರದಲ್ಲಿಮೆರೆಯುವ ।
ನರಮನುಜರೇಂಗುರುವೆನಿಸಿರಕ್ಷಿಪರುಭಕ್ತರನು ॥ ೧೨೪ ॥
ಗುರುವುಹಿಂದಣಮುಂದಣೆಚ್ಚರ । ದರವಿನರಸನುಗುರುವದೆಂದಿಗು ।
ಸ್ಮರಿಪಭಕ್ತರತನ್ನಶಿಷ್ಯರಬಿಡುವನೇನಲ್ಲ ॥
ಕರವಿಡಿದುಸಲೆಬೆಳಕುಮಾಡುವ । ಗುರುಮಹೋನ್ನತನಾತನಲ್ಲದೆ ।
ಸಿರಿಯನೆಳೆವವನೇನುಶಿಷ್ಯರಬೆಳಕುಮಾಡುವನೆ ॥ ೧೨೫ ॥
ತರತರದಲೀಲೆಯಲಿಸೊಗಯಿಸು । ತಿರುವಗುರುವಿಗೆಮರವಿಜಸಕೆ ।
ಚ್ಚರಿಪಗುರುವಿಗೆಶಿವಕಳಾಸಂಪೂರ್ಣಗುರುವರಗೆ ॥
ನಿರುತಮಾಯಾತೀತಗುರುವಿಗೆ । ಪರಮಮಂಗಳಮೂರ್ತಿಕರ್ತಗೆ ।
ಚರಣವೇಗತಿಯೆಂದುಬೆಳಗಿರಿಮಂಗಳಾರತಿಯಾ ॥ ೧೨೬ ॥
ಮರಿಯಸಿನ್ನಂಶಿಕನಪಿಡಿದೀ । ಧರೆಯೊಳಾಡುತೆಬೆಳಕುಮಾಡಿದೆ ।
ಗುರುಫಕೀರಸಮರ್ಥಕರ್ತಪರಾಕುಮುದಿವಾಚ್ಛಾ ॥
ಕುರುಬರಿಗೆಡಾಂಭಿಕರಿಗಾತ । ಕ್ಕರಿಗೆನಿಂದಿಸುವರಿಗೆಕ್ಷಮಿಸಿದೆ ।
ಕರುಣಿನೀನಹುದಯ್ಯಕರ್ತಪರಾಕುಪ್ರಭುರಾಯಾ ॥ ೧೨೭ ॥
ಗುರುಮಹತ್ವದಸಾರವಿಂತಿದು । ಗುರುಮಹತ್ವಮನಂತಮಿರ್ಪುದು ।
ಗುರುಮಹತ್ವವನರಿದುಪೇಳುವರಾರುಲೋಕದಲಿ ॥
ಗುರುಫಕೀರೇಶ್ವರನುಗಂಗಾ । ಧರನಮುಖದಿಂಪೇಳಿಸಿದನೀ ॥
ತೆರದಿಮುಗಿದುದುಸಂಧಿಹದಿನಾಲ್ಕನೆಯದೆಂದೆನಿಸಿ ॥ ೧೨೮ ॥

॥ಇತಿ ಶ್ರೀ ಶಿರಃಪುರಸನ್ಮಠ ಶೂನ್ಯಸಿಂಹಾಸನ ಶ್ರೀ ಭಗವಾನ್ ವಿಭುವಾತ್ಮೀಯ॥ ಗಂಗನಿಂ ಪೇಳಿಸಿದ ಪೌರಾಣದೊಳ್ ಹತ್ತನೆಯ ಸಂಧಿಸಮಾಪ್ತಮಿಂತು ।

ಲ೬೬ ಪದ್ಯಂಗಳಿಗೆ ಮಂಗಲಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ

## ೧೫ನೇ ಸಂಧಿಯು.

### ಕರ್ತರ ಬೋಧಾಮೃತ.

ಸೂಚನೆ—
ಗುರುಫಕೀರನುಸಿದ್ಧರಾಮೇ । ಶ್ವರಗೆಸದ್ಗುರುಶಿಷ್ಯಲಕ್ಷಣ ।
ವರುಪಿನಿಜದಾಸೋಗವಿಟ್ಟನುಸುರರುನಲಿದಾಡೆ ॥ ಪಲ್ಲ ॥
ಪರರಿಗುಪದೇಶವನುಪೇಳ್ವಡೆ । ಪರಮವೈರಾಗ್ಯವನೆನುಡಿವರು ।
ಮರವಿಜನರಾಚರಣೆಯಂತಿರೆತಾವುನಡೆಯುವರು ॥
ಹೆರವರಿಂದೆಳಕೊಂಬುದಾಡರೆ । ಸರಸವೈಸಲೆಕೊಡುವದಾದರೆ ।
ವಿರಸವೆನಿಸುವದೇನುಹೇಳ್ವುದುಮರವಿಯೊಟವಿದು ॥ ೧ ॥
ಅರಿದುಮೂಡರುಕೆಲರುಕಾರ್ಯವ । ನರಿತುನುಡಿಯರುಮನದಭಾವವ ।
ನರಿತುನಡೆಯರುಮುಂದಿನೆಚ್ಚರವಿಡಿದುಲೋಕದಲಿ ॥
ದುರಿತಸಂಸಾರದಲಿಕ್ಷಣಭಂ । ಗುರದಬಾಳ್ವಿಯೊಳೇನುಹೇವವೊ ।
ಗುರುವೆನೀಗತಿಯೆಂದುನಡೆಯರುನಂಬರೇನೆಂಬೆ ॥ ೨ ॥
ಸುಮ್ಮಸುಮ್ಮನೆಬಿರುಸುನುಡಿವರು । ಸುಮ್ಮಸುಮ್ಮನೆಜಗಳದೆಗೆವರು ।
ಸುಮ್ಮಸುಮ್ಮನೆತಪ್ಪುಹೊರಿಸುವರಯ್ಯೊಬಡವರಿಗೆ ॥
ತಮ್ಮಕೆಲಸದಬಲುಮೆತೋರ್ಪರು । ತಮ್ಮದ್ರವ್ಯದಹಮ್ಮುತೋರ್ಪರು ।
ಹೆಮ್ಮೆಯಲಿಮೆರೆದಾಡಿಮಡಿವರುಮರವಿಮೂನವರು ॥ ೩ ॥
ಕೆಲವರತಿಕಪಟದಲಿಗುರುವ । ನ್ನೊಲಿಸಿತಮ್ಮಿಷ್ಟಾರ್ಥವನುಮಿಗೆ ।
ಸೆಳೆದುಕೊಂಡಾಗುರವಿಗೈಸಲೆತಿರುಗಿಬೀಳುವರು ॥
ಕೆಲವುಗುರುಗಳುಭಕ್ತಜನರಿಂ । ದೆಳೆದುಕೊಂಡೇಹಣವನವರಿಗೆ ।
ಬಳಲಿಸುವರಕಟಕಟಕಲಿಯುಗಮಹಿಮೆಯೇಳ್ಗೆಯಿದು ॥ ೪ ॥
ಹರನಿಗಂಜದೆಹರಿಗೆಹೆದರದೆ । ಪರಮದೇವಿಗೆಬಾಗಿನೆಡೆಯದೆ ।
ಶರಣರನುಸೇವಿಸದೆಹಿರಿಯರವಚನಪಾಲಿಸದೆ ॥
ಅರರೆಯಮನಾಭೀತಿಯಿಲ್ಲದೆ । ಧರೆಗೆಭಾರಕರಾಗಿಜೀವಿಸು ।
ತಿರುವರಿಮಕಲಿಬಲಿಯುಮಸಿಯೇಂಪೂರ್ವಜರವಚನಾ ॥ ೫ ॥

ಅಕುಟಿಲರೇನೀವ್‍ಕೇಳಿತಿಳಿಯಿರಿ । ಸಕಲಭಕ್ತರೆನೋಡಿಕೊಳ್ಳಿರಿ ।
ವಿಕಲಮತಿಗಳೆತಿಳಿದುಕೊಳ್ಳಿರಿಗುರುವಿನಾಟವನು ॥
ಪ್ರಕಟಸದ್ಗುರುನಿಜಮಹತ್ವದ । ಸಕತಿಯಲಿಲೋಕದಲಿತೋರು ।
ತ್ರಖಿಲರಲಿಭಯಭಕ್ತಿನೆಲಗೊಳಿಸಿದನುಸಾಜದಲಿ ॥ ೬ ॥
ಗುರುನಿರಾಕೃತಿಯೆನಿಪಕರ್ತನು । ಮರಿಯೆನಿಸುವಾಸಿದ್ಧರಾಮಗೆ ।
ಧರೆಯೊಳಾಶ್ರಮಕಾಗಿಮಠವನುಕಟ್ಟಿಸಿದಬೇಗ ॥
ಬರುವಭಕ್ತವ್ರಾತಕಗಲದೆ । ಗುರುಪ್ರಸಾದವನೀಯಲೆಂದೇ ।
ಹರುಷದಿಂದುಗ್ರಾಣವನುಕಟ್ಟಿಸಿದನಾಕರ್ತಾ ॥ ೭ ॥
ಗುರುಮಹೋತ್ಸವನಡಿಸಲೋಸುಗ । ಮಿರದೆಮಂಗಲವಾದ್ಯದೆಡೆಯೆನೆ ।
ಕಿರಿದೆನಿಪನಗಾರಿಖಾನಿಯಕಟ್ಟಿಸಿದನಾತ ॥
ಬಿರುದಿನುರುಕಾಳಿಯನುಹೊಗಳಿಸು । ತರರೆಕಡುಶಾಂತಿಯನುವೂಡಿಸಿ ।
ಕುರುಹಿಗಾಗಿನಿಶಾನಿನಿಲಿಸಿದನಿತ್ಯನಿರ್ಲಿಪ್ತ ॥ ೮ ॥
ಬಂದುಕಡೆಜಂಗಮರುಗಡಮ । ತೊಂದುಕಡೆಗೆಫಕೀರರೆನಿಸುವ ।
ರಂದದಲಿಸಾಲ್ಗೊಂಡುಶೋಭಿಸೆದೀನ್ಜಗಾಯಿಸುತ ॥
ನಿಂದಕರಯಮನಾಗಿಸುಜನ । ವೃಂದಶಂಕರನಾಗಿಜಗಕ್ಕೈ ।
ತಂದಿಹನುಗುರುವೆನಿಸುತಾರತಿಬೆಳಗಿಸಿದನಾತ ॥ ೯ ॥
ದುರಿತಜನರನುಲೂಟಿಮೂಡ । ಲ್ಕಿರದಲಲ್ಲಮರಾಯಬಂದಿಹ ।
ನರರಿಗೆಚ್ಚರಗೊಡಲಿಕಚ್ಯುತಕೊಡಲಿತಂದಿಹನು ॥
ಹರನಮುಂಡಿಗೆವೊತುತಿಳಿಯದು । ವರವಿಮೌನನಲೀಲೆತಿಳಿಯದು ।
ನರಜನರಿಗೆಂತೆಂದುನುಡಿಸಿದನುರುಪರಾಕುಗಳ ॥ ೧೦ ॥
ಎರಡುಮತಕನುಸರಿಸಿಲೋಕದೊ । ಳೆರಡುಬಗೆಯಿಂದಡಿಗೆವೂಡಿಸಿ ।
ಗುರುಪ್ರಸಾದದೆತೃಪ್ತಿಗೈಸಿದನಾಫಕೀರೇಶ ॥
ಕರೆದುಮರಿದೇವರನುನುಡಿದನು । ವರಫಕೀರನುಹುಟ್ಟುಜಂಗಮ ।
ನರಿತುನೀನಿದರಂತೆನಡಿಸಲುಬೇಕುಮುಂದೆಂದಾ ॥ ೧೧ ॥
ವರವಿಮೌನನುಕಿರಿಯನಾದರು । ಪರಮಷಟ್ಸ್ಥಲಬ್ರಹ್ಮಲೋಕದಿ ।
ಹರಿಹರರ್ಗವಮಿಗಿಲುನಾನಾತನಿಗೆಕೆಳಗಿನವ ॥

ಅರರೆಶ್ರೀಮೌನೇಶಸಂತಿಹ । ಗುರುವನಾಂಪರವಸ್ತುವನುನಾ ।
ನರಿಯೆಭೂಲೋಕದಲಿಹುಡುಕಿದರಿಲ್ಲತಿಳಿಯೆಂದ ॥ ೧೨ ॥
ಲೋಕದೊಡೆಯರನೆಲ್ಲಬರಸುವ । ಮೂಕದೈವಕ್ಕೆಲ್ಲನುಡಿಸುವ ।
ಕಾಕುಭೂಪಾಲಕರಶಿರಬಾಗಿಸುವನಾಮೌನಾ ॥
ಸಾಕಿದೆಂದರೆಸರಿದುಕೊಂಬನು । ಬೇಕಿದೆಂದಡೆಬಂದುಕೊಟ್ಟಪ ।
ನೇಕವಾದರೆಬೆಳಕುಮಾಡುವನಿಂತುಹೊರಗೊಳಗೆ ॥ ೧೩ ॥
ನಾನುಹಿರಿಯನುಕಿರಿಯನಾತನು । ನಾನುಸ್ಥೂಲಸುಸೂಕ್ಷ್ಮವಾತನು ।
ಮೊನವರದೇಂತಿಳಿಯರಕ್ಕಟಸೂತ್ರಪೊಂದದುವೆ ॥
ಏನುಹೇಳಲಿಸಿದ್ಧರಾಮನೆ । ಮೌನನೆನ್ನೊಳಗಿರುವನಾತನೊ ।
ಳಾನಿರುವೆನೈಭೇದಮಾಡಲಿಕಾಗದೈಯೆಂದಾ ॥ ೧೪ ॥
ಧರೆಗೆಬಾಲಕನಾಗಿಸಲೆಸಂ । ಚರಿಸಿಪಾವಾಡುಗಳಮಾಡಿಹ ।
ಸ್ಮರಿಪಭಕ್ತರನೆತ್ತಿಕೊಂಡಿಹನೆರಡುಲೋಕದಲಿ ॥
ಸರಸಿಜೋದ್ಭವಲಿಖಿತವಳುಕಿಸಿ । ಪರಮಶಿವಲೇಖವನುಬರೆದಿಹ ।
ನರಿತುಕೋನೀಮರೆಯಬೇಡಿನ್ನೊರೆವೆಕೇಳೆಂದಾ ॥ ೧೫ ॥
ಸತ್ತಗೂಳಿಯನೆಬ್ಬಿಸಿಹನವ । ಸತ್ತಮನುಜರಬದುಕಿಸಿಹನವ ।
ಸತ್ತುನರಕದಿಬಿದ್ದವರನುರೆತಂದುಕೊಟ್ಟಹನು ॥
ಸತ್ಯವಂತನೆಕೇಳುರಾಮನೆ । ಮತ್ತೆನಿನಗೀಮಾತಪೇಳ್ವೆನು ।
ಚಿತ್ತದಲ್ಲಿಡುಗುಪಿತವಾಗಿರಿಸೆಂದನಾಕರ್ತಾ ॥ ೧೬ ॥
ಮರಿಯಕೇಳೈನೀನುನನ್ನನು । ಮರೆದೊಡಂಗಡವರವಿಮೌನೇ ।
ಶ್ವರಗೆಮರೆಯಲುಬೇಡಕಲಿಯುಗಕಾತಗುರುರಾಯಾ ॥
ಸ್ಮರಿಸುತಿರುನಿನ್ನೊಳಗನಾದಿಯ । ಗುರುತುಹಿಡಿನಡಿತಿಳಿದುಕೋಯೆಂ ।
ದೊರೆದುನಿಜವಸ್ತುವಿನಲಕ್ಷಣವೇಳ್ದನಲ್ಲಮನು ॥ ೧೭ ॥
ತಾನೆಬಲ್ಲನುತನ್ನಲೀಲೆಯ । ನಾನದೇನದಬಲ್ಲೆನೈ ಶ್ರೀ ।
ಮೌನಮಹಿಮೆಯನಾನುತುಸುಹೇಳುವೆನುಕೇಳ್ಮಗನೆ ॥
ಭಾನುಶತಕೋಟಿಪ್ರಕಾಶಕ । ಮೌನನೀಲೋಕದಲಿನಿಂತಿಹ ।
ನೇನುಹೇಳಲಿಮೌನಮಹಿಮೆಗೆಗಣನೆಯಿಲ್ಲೆಂದಾ ॥ ೧೮ ॥

ವರವಿಮೌನೇಶ್ವರನುನಾನುಂ । ಧರೆಯೊಳುತ್ತರದೇಶದಲಿಸಂ ।
ಚರಿಸಿದಾಸಮಯದಲಿಮೌನನುಹೂಡಿದಾಟವದು ॥
ಅರರೆಶ್ರೀಕಲ್ಯಾಣದಲಿಬಸ । ವರಸಮುಖ್ಯಪ್ರಮಥರೆಲ್ಲರ ।
ಗುರುತಿನಾಟವನೆಲ್ಲಬೈಲಿಗೆತಂದನೆನಗೆಂದ ॥ ೧೯ ॥
ಮರಿಗಳೇನೀವ್‌ಕೇಳಿತಿಳಿಯಿರಿ । ಗುರುಫಕೀರಗೆಮರಿಯುರಾಮನು ।
ಕರಮುಗಿದುಶಿರಬಾಗಿಕೇಳಿದನೊಂದುದಿವಸದಲಿ ॥
ಗುರುನಿರಂಜನತಮ್ಮಪಾದದ । ಕರುಣದಲಿಭವಬೀಜಹುರಿಯುವ ।
ಗುರುಸುಶಿಷ್ಯವೃತ್ತಿಹೇಳುವದೆಂದುಪ್ರಾರ್ಥಿಸಿದಾ ॥ ೨೦ ॥
ನಗುತಲಾಗುರುನಾಥಕರ್ತನು । ಮೊಗವನೋಡುತೆಹರುಷದಿಂದಾ ।
ಮಗನಿಗೊರೆದನುಕೇಳಿರೆಲ್ಲರುಚಿತ್ತವಿಟ್ಟದನು ॥
ಜಗದೊಳಾಶ್ರಮಗೊಂಡುಗುರುವಿನೊ । ಳಗಲದಲೆದೃಢವಿಡಿದುಬಲುನಂ ।
ಬಿಗಿಯೊಳರ್ಚನೆಸೇವೆಮಾಳ್ಪನೆಶಿಷ್ಯನವನೆಂದಾ ॥ ೨೧ ॥
ತನುವಿನೊಳಕಥೆತಿಳಿದುತನ್ನೊಳು । ಮನಸಿನಾಟವನರಿತುಸರ್ವವು ।
ಕನಸಿನಾಪರಿಯೆಂದುನಯಭಯಭಕ್ತಿಯಲಿಬೆಳಗಿ ॥
ಜನದಜೊತೆಯಲಿಸುಳಿದುಸುಳಿಯದೆ । ಮನಸಿನಿಚ್ಛೆಗೆಹರಿದುಹರಿಯದೆ ।
ಚಿನುಮಯನಬೆರತವನೆಶಿಷ್ಯನುಪರಮಗುರುಕುವರ ॥ ೨೨ ॥
ಒಡಲೊಳೇನುಂಶುದ್ಧವಿಲ್ಲದೆ । ತೊಡೆಯೊಳೇನುಂಶುದ್ಧವಿಲ್ಲದೆ ।
ನಡೆನುಡಿಗಳವುಶುದ್ಧವಿಲ್ಲದೆಬರಿದೆಮೆರೆವುತಲಿ ॥
ಪೊಡವಿಗಾವ್‌ಪರವಸ್ತುವೆನ್ನುವ । ರೊಡವೆಯುವರಂತಹರೊಶಿವಶಿವ ।
ನೃಡನುಶರಣರುನಗರೆಕೇಳ್ಮಗನೆನೋಡೆಂದಾ ॥ ೨೩ ॥
ಅರವುಮರವಿಗೆಸತ್ಯಸಾಕ್ಷಿಕ । ಹೊರಗೊಳಗೆತಾನಿತ್ಯಸಾಕ್ಷಿಕ ।
ಧರೆಯುವ್ಯವಹಾರಕ್ಕೆಸಾಕ್ಷಿಕನೊಡೆಯಗುರುರಾಯ ॥
ಪರಮಭಕ್ತಿನಿಮಿತ್ಯದಲಿತಾ । ಕರುಣಿಸಲ್ಕೈತಂದುಬೆಳಗುವ ।
ನರಿತುಗುರುವನುಸೇವಿಸುವರೇಧನ್ಯರವರೆಂದಾ ॥ ೨೪ ॥
ಗುರುವೆತಂದೆಯುಗುರುವೆತಾಯಿಯು । ಗುರುವೆಬಂಧುವುಗುರುವೆಬಳಗವು ।
ಗುರುವೆಸಕಲೈಸಿರಿಯಸಡಗರವೆಲ್ಲತನಗೆಂದು ॥

ಗುರುವೆನೀಗತಿಯೆಂದುವಿಃಗೆನಿ । ಧರಿಸಿಶ್ರೀಗುರುಪಾದಸೇವೆಯೊ ।
ಳಿರುವನಾವನೊಶಿಷ್ಯನಾತನೆಮುಕ್ತನೆನಿಸುವನು ॥ ೨೫ ॥
ಹರುಷದಲಿಸತ್ಕಾರ್ಯವಾಡುತೆ । ಪರಮಶಿವಶರಣರನುಭಜಿಸುತೆ।
ಸ್ಮರಣೆಯಲಿಗುರುಪಾದವನುಪೂಜಿಸುತೆನಿಷ್ಠೆಯಲಿ ॥
ಪರಜನರಿಗನ್ನವನುಕೊಡುತಲಿ । ಗುರುಕಟಾಕ್ಷವಬಯಸುತಲಿತಾ ।
ನರವಿನಿಂದಾಡುವನುಶಿಷ್ಯನುಮುಕ್ತನಹನೆಂನಾ ॥ ೨೬ ॥
ಸೂರನಂದದಿಹುಟ್ಟಸಂತಿಯೆ । ಕೇರಬೀಜದತೆರದೊಳಾಕುಂ ।
ಬಾರಹುಳುವಿನತೆರದಿಗಜುಗದವೋಲುಲೋಕದಲಿ ॥
ಸಾರಜಿಹ್ವೆಯವೋಲುತಾನಾ । ಪಾರವಾರ್ಥದೊಳಟ್ಟುಚಿತ್ತವ ।
ಮೀರಿವಾಯೆಯನಡೆವಶಿಷ್ಯನಭವವುಹರಿಯುವದು ॥ ೨೭ ॥
ಗುರುವೆನೀಗತಿಯೆಂದುನಂಬಿಯೆ । ದುರಿತಕರ್ಮಕ್ಕೇನುಸೋಂಕದೆ ।
ಗುರುಕಟಾಕ್ಷವಪಡೆದುಕೊಂಡವಶಿಷ್ಯನವಮುಕ್ತಾ ॥
ಮರಿಯೆಕೇಳೀಜಗಕೆಮರಿನೀಂ । ಮರಿಯೆಪರತರವಸ್ತುನೀನೇಂ ।
ನರನೆಪ್ರಭುಸನ್ನಿಭನುಕೇಳೊಡ್ಡೆಹೇಳ್ವೆನಿನಗೆಂದ ॥ ೨೮ ॥
ಚನ್ನಿಗನೆನೀಕೇಳುಹೇಳುವೆ । ನಿನ್ನನಿಜದಾಸೋಗದಂದವ ।
ನೆನ್ನತಾಗುರುರಾಯನೆಂದನುಸಿದ್ಧರಾಮನಿಗೆ ॥
ಭಿನ್ನಭೇದಂಗೈದುಪರಜನ । ಕನ್ನಕೊಡುವರುನೀಚರವರೇ ।
ಕುನ್ನಿಗಳಮುಖನೋಡಲಾಗದುಮಗನೆತಿಳಿಯೆಂದಾ ॥ ೨೯ ॥
ಒಳಗೆಹೊರಗೆಯುಭಿನ್ನಭೇದಂ । ಗಳವುಹುಟ್ಟಲುಬಾರದೆಂದಿಗು ।
ಹೊಲಸುಕಲಸುಗಳೇನುಮಾಡಲಿಕಾಗದೆಂದೆಂದು ॥
ಕಳವುಪಾದರಚಾಡಿಪುಸಿಬೈ । ಗುಳವುಘಾತಕತನವುಗುರುಸು ।
ಸ್ಥಳದೊಳುಗ್ರಾಣದೊಳುನಡಿಯಲಿಕಾಗದೆಂತೆಂದ ॥ ೩೦ ॥
ಲೇಸುಪತ್ನೀವ್ರತವದೊಂದೇ । ಲೇಸದೊಂದೇನಡತೆಲೋಕದಿ ।
ಲೇಸುನಡೆನುಡಿಯೊಂದೆಲೇಸುಪತಿವ್ರತಾಧರ್ಮಾ ॥
ಲೇಸದೊಂದೇಭಕ್ತಿಮಾರ್ಗವು । ಲೇಸುಸದ್ಗತಿಚಿಂತೆಯೊಂದೇ ।
ಲೇಸುಧೃಡಮನವೊಂದೆಲೇಸದುಲೇಸುತಿಳಿಯೆಂದಾ ॥ ೩೧ ॥

ಆಡಬಾರದುಹೆಚ್ಚುಕಡಿಮೆಯು । ನೀಡಬಾರದುಮೇಲುಕೀಳದು ।
ಮಾಡಬಾರದುಪಙ್ತಿಭೇದವಗುರುಪ್ರಸಾದದಲಿ ॥
ನೋಡಲಾಗದುಊಚನೀಚದು । ಕಾಡಬಾರದುಬಾಯುಸವಿಗುರೆ ।
ರೂಢಿಯಲಿದಾಸೋಗನಡಿಪುದುಬಹಳಬಿಗಿಯೆಂದ ॥ ೩೨ ॥
ಕುನ್ನಿಮನುಜರುನೀಡುವೆಡೆಯಲಿ । ಭಿನ್ನಭೇದವಮಾಡುವರುಜನ ।
ಕನ್ನದಲಿಮುಖನೋಡಿಮಣಿಹಾಕುವರುಪಾತಕರು ॥
ಹೊನ್ನಮಣ್ಣಾಹೆಣ್ಣುಕಾಮಿಸಿ । ಬನ್ನಬಡುವರುಸಿಲುಕಿಮಾಯೆಯೊ ।
ಳಿನ್ನುತೇನೋಹೇಳರಾಮಂಗೆಂದಮುದಿಫಾಚಾಟ ॥ ೩೩ ॥
ಇವನುನಮ್ಮವನೆಂದುಕರೆಯುವ । ರವನುದೊಡ್ಡವನೆಂದುಮನ್ನಿಪ ।
ರವನುಕೀಳನುಮೇಲಿನವನಿವನೆಂದುಭಾವಿಪರು ॥
ಇವಗೆಮೃಷ್ಟಾನ್ನವನುನೀಡುವ । ರವಗೆಕರಕನ್ನವನುನೀಡುವ ।
ರವರಮುಖವನುನೋಡಲಾಗದುಕಂದಕೇಳೆಂದಾ ॥ ೩೪ ॥
ಗುರುಗಳಾಗಲಿಶಿಷ್ಯರಾಗಲಿ । ಪರಿಚರಿಯದವರಾದರಾಗಲಿ ।
ಗುರುಪ್ರಸಾದದಿಮಾಡಬಾರದುಭಿನ್ನಭಾವವನು ॥
ಶರಣರಾನಡೆಯಂತೆನಡೆಯದೆ । ಬರಿದೆದಾಸೋಗದಲಿಸುಖಿಸು ।
ತ್ತಿರುವರಾಮುಖನೋಡಬಾರದುಮಗನೆಕೇಳೆಂದ ॥ ೩೫ ॥
ಭೀತಿಗೊಂಬರುಲೋಕದಲಿಮನ । ಸೋತುನಡೆವರುವಿಷಯದಲಿಪುಸಿ ।
ಮಾತಿಗೇಬಡದಾಡುವರುಕೀಟಕರಿಗೊಲೆಯುವರು ॥
ಪಾತಕರಸಂಗವನುಹಿಡಿವರು । ಜಾತಿಯಭಿಮಾನಕ್ಕೆಬೀಳ್ವರು ।
ನೀತಿರೀತಿಗಳಿಲ್ಲದಿರುವರುಮಗನೆತಿಳಿಯೆಂದ ॥ ೩೬ ॥
ಕೆಲವರೀಲೋಕದಲಿತಮ್ಮದೆ । ಬಲುಮೆತೋರಿಸಿತಮ್ಮಮಾತೇ ।
ಛಲದಿಮೇಲೆನಿಸುವರುಪರರಿಗೆದೋಷಕೊಡುತಿಹರು ॥
ಬಳಗೆತಮ್ಮಯಗತ್ತನಿಟ್ಟೇ । ಲಲಿತಸದ್ಗುರುವಚನವಾಕ್ಯಂ ।
ಗಳನೆಹೇಳ್ವರುಸಿದ್ಧರಾಮನೆಕೇಳುತಿಳಿಯೆಂದಾ ॥ ೩೭ ॥
ಘಾಸಿಮಾಡುವಭಕ್ತಜನರಿರೆ । ಮೋಸಗೈಯುವಸೇವಕರುಮಿರೆ ।
ರೋಷಗೊಳ್ಳುವಶಿಷ್ಯರಿರೆದಾಸೋಗವೇನದುವೆ ॥

ಹೇಸಿಮನಸಿನಮಂತ್ರಿಗಳುಮಿರೆ । ಭೂಷೆಗಳ್ಳರುಗುರುಗಳಿರೆಜಗ ।
ದೀಶನಾದಾಸೋಗವಲ್ಲದುಸೋಗುನೋಡೆಂದ ॥ ೩೮ ॥
ತಮ್ಮಕಾಯಕೆಸೌಖ್ಯಕೊಡುವರು । ತಮ್ಮತನುಶೋಭೆಯಲಿಮೆರೆವರು ।
ತಮ್ಮಲೌಕಿಕಬಂಧುಬಳಗದಕಡೆಗೆಕರುಣಿಪರು ॥
ಹಮ್ಮಿನಲಿಹರಿದಾಡಿವಿಷಯದೊ । ಳುಮ್ಮಳಿಪನರಮನುಜರೇನವ ।
ರೆಮ್ಮವರೆಣಿಳಮಗನೆನಾನಿನಗೊರೆವೆಕೇಳೆಂದಾ ॥ ೩೯ ॥
ಜಗಕೆಸೋಹಂನಾನದಲ್ಲವು । ಜಗಕೆನಾನುಶಿವೋಹಮಲ್ಲವು ।
ಜಗಕೆಗಡದಾಸೋಹವೂಗಿಹೆನೀಶರೀರದಲಿ ॥
ಸುಗುಣಗಣನಿಧಿರಾಮಕೇಳ್ನೀಂ । ಜಗದೊಳೆನ್ನಂತಾಗುಭಕ್ತಿ ।
ಪ್ರಗತಲೀಲಾನಂದನಾಗಾಡೆಂದನಾಕರ್ತಾ ॥ ೪೦ ॥
ಧರೆಗೆದಾಸೋಗದಲಿನಿಂತಾ । ಗುರುಚರಣಸೇವೆಯನುಮೂಡು ।
ತ್ರಿರುವರೇನೀವ್ಕೇಳಿಕೊಳ್ಳಿರಿಗುರುಕಥಾಮೃತವ ॥
ಪರಿಪರಿಯಕಾವ್ಯದಲಿದರ್ಶನ । ಕಿರದೆಬರುತಿಹಜನರಿಗೋಸುಗ ।
ಹರುಷದಲಿದಾಸೋಗವಿಡಿಸಿದನಾಫಕೀರೇಶ ॥ ೪೧ ॥
ಮೂರುಮೂರ್ತಿಗಳೆಲ್ಲನೀನೇ । ಧಾರುಣಿಯೊಳುದ್ಧಾರವಮೂಡುವ ।
ವೀರಸದ್ಗುರುಕರ್ತನೀನೇಯೆಂದುನಂಬಿರುವ ॥
ಧೀರರಾಗಿಹಕಾಯಪುರದೊಳ । ಗಾದಿಗುಂಸಿಗದಿರುವಭಕ್ತರ ।
ನಾರಯಿದುದಾಸೋಗದಲಿನೇಮಿಸಿದನಾಪಾಜಾ ॥ ೪೨ ॥
ಧಾರುಣಿಯೊಳೀಹಲವುಬಗೆಯಲಿ । ತೋರುವೀಸ್ತ್ರೀಪುರುಷರೆಲ್ಲರು ।
ಸಾರಜನನೀಜನಕರಾರೂಪೆಂದುಭಾವಿಸಿಹ ॥
ಧೀರಸದ್ಗುರುನೀನೆಗತಿಯೆಂ । ದಾರಿಗಳ್ಕದಲಿರುವಭಕ್ತರ ।
ನಾರಯಿದುಮಿಗೆಮೇಲ್ವಿಚಾರಣೆಗಿಟ್ಟನಾಕರ್ತಾ ॥ ೪೩ ॥
ಬರುವಭಕ್ತರಹಿತವಚಿಂತಿಸು । ತಿರುವದಾಸೋಗವನುನಡಿಸು ।
ತ್ರಿರುವಮೂರ್ತಿಗಳೆಲ್ಲರವಧರಿಸುವದುಗುರುಕಥೆಯಾ ॥
ಬರುವನಾನಾಕುಲದಜನರಿಗೆ । ಗುರುಪ್ರಸಾದವುಭೇದವೆನಿಸದೆ ।
ಸಿರುತದೊರೆಯಲಿಯೆಂದುಕಟ್ಟಳೆಗೈದನಾಕರ್ತಾ ॥ ೪೪ ॥

ಗುರುಫಕೀರೇಶ್ವರನುಪಾಚ್ಛನು । ಮರಿಯೆನಿಪಶ್ರೀಸಿದ್ಧರಾಮೇ ।
ಶ್ವರನಿಗೆಂದನುನೀವುಕೇಳಿರಿಭಕ್ತರೆಂಬವರು ॥
ಗುರುಹಿರಿಯರುಂಲಾಲಿಸಿರಿನೀ । ವರವಿನರಸನುಬಂದಭಕ್ತೋ ।
ತ್ಕರದಿದಾಸೋಗಡಲಿಸೂಕ್ಷ್ಮವಿಚಾರವಿರಲೆಂದ ॥ ೪೫ ॥
ಹರಕನೊಂದೇತಿರುಕನೊಂದೇ । ಕುರುಬನೊಂದೇಗೊರವನೊಂದೇ ।
ಧರೆಗೆಕೀಳೆನಿಸಿರುವಕುಲದವರೆಲ್ಲರೊಂದೆನಗೆ ॥
ಸಿರಿಗನೊಂದೇಬಡವನೊಂದೇ । ಧರಣಿಪತಿಯುವನೊಂದೆಕೇಳ್ಳೈ ।
ಗುರುಪ್ರಸಾದವನೊಂದೆನೀಡುವದೆಂದನಾಕರ್ತಾ ॥ ೪೬ ॥
ನಾನೆಶ್ರೀಗುರುವೆಂಬುದಲ್ಲವು । ನಾನೆಸೇವಕನೆಂಬುದಲ್ಲವು ।
ನಾನೆನಾಸದ್ಭಕ್ತನೆಂಬುವದಲ್ಲದೊಳತಲ್ಲಾ ॥
ನಾನೆರಕ್ಷಿಪೆನೆಂಬುದಲ್ಲವು । ನಾನೆಮೊಡುವೆನೆಂಬುದಲ್ಲವು ।
ನಾನೆನನ್ನಿಂದೆಲ್ಲವೆಂಬುದುಭ್ರಾಂತಿತಿಳಿಯೆಂದ ॥ ೪೭ ॥
ಘನಮಹಾತ್ಮನಗುರುವನೊಲಿಸದೆ । ಜನರೊಲುಮೆಯನುಗಳಿಸಿಕೊಂಡೇ ।
ಘನತೆಯಲಿಕೆಲಜನರುಮೆರೆದಾಡುವರುಲೋಕದಲಿ ॥
ಜನರಿಗಂಜುತನಡೆದುಕೊಂಬರು । ಮನಸಿಗಂಜದೆದುರಿತಗೈವರು ।
ಚಿನುಮಯಗೆಹೊರತಾಗಿಸುಖಿಸುವರ್ರೈಯ್ಯಕೇಳೆಂದ ॥ ೪೮ ॥
ಕಸವರಮನುರೆಬಿಟ್ಟುಲೋಕದಿ । ಕಸವನೇಕೈಕೊಂಡಪ್ರೋಲ್ಗಡ ।
ಬಸವರಾಜನಬಿಟ್ಟುವಿಷಯಾಸಕ್ತರಾಗುವರು ॥
ವಿಷಮಯರುತಾವಾಗಿಕೆಲವರು । ಬಸವಬಸವಾಬಸವಯೆನುತಲಿ ।
ಬಸವನಾಮೋಚ್ಚಾರಮೊಡುವರ್ರೈಯ್ಯಕೇಳೆಂದಾ ॥ ೪೯ ॥
ಮನದೊಳಾಡುವಪರಮಹಂಸನ । ಘನವನರಿಯದೆಮನಸಿಗಂಜದೆ ।
ಜನರಿಗಂಜಿಯೆನಡೆದುಮೆಚ್ಚಿಸಿಡಾಂಭಿಕತ್ವದಲಿ ॥
ಧನದೆಡೆಗೆಮನವಿರಿಸಿನಲಿವರು । ವನಿತೆಯರಕಡೆಗೊಲೆದುರವಿಪರು ।
ತನುವಿನಾಸಿರಿನೆಚ್ಚಿಸುಖಿಪರುಮಗನೆತಿಳಿಯೆಂದ ॥ ೫೦ ॥
ಹಿಂದೆಮಾಡಿದ್ದೆಲ್ಲಜಗದೊಳ । ಗಿಂದುತಾವುಣ್ಣುತ್ತಲಿರುವರು ।
ಮುಂದೆಸಾಧಿಪುದಿಲ್ಲಮೋಕ್ಷಾಪೇಕ್ಷೆಯೇಸಿಲ್ಲ ॥

ಬಂಧುರದಗುಹಸದೃಶಶಿಷ್ಯರ । ನಿಂದುಧರನಂತಿರುವಗುರುಗಳ ।
ನೆಂದಿಗುಂನರಮನುಜರಲಿನಾಕಾಣಲಿಲ್ಲೆಂದ ॥ ೫೧ ॥
ಪರುಷವೈದುಂಸಡೆಯುತಿದ್ದರೆ । ಪರಮಗುರುದಾಸೋಗವದುಗಡ ।
ಪರುಷವಿಲ್ಲದಗುರುಗಳೇನವರಲ್ಲಪರವಸ್ತು ॥
ಅರವದಿರ್ದಡೆಗುರುವುತಾನಿಜ । ಬಿರುದುಕಾದವನಹುದುಸದ್ಗುರು ।
ಮರವಿಮನುಜರುಗುರುಗಳೇನಾಗುವರುತಿಳಿಯೆಂದಾ ॥ ೫೨ ॥
ಕೀಲಿಹಾಕಲುಹೊರಗೆತೋರ್ವನು । ಭಾಲೆಚುಚ್ಚಲುಘಾಯಗೊಳ್ಳನು ।
ಕಾಲುಕಟ್ಟಿಯೆಬಾವಿಗೊಗೆದಡೆಬೇರೆಕಡೆಗಿಹನು ॥
ಕಾಲುಕೈಮೈಯೆಲ್ಲಖಂಡಿಸಿ । ಬಾಳಜತನದೊಳಿಟ್ಟರಾಕ್ಷಣ ।
ಲೀಲೆಯಾಡುತೆಬರುವನಾತನೆವಸ್ತುಗುರುವೆಂದ ॥ ೫೩ ॥
ಕೈಯತಿಕ್ಕೆಸುಗಂಧವಾಸನೆ । ಮೈಯತಿಕ್ಕೆಸುಗಂಧವಾಸನೆ ।
ಯ್ಯೆಯ್ಯಪಾದವತಿಕ್ಕೆಪರಿಮಳಗಂಧವಾಸನೆಯು ॥
ಸುಯ್ಯೆಲರುಶ್ರೀಗಂಧವಾಸನ । ವಯ್ಯಗಡನಡದಾಡೆಗುರುಜಗ ।
ದಯ್ಯಸೌಗಂಧಾತಿಶಯವಾಸನೆಯುಬಹುದೆಂದ ॥ ೫೪ ॥
ಭೂತಭವಿಷ್ಯತ್ತೆಲ್ಲತಿಳಿವನು । ಭೂತಗಣದಿಂಸೇವೆಗೊಂಬನು ।
ಪ್ರೇತಗಳತಾಣದೊಳಗಾಸನಗೊಂಡುಶೋಭಿಪನು ॥
ಜಾತಿಧರ್ಮಾಚರಣೆಕೆಡಿಸದೆ । ನೀತಿಭಕ್ತ್ಯಾಚಾರವೇಳ್ವನು ।
ಜ್ಯೋತಿರೂಪದೊಳಿರುವನಾತನೆವಸ್ತುತಿಳಿಯೆಂದಾ ॥ ೫೫ ॥
ಕಾದಸೀಸವನುಂಗಿಬಿಡುವನು । ಕಾದಕಾಜಿನರಸವಕುಡಿವನು ।
ಮೇದಿನಿಯಕಲ್ಗಳುತಿಂಬನುಸಮಯಕನುಸರಿಸಿ ॥
ಹಾದುಹೋಗುವಹಾವುಹಿಡಿದೇ । ಸಾಧಿಸಿಯೆತಾಕಡಿಸಿಕೊಂಬನು ।
ಸಾಧನವುತಾನಲ್ಲಪರಶಿವಲೀಲೆಕೇಳೆಂದ ॥ ೫೬ ॥
ತಲೆಯೊಳಿಟ್ಟರೆಹಸಿಯಹಿಟ್ಟದು । ಫಳಿಲನೇಕರಕಾಗಿಬೀಳುವ ।
ದಿಳೆಗೆಬಿದ್ದೊಡೆಬಿಂದುಧಗಧಗಿಸುವದುಮಹಾಜ್ವಾಲೆ ॥
ಮುಳಿದುದೃಷ್ಟಿಸಲೊಡನೆದುರ್ಜನ । ರಳಿವರ್ಕೈಗಡಕಾಮನಂದದಿ ।
ತಿಳಿದುಕೋಪರವಸ್ತುಲಕ್ಷಣವೊಳಗೆಸಾಕೆಂದ ॥ ೫೭ ॥

ಧರಣಿಯಲಿಮರಿದೇವರೆನಿಸುವ । ರರಿತುಕೊಳ್ಳಿರಿನೋಡಿನಡೆಯಿರಿ ।
ಪರಕೆಪರತರವಾದಸದ್ಗುರುವಸ್ತುಲಕ್ಷಣವ ॥
ಮರಿಗೆತಿಳುಹಿಸಿಕರುಣಿಸಿದನಾ । ಗುರುಫಕೀರೇಶ್ವರನುಮತ್ತಿ ।
ನ್ನೊರೆದನಾದಾಸೋಗದೆಚ್ಚರದತಿರಹಸ್ಯವನು ॥ ೫೮ ॥
ಹರಕಸೀರಿಯುಹರಕಕುಬಸವು । ಸಿರದಕೂದಲುಹಂಜಿಬುಟ್ಟಿಯು ।
ಸುರಿವಹೇನ್‌ಸೀರುಗಳುನಾರುವಮೈಯ್ಯುಹೊಲಸಿನಲಿ ॥
ಅರರೆದೇವಿಯುಬರುತಲಿರುವಳು । ಗುರುವಿನಾದಾಸೋಗದೆಡೆಯಲಿ ।
ತೆರೆದಬಾಯಲಿಗುರುಪ್ರಸಾದವಬೇಳ್ಪಳರಿಯೆಂದಾ ॥ ೫೯ ॥
ಬೆರಳುಗಳುಸೊಟ್ಟಾಗಿಕೈಕಾಲ್ । ನರಗಳವುಸಡಿಲಾಗಿಮುಪ್ಪಾ ।
ವರಿಸಿದಾಪರಿಯಲ್ಲಿಹುಣ್ಣಿನಕೀವುರಕುತದಲಿ ॥
ತಿರುಕನಂತಿಯೆಬಹುಕುರೂಪವ । ಧರಿಸಿಶಂಕರಬರುತಲಿರುವನು ।
ಗುರುವಿನೆಡೆಯಲಿಬೇಡುತಿಹನುಪ್ರಸಾದತಿಳಿಯೆಂದ ॥ ೬೦ ॥
ಹಲವುಬಗೆಯಲಿದೇವಿಬರುವಳು । ಹಲವುಬಗೆಯಲಿಶಂಭುಬರುವನು ।
ತಿಳಿಯಗೊಡದಲೆದೇಹದಲಿಬಹುವಿಧಕುರೂಪದಲಿ ॥
ಹೊಳವುತೋರಿಸಿಭಿಕ್ಷೆಬೇಳ್ಪರು । ಮಲಿನಭಾವರುನೀಡದವರಿಗೆ ।
ಪಳಿದುನಾಡಿಪರಯ್ಯೊನಗುವನುಸಾಂಬಸದ್ಗುರುವು ॥ ೬೧ ॥
ವೋಸದಾರೂಪದಲಿಬಂದರು । ಹೇಸಿಕೆಯರೂಪದಲಿಬಂದೊಡ ।
ಮೀಶನಾಪಾರ್ವತಿಯಗುರುತವಹಿಡಿವುತಾಕ್ಷಣಕೆ ॥
ಈಶಸದ್ಗುರುಸಾಂಬಶರಣರು । ವಿಾಸಲಳಿಯದಮನಸಿನಲಿಸಂ ।
ತೋಷದಿಂದುಪಚರಿಸಿನಲಿಯುವರಯ್ಯಕೇಳೆಂದ ॥ ೬೨ ॥
ನರರಿಗೇನುಂತಿಳಿಗೊಡದೆಸ । ದ್ಗುರುವಿನಲಿಶಿವಶರಣರಲಿಸ್ವೀ ।
ಕರಿಸಿಬಿಡದೆಪ್ರಸಾದವನುನಲಿದಾಡಿಕುಣಿಕುಣಿದು ॥
ನರಜನಕೆನರರಂತೆತೋರುತೆ । ಕಿರಿಯಕುಲದವರೆನಿಸಿಕೊಂಡೇ ।
ಹರಸುತಡಗುವರಯ್ಯಕೇಳೆಲೆಮಗನೆತಿಳಿಯೆಂದಾ ॥ ೬೩ ॥
ಅಂದಿನಾಕಲ್ಯಾಣದಾಟವ । ನೆಂದಿಗಾದರುಮರೆಯಬೇಡೈ ।
ಕಂದಕೇಳಲ್ಲಮನಗುರುತವನಾರುಹಿಡಿಯುವರು ॥

ಹಿಂದಿನಾಟವೆಮುಂದೆಬರುವದು । ಮಂದಿಗೇಂತಿಳಿಯುವದುನೀತಿಳಿ ।
ಎಂದುಕರ್ತನುಸಿದ್ಧರಾಮಗೆಪೇಳ್ದನೇನೇನೋ ॥ ೬೪ ॥
ಹೌದುಹೌದೆನ್ನುತ್ತೆರಾಮನು । ಮೋದದಿಂದಾಪರಮಕರ್ತನ ।
ಪಾದಕೆರಗಿಯೆಶಿರವಚಾಚಿದನೆತ್ತಿಗುರುರಾಯಾ ॥
ಆದಿಯಲ್ಲಮನಾಟನಿನ್ನದ । ಭೇದವಹದಾಸೋಗನಡೆಯಿಸು ।
ಬೋಧವಿದುಗುರುಮಂತ್ರವಿದುನಡೆಹೋಗುನೀನೆಂದಾ ॥ ೬೫ ॥
ಪರಮಶಿಷ್ಯರೆಕೇಳಿರೈನೀವ್ । ಗುರುಫಕೀರನಪಾದದಪ್ಪಣೆ ।
ಶಿರದೊಳಾಂತಾಸಿದ್ಧರಾಮನುನಮಿಸಿಗುರುಪದಕೆ ॥
ಹೊರಗೆಬಂದಾಬಂದಭಕ್ತೋ । ತ್ಕರವಿಚಾರಂಗೈದುತಾನತಿ ।
ಹರುಷದಿಂದನ್ನವನುಕೊಟ್ಟನುಸಾವಧಾನದಲಿ ॥ ೬೬ ॥
ಎಲ್ಲರುಂಶ್ರೀಸಿದ್ಧರಾಮನ । ಸಲ್ಲಲಿತಲೀಲೆಯನುಕೇಳುವ ।
ದೆಲ್ಲಕಡೆಗೆಡೆಯಾಡುತಿರುವನ.ರಾಮನನವಂತ ॥
ಎಲ್ಲಭಕ್ತರಶೋಧಗೊಳ್ಳುವ । ನೆಲ್ಲಬಗೆಯಲಿಕೇಳಿತಿಳಿಯುವ ।
ನೆಲ್ಲರಪರಾಮರಿಸುವನುನಿಜದಾಸಭಾವದಲಿ ॥ ೬೭ ॥
ಸುರರುಸಿದ್ಧರುಸಾಧ್ಯರಾಕಿಂ । ಪುರುಷರಾಕಿನ್ನರರುಯಕ್ಷರು ।
ಗರುಡಗಂಧರ್ವಾದಿಗಳುಸದ್ಭಕ್ತರಂದದಲಿ ॥
ಉರಗರಾಖೇಚರರುವಿದ್ಯಾ । ಧರರುವಸುಗಳುಮೊರುತರುಬಂ ।
ದೆರಗುತಿರುವರುನೆರೆಪ್ರಸಾದವನುಂಡುನಲಿಯುವರು ॥ ೬೮ ॥
ಬಂದುಕಡೆನರಪಙ್ತಿಗಡವು । ಮತ್ತೊಂದುಕಡೆಸುರಪಙ್ತಿನಡೆಯುವ ।
ದಂದದಲಿಗುರುಕರ್ತತಾನೇನಿಂತುನೀಡಿಸುತಾ ॥
ಕಂದಕೇಳ್ಗೈಗುರುಪ್ರಸಾದ । ಕ್ಕೆಂದುನೆರೆದವರಲ್ಲಿದೇವ ॥
ವೃಂದವನುನೋಡೆಂದುತೋರಿಸುತಿಹನುರಾಮನಿಗೆ ॥ ೬೯ ॥
ಜಯಜಗದ್ಗುರುಅನ್ನದಾತಾ । ಜಯಮಹಾತ್ಮಕಭಕ್ತಬಾಲಕ ।
ಜಯನಿರಂಜನಮೂರ್ತಿಜಂಗಮದೇವನಿರ್ಮಾಯ ॥
ಜಯಜಿತಾವಲಿಗುರುದಿಗಂಬರ । ಜಯಫಕೀರಸಮರ್ಥಶಂಕರ ।
ಜಯಜಯವೆನಿನಗೆಂದುನಭಕೇರುವದುಸುರನಿಕರ ॥ ೭೦ ॥

ಗುರುಪರಾತ್ಪರವಸ್ತುವೆಂಬವ । ಶರಣಸಂತತಿಕೂಡಿಭಕ್ತರ ।
ಬೆರಿಸಿಬಹುಗುಪ್ತದಲಿಲೋಕಕೆತೋರಿತೊಳಗುತಲಿ ॥
ಜರಿವದುಷ್ಕರಜಡಿದುತನ್ನಯ । ಬಿರುದುಹೊಗಳಿಸಿಮೆರಿಸಿಸೂಚನೆ ।
ಯಿರದೆತೋರಿಸಿಭಕ್ತಿಮಾರ್ಗವತಿದ್ದುತಾಡುವನು ॥ ೭೧ ॥
ಕೆಡಿಸಿಹರುಶಾಸ್ತ್ರಾರ್ಥವನುಗಡ । ಕೆಡಿಸಿಹರುವೇದಾರ್ಥವನುಗಡ ।
ಕೆಡಿಸಿಹರುಸಿದ್ಧಾಂತದರ್ಥವಹೊಲಬನರಿಯದಲೆ ॥
ಕೆಡಿಸಿಹರುಕುಲಧರ್ಮವೆಲ್ಲವ । ಕೆಡಿಸಿಹರುನಿಜಭಕ್ತಿಮಾರ್ಗವ ।
ನೊಡೆಯಸದ್ಗುರುಬೋಧಗೊಳ್ಳದೆಹಲವರಕಟಕಟಾ ॥ ೭೨ ॥
ಗುರುವೆಶ್ರೀಹರಿಯೆಂದುನುತಿಸರು । ಗುರವೆಶಂಕರನೆಂದುನುಡಿಯರು ।
ಗುರುವೆವಾಗ್ವರನೆಂದುತಿಳಿಯರುಬಾಯಬ್ರಹ್ಮಿಗಳು ॥
ಗುರುವೆಸದ್ಗುರುಬಸವನೆನ್ನರು । ಗುರುವೆಶ್ರೀಗುರುಚನ್ನನೆನ್ನರು ।
ಗುರುವೆತಾಂಪ್ರಭುದೇವರೆನ್ನರುಹೇಳಲೇನಿನ್ನು ॥ ೭೩ ॥
ಅರರೆಕೆಲವೆಡೆಯಲ್ಲಿಪರಿಪರಿ । ದುರಿತಕರ್ಮವುನಡೆಯಹತ್ತಿದೆ ।
ನರರೊಳೇನುಂಧರ್ಮವುಳದಿಲ್ಲಕಟಕಲೀಯುಗವು ॥
ಪರರವಿಷಯಾಶೆಯಲಿಸುಳಿವುದು । ಬರಿದೆದೊಡ್ಡವರೆನಿಸಿಮೆರೆವುದು ।
ನರರುಗುಪ್ತಾದ್ವೈತಬಳಿಸುವದಲ್ಲವೊಳಿತಲ್ಲ ॥ ೭೪ ॥
ನಾಶವಾಗುವದೇಹದಲಿಕಡು । ಹೇಸಿಕೆಯಸಂಸಾರದಲಿಬಿಡ ।
ದಾಶೆವಿಡಿದಾಡಿದರುತ್ರೈಮಲಬಲಿಗೆಬೀಳದಲೆ ॥
ಬೇಸರಾಗದೆಯಾರಿಗುಂಜಗ । ದೀಶಸದ್ಗುರುಲೀಲೆಯೆಂದೇ ।
ತೋಷದಲಿಗುರುಸೇವೆಮಾಳ್ಪರುಭಕ್ತರೆಂಬವರು ॥ ೭೫ ॥
ಹರಿಗೆನಾರಾಯಣನುಶಿವನಿಗೆ । ಪರಶಿವನುತಾನೆನಿಸಿಬ್ರಹ್ಮಗೆ ।
ಪರಕೆಪರತರಬೊಮ್ಮವೆನ್ನಿಸಿತೋರ್ಪಮುಹಿಮನಿಗೆ ॥
ವರದಿಗಂಬರಮೂಲಪಾಚ್ಛಗೆ । ಮರಿಯುತಾನೆನಿಸಿರ್ಪರಾಮೇ ।
ಶ್ವರನಿಗಾನಂದದಲಿಬೆಳಗಿರಿಮಂಗಳಾರತಿಯಾ ॥ ೭೬ ॥
ಧರಣಿಯಲಿಗುರುವಾಗಿಪ್ರಮಥೋ । ತ್ಕರಸುಕಾರಣಕರ್ತನೆನಿಸಿದೆ ।
ಸುರಮುನೀಶ್ವರವಂದ್ಯಕರ್ತಪರಾಕುಮುದಿಪಾಚ್ಛಾ ॥

ಧರೆಯೊಳತವರಿಸಿರ್ಪರಾಮೇ । ಶ್ವರನೊಳಡಗಿಯೆನಿಂತುಬೆಳಗುವೆ ।
ಸ್ಮರಿಪರಾತ್ಮಾರಾಮಶಂಭುಪರಾಕುಪ್ರಭುರಾಯಾ ॥ ೭೩ ॥
ಗುರುಮಹತ್ವದಸಾರವಿಂತಿದು । ಗುರುಮಹತ್ವಮನಂತಮಿರ್ಪುದು ।
ಗುರುಮಹತ್ವವನರಿದುಪೇಳುವರಾರುಲೋಕದಲಿ ॥
ಗುರುಫಕೀರೇಶ್ವರನುಗಂಗಾ । ಧರನಮುಖದಿಂಪೇಳಿಸಿದನೀ ॥
ತೆರದಿಮುಗಿದುದುಸಂಧಿಹದಿನೈದನೆಯದೆಂದೆನಿಸಿ ॥ ೭೪ ॥

॥ಇತಿ ಶ್ರೀ ಶಿರಃಪುರಸನ್ಮಠ ಶೂನ್ಯಸಿಂಹಾಸನ ಶ್ರೀ ಭಗವಾನ್ ವಿಭುವಾತ್ಮೀಯ॥ ಗಂಗನಿಂ ಪೇಳಿಸಿದ ಪೌರಾಣದೊಳ್ ಹದಿನೈದನೆಯ ಸಂಧಿಸಮಾಪ್ತಮಿಂತು।

೯೪೪ ಪದ್ಯಂಗಳಿಗೆ ಮಂಗಲಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ

## ೧೬ನೇ ಸಂಧಿಯು.

### ಸಿದ್ಧರಾಮೇಶ್ವರಪಟ್ಟ.

ಸೂಚನೆ—

ಶ್ರೀಗುರುವುಮರಿದೇವರಿಗೆಮಿಗೆ । ಶ್ರೀಗುರುತ್ವವನಿತ್ತುಸುಸ್ಥಿರ ।
ವಾಗಿಪರಶಿವಪಟ್ಟಕಟ್ಟಿದನಂತರಂಗದಲಿ ॥ ॥ ಪಲ್ಲ ॥
ಅಷ್ಟಮದಗಳುನಷ್ಟಮೊಳ್ಪವು । ಬಿಟ್ಟುಬಿಡಬೇಕೆಂದುಭುವಿಯಲಿ ।
ಕ್ಲಿಷ್ಟಮತಿಗಳುನುಡಿವುತಿರುವರುಬಾಯಿಬ್ರಹ್ಮವಿದು ॥
ಸೃಷ್ಟಿಗೊಂದನುತೊರೆದುವರ್ತಿಸ । ರಷ್ಟಮದದಲಿಬೆರತುಮೆರೆವರು ।
ಶಿಷ್ಟರಿಗೆಧಿಕ್ಕರಿಸುತಿರುವರುಹೇಳಲೇನದನು ॥ ೧ ॥
ಹೆಣ್ಣುಪಾಪದಮುದ್ದೆಯದು ಪರ । ಹೆಣ್ಣಿನಾಶೆಯುಸಲ್ಲದದು ಪರ ।
ಹೆಣ್ಣಿಗಾಡುವರೆಲ್ಲಕೆಟ್ಟಪರೆಂದುಹೇಳುವರು ॥
ಹೆಣ್ಣಿನುದ್ಭ್ರಮೆಗೊಂಡುಮಿಗೆಮು । ಕ್ಕಣ್ಣಶಿವಪಾದವನುಮರತೇ ।
ಹೆಣ್ಣಿಗಾಡಿಯೆಮಣ್ಣುಕೂಡುವರಕಟಬಹುಜನರು ॥ ೨ ॥
ಭೂಮಿಯಲಿತೋರುವದುಸಕಲವು । ಭೂಮಿಯಲಿನಸಿಸುವದುಸರ್ವವು ।
ಭೂಮಿಯಲಿಸ್ಥಿರವಲ್ಲವಾವುದುಮಿನ್ನುಲೋಕದಲಿ ॥

ಸ್ವಾಮಿಯಾಸದ್ಭಕ್ತರಿಗೆ ಪರ । ಭೂಮಿಸಲ್ಲದದೆಂಬರಾಪರ ।
ಭೂಮಿಯಪಹರಿಸುವರು ಹರಹರ ಲೋಕ ಡಾಂಭಿಕರು ॥ ೩ ॥
ಸಿರಿಯು ಬಹು ಚಂಚಲೆಯು ಪುಣ್ಯೆ । ಸಿರಿಗೆಸಿರಿಬೆರತಿಹಳುಜಗದೊಳು ।
ಸಿರಿಯುಸುಸ್ಥಿರಳಲ್ಲವೆಂಬರುಬಾಯುಮಾತಿನಲಿ ॥
ಧರೆಯೊಳೆಂದಿಗು ಮನ್ಯಜನರಾ । ಸಿರಿಯುಸಲ್ಲದು ಸಲ್ಲದೆಂಬರು ।
ಪರರ ಸಿರಿಯಪಹಾರಮಾಳ್ಪರು ಭಂಡರವನಿಯಲಿ ॥ ೪ ॥
ಬಡವರಿಗೆ ಬಾಯ್ಬಡೆದು ನುಡಿವರು । ಕಡುಹಿನಲಿ ಚೇಷ್ಟೆಯನುಮಾಳ್ಪರು ।
ಬಡಜನರಿಗೊಂದಿತ್ತು ಹತ್ತನುಮಾಡಿಸುಲಿವವರು ॥
ಪೊಡವಿಗವನೆಂತಪ್ಪನಾದರು । ಕಡೆಗೆನರಕದಿ ಬೀಳ್ವನಕ್ಕಟ ।
ಬಡವರಿಗೆಬಳಲಿಸಲುಬಾರದು ಭಕ್ತರೆಂಬವರು ॥ ೫ ॥
ಮಗಳೆನ್ನಿಸಿ ಗುರುವಿನಡಿವಿಡಿ । ದಿರುವರೆಲ್ಲರು ಕೇಳಿರಾಶ್ರೀ ।
ಗುರುಫಕೀರೇಶ್ವರನಮುಂದಿನ ಲೀಲೆಯಂದವನು ॥
ಪುರದೊಳಾಪರಿಸಿದ್ಧರಾಮೇ । ಶ್ವರನುಬ್ಯೆಲಿಗೆಬಂದಬಳಿಕಾ ।
ಪುರಜನವುಭಯಗೊಂಡುಬಾಗುವದಾಯ್ತುಭಕ್ತಿಯಲಿ ॥ ೬ ॥
ನಿತ್ಯದಲಿಶ್ರೀಸಿದ್ಧರಾಮನು । ಸತ್ಯಭಕ್ತರಕೂಡಿಕೊಂಡೇ ।
ಹೊತ್ತುಗಳೆವುದಕಾಗಿ ಸಂಚರಿಸುವನು ಗ್ರಾಮದಲಿ ॥
ಉತ್ತಮರಮನೆಯಲ್ಲಿ ಕೂಡ್ರುತೆ । ಬಿತ್ತರಿಸಿ ಶಿವಲೀಲೆಹೇಳುತೆ ।
ಮೃತ್ಯುಹರನಾ ಶರಣರಾಟವ ನೊರೆವನಾರಾಮಾ ॥ ೭ ॥
ಹಿಂದೆಬಂದವರಾರುಜಗದೊಳ । ಗಿಂದುಬಂದಿಹರಾರುಜಗದೊಳು ।
ಮುಂದೆಬರುವವರಾರುಪ್ರಭುವೇಪ್ರಭುವಿನಂಶಿಕರೇ ॥
ಎಂದಿಗಾದರುಬಂದುಜಗದೊಳು । ಮಂದಿಯಲಿಭಯಭಕ್ತಿಪುಟ್ಟಿಸಿ ।
ಮುಂದೆಸದ್ಗತಿಮುಕ್ತಿಗಿರಿಸುವರೆಂಬನಾರಾಮಾ ॥ ೮ ॥
ಹಡೆದತಾಯನುರಕ್ಷಿಸಿರಿನೀವ್ । ಪಡೆದತಂದೆಯಜೋಕೆಮಾಡಿರಿ ।
ಬಿಡದೆಸಂಸಾರದಲಿಸುಖಿಸಿರಿಭಕ್ತಿಮಾರ್ಗದಲಿ ॥
ನಡಿಸಬೇಡಿರಿಹೆಮ್ಮೆಯನುಪರ । ರೊಡವೆಗಾಶೆಯಮಾಡಬೇಡಿರಿ ।
ಮೃಡನಭಕ್ತರುನೀವುನಮ್ಮವರೆಂಬನಾರಾಮಾ ॥ ೯ ॥

ಹರಟಚೇಷ್ಟೆಕುಯುಕ್ತಿವಿದ್ಯಾ । ಭರವುಮದಚಾತುರ್ಯವಾತ್ಮೋ ।
ತ್ಕರುಷಪರಜನನಿಂದೆಯನೃತವದುಕೃತಘ್ನತ್ವ ॥
ಪರಮಪುಣ್ಯಪ್ರಾಪ್ತಜನ್ಮದೊ । ಳಿರಲುಬಾರದುಬಿಡಿರಿನೀವಾ ।
ಹರಿಯಭಕ್ತರುಜಗದೊಳೆಮ್ಮವರೆಂಬನಾರಾವಮಾ ॥ ೧೦ ॥
ಹರಿಯಧ್ಯಾನಿಪುದಿಲ್ಲಬ್ರಹ್ಮನ । ಸ್ಮರಿಸುವದುಮುನ್ನಿಲ್ಲಹರನಿಗೆ ।
ಕರಮುಗಿದುಶಿರಬಾಗಿಪ್ರಾರ್ಥಿಪುದಿಲ್ಲನಿಮ್ಮೊಳಗೆ ॥
ಸಿರಿಗೆವಾಣಿಗೆರಾಜರಾಜೇ । ಶ್ವರಿಯೆನಿಪಜಗದಾದಿದೇವಿಗೆ ।
ಹರುಷದಲಿವಂದಿಪುದುನಿಮಗಿಲ್ಲೆಂಬನಾರಾವಮೂ ॥ ೧೧ ॥
ಹರಕರಿಗೆತಿರುಕರಿಗೆಕುಂಟರಿ । ಗಿರದಲಾಕುರುಡರಿಗೆನಾನಾ ।
ತೆರದಬಡಬಗ್ಗರಿಗೆಜಗದೊಳನಾಥರೆನಿಪರಿಗೆ ॥
ಕರುಣಿಸುವದೇನಿಲ್ಲಹಿಂದಿನ । ದರವುನಿಮಗೇನಿಲ್ಲಸಿರಿಮದ ।
ವೆರಿಸಿಮೆರೆವರಿಗೇನುಕಾಯುವದೆಂಬನಾರಾವಮೂ ॥ ೧೨ ॥
ನಿಂದುಕೆಣಕುವಸಂಧಿಹುಡುಕುವ । ಹೊಂದಿಸೆಣಿಸುವಬಂಧಿಹೊಗಿಸುವ ।
ಸಂದಿಹಿಡಿಯುವನಿಂದೆಗೈಯುವವೈರಭಾವದಲಿ ॥
ಕುಂದನಿಕ್ಕುವಚಂದನೋಡುವ । ಹಿಂದೆಬೈಯುವಮುಂದೆಹೊಗಳುವ ।
ಹಂದಿಮನುಜರಿಗೆಂತುರಕ್ಷಿಪುದೆಂಬನಾರಾವಮೂ ॥ ೧೩ ॥
ತಂದೆತಾಯ್ಗಳಮಾತುಕೇಳಿರಿ । ಬಂದಗುರುಹಿರಿಯರಿಗೆಬಾಗಿರಿ ।
ನಿಂದೆಮೂಡದನಾಥರಿಗೆಕೈಲಾದುದನುಕೊಡಿರಿ ॥
ಬಂಧುಬಳಗದಕಡೆಗೆ ನೋಡಿರಿ । ಹಿಂದುಮುಂದನುತಿಳಿದುನಡೆಯಿರಿ ।
ಚಂದವಿದುಸಂಸಾರಮಾಡಿರಿಯೆಂಬನಾರಾವಮಾ ॥ ೧೪ ॥
ಬರುವಸಮಯದೊಳೇನುತಂದಿರಿ । ಧರಿಯೊಳೇನದುಘಳಿಸಿಕೊಂಡಿರಿ ।
ಮರಳಿಹೋಗುವಕಾಲಕೇನೈಸಿರಿಯನೊಯ್ಯುವಿರಿ ॥
ಕುರಿಗಳಂದದಿನಾಯಿಗಳ ಸೂ । ಕರಗಳಂದದಿವಿಷಯದಲಿನೀ ।
ವಿರುವದೇನಿದುಚಂದವೇನಿಮಗೆಂಬನಾರಾವಮೂ ॥ ೧೫ ॥
ಎಲ್ಲಕುಲಕಧಿಕಾರಿಸದ್ಗುರು।ವೆಲ್ಲಮತಕಧಿಕಾರಿಸದ್ಗುರು।
ವೆಲ್ಲದೈವಕ್ಕೊಡೆಯಸದ್ಗುರುವಲ್ಲಮಪ್ರಭುವು॥

ಖುಲ್ಲರಂತಕಭಕ್ತಪಾಲಕ । ನಿಲ್ಲಿಗೈತಂದಿಹುದುಸತ್ಯವೊ ।
ಸುಳ್ಳೊನೋಡಿರಿನೀವುಹೇಳಿರಿಯೆಂಬನಾರಾವೂ ॥ ೧೬ ॥
ಈತೆರದೊಳಾಸಿದ್ಧರಾಮನು । ಭೂತನಾಥನಪರಮಮುನಿವೂ ।
ರೀತಿಯನುತಿಳಿಸುತ್ತೆಲೀಲಾಮಾತ್ರಬೆಳಗುತಲಿ ॥
ಆತುರದಿನೆರೆದಿರ್ಪಜನರಿಗೆ । ಗಾತಕಲ್ಪದ್ರುಮದತೆರದಿಂ ।
ಖ್ಯಾತಿಯಿಂದನ್ನವನುಕೊಡುವನುಬಿಡದೆಪಗಲಿರಳು ॥ ೧೭ ॥
ರಾಮಭಕ್ತಿಗೆರಾಮನಿಷ್ಠೆಗೆ । ರಾಮಸೇವೆಗೆರಾಮಪೂಜೆಗೆ ।
ರಾಮಲೀಲೆಗೆಕರ್ತತನ್ನೊಳೆತಾನೆನಲಿದಾಡಿ ॥
ಭೂಮಿಯೊಳಗಿಂತಿಪ್ಪರಾರ್ಯೈ । ಬಾಮಗನೆಬಾರೆನ್ನತಾತನ ।
ಪ್ರೇಮದಿಂಕರೆದೊಯ್ದನೊಂದಾನೊಂದುದಿವಸದಲಿ ॥ ೧೮ ॥
ಬರಿದೆಕೈಪವಧುಸಿಜಗದೊಳು । ವರವಿರಕ್ತಿಯರೂಪತೋರ್ಪರು ।
ಗುರುಫಕೀರೇಶ್ವರನಚಾರಿತ್ರವನುಕೇಳುವದು ॥
ಮರಿಯೆನಿಪಶ್ರೀಸಿದ್ಧರಾಮಗೆ । ಗುರುಫಕೀರೇಶ್ವರನುನುಡಿದನು ।
ಕರವಿಡಿದುಕೇಳ್ಮಗನೆಹೇಳುವದೆಲ್ಲನಡಿಸೆಂದಾ ॥ ೧೯ ॥
ಬರೆವೆಕೇಳ್ಮೈಮಗನೆನೀನೀ । ಧರೆಯೊಳತಿಲೀಲೆಯಲಿಲೌಕಿಕ ।
ದಿರವನೆಲ್ಲವನುಗುಳದೊಂಬಲವೆಂದುಧಿಕ್ಕರಿಸು ।
ಸ್ಮರಿಪಭೂದೇವತೆಗೆಸಂತಸ । ವೆರಿಸುಭಕ್ತರಬಳಗಹೆಚ್ಚಿಸು ।
ಗುರುಸದಾಶಿವನೆನಿಸುಬಾಲಬ್ರಹ್ಮಯಾಗೆಂದಾ ॥ ೨೦ ॥
ವಿರತಿಯೊಳಗೆಡೆರಿಲ್ಲಕರ್ಮದೊ । ಳಿರುವವೈಬಲುತೊಡರುತೊಡಕುಗ ।
ಳೆರಡುವಮಾರ್ಗದಿಮುಕ್ತರಪ್ಪರುಸಾಧುಸಜ್ಜನರು ॥
ವಿರತಿಮಾರ್ಗವುಸುಲಭಮುಕ್ತಿಗೆ । ಧರೆಯಕರ್ಮದಮಾರ್ಗದುಸ್ತರ ।
ಮರವಿಮನುಜರುಮುಕ್ತಿಮಾರ್ಗಕೆಸೇರರರೆಂದೆಂಮ ॥ ೨೧ ॥
ಕರ್ಮಮಾರ್ಗವಬಿಡುವದೊಳ್ಳಿತು । ಕರ್ಮವೆಂಬುದುಕೆಡಿಸಿಬಿಡುವದು।
ಕರ್ಮದಲಿಕೊನೆಗಂಡುಪಾರಾಗುವದುಬಲುಬಿಗಿಯು ॥
ಕರ್ಮಬಿಟ್ಟರೆಬ್ರಹ್ಮಚರ್ಯವು । ಗನ್ಮನೇಹೇಳೆದಪುದುನೀನಿ ।
ಷ್ಕರ್ಮಿಬಾಲಬ್ರಹ್ಮಿನಿನಗೇಂಹೇಳ್ವುದೈಯೆಂದಾ ॥ ೨೨ ॥

ಭೋಗಸಂಪದದಲ್ಲಿ ಬಹುಭವ । ರೋಗಿಯಾದೊಡೆಯೋಗವೇತಕೆ ।
ತ್ಯಾಗವೊಡದಯೋಗವೇನದುಫಲಿಸದೆಂದೆಂದು ॥
ಯೋಗಚಿಂತೆಗೆಬಿದ್ದು ಕೆಲವರು।ಶ್ರೀಗುರುವಿನಾಪಾದವುರೆತವ ।
ರಾಗಿಮುಕ್ತಿಯಹೊಂದದಲೆತೊಳಲುವರುಕೇಳೆಂದ ॥ ೨೩ ॥
ಆವನೊಳಗಜ್ಞಾನವಿಲ್ಲವ।ದಾವನೊಳುಭ್ರಮೆಯಿಲ್ಲಸಂಶಯ ।
ಕಾವನೊಳಗೆಡೆಯಿಲ್ಲವಾವನೋಳಿಲ್ಲವಭಿಮಾನ ॥
ಈವಸುಂಧರೆಯಲ್ಲಿ ತಾನವ । ನಾವನಾದೊಡವುವನೆಯೋಗಿಯು ।
ಭಾವಿಸಲುಶಿವಯೋಗಿನೀನಾಂಪೇಳ್ವುದೇನಂದ ॥ ೨೪ ॥
ನೀರನೊಳಕೊಂಡೊಡನೆವಸ್ತ್ರವು।ನೀರೊಳಗೆತಾಮುಳುಗುವಂತೆಯೆ ।
ಸೇರಿವಿಷಯದಿಮುಳುಗಿಕೆಲವರುಕೆಟ್ಟುಹೋಗುವರು ॥
ನೀರೊಳಗೆತಾಪುಟ್ಟತಾವರೆ । ನೀರನೊಂದದೆಸೊಗಯಿಸುವವೋಲ್ ।
ಮೀರಿವೊಯೆಗೆಸುಖಿಸುವರನಾಂಕಾಣೆನ್ಯೆಯೆಂದ ॥ ೨೫ ॥
ಕೆಸರೊಳಗೆಸುಳಿದಾಡಿಜೀವಿಸಿ।ಕೆಸರುಹೊಂದದೆವುಲಿನವಾಗದೆ ।
ರಸೆಗೆಸೋಜಿಗವೆನಿಸುವಾಕುಂಬಾರಹುಳದಂತೆ ॥
ವಿಷಮುಲೌಕಿಕರಲ್ಲಿ ತೋರು।ತ್ತಸಮುಶಿವಸುಖತೇಜದಿಂದೀ ।
ವಸುಧೆಯೆಲಿಥಳಥಳಿಪಪುರುಷರೆಧನ್ಯರವರೆಂದಾ ॥ ೨೬ ॥
ಯೋಗಿಯೇಶಿವಮೂರ್ತಿಮರ್ತ್ಯಕೆ । ಯೋಗಿಯೇಪರದೇವಿಯೆನಿಪನು ।
ಯೋಗಿಯೇನಿಜವಸ್ತುಸದ್ಗುರುವೆಂಬುದಾಶ್ರುತಿಯು ॥
ಯೋಗಿಗೀಶಗೆಭೇದವೊಡ । ಲ್ಯಾಗದೆಂದಿಗುಸೀನುಕೇಳ್ಶಿವ ।
ಯೋಗಿರಾಮನೆನಿನಗೆಪೇಳುವೆನಾನುಕೇಳೆಂದ ॥ ೨೭ ॥
ಶ್ರೀಗುರುವಿನಭಿಮತಕತೆರದಿಂ । ಯೋಗಮುಖದಲಿಸರ್ವಸಂಗ ।
ತ್ಯಾಗವೊಡಿಯೆಕೆಲರುಯೋಗಿಗಳಾಗಿಸುಖಿಸುವರು ॥
ಶ್ರೀಗುರೂನ್ನತಲೀಲೆಯಲಿಶಿವ । ಯೋಗದಲಿನಿಂತಿಂತುಲೋಕಕೆ ।
ಶ್ರೀಗುರುವೆತಾವೆನಿಸಿಬೆಳಗುವರಯ್ಯಕೇಳೆಂದ ॥ ೨೮ ॥
ಕಿರಿಯನಾಗಲಿಹಿರಿಯನಾಗಲಿ । ಧರೆಯೊಳಾವನುಮಾದೊಡಾಗಲಿ ।
ಗುರುವರನಹಿಡಿಯದಲೆಸಾಧಿಸದವನಕಾರ್ಯವದು ॥

ಮರಿಯೆಕೇಳೈಸಿದ್ಧರಾಮನೆ । ಗುರುಕಟಾಕ್ಷವದಾಯ್ತುನಿನ್ನೊಳು ।
ಹರಿಹರಬ್ರಹ್ಮಾದಿಗಳುಪ್ರತ್ಯಕ್ಷರಿಹರೆಂದಾ ॥ ೨೯ ॥
ನರಗುರಿಗಳಾಗುವರೆಗುರುಗಳು । ನರಗುಂಗಳುಪದೇಶಕೊಡುವರೆ ।
ನರಗುಂಗಳುಪದೇಶಕೊಂಬರೆಬಾಯಮಾತಿನಲಿ ।
ನರಗುರಿಗಳೇಂಪಟ್ಟಕೊಡುವರು । ನರಗುಂಗಳೇಂಪಟ್ಟಕೆಸೆವರು ।
ಮರಿಯೆನಿನ್ನೊಳಗಾನೆಪಟ್ಟವುನೋಡಿಕೋಯೆಂದ ॥ ೩೦ ॥
ಹರನುಕಟ್ಟಿದಪಟ್ಟವಿದುಗಡ । ಹರನಪಟ್ಟವುಕಣ್ಣಿಕಾಣದು ।
ನರರಪಟ್ಟವುಮತದಪದ್ಧತಿಗಾಗಿಕಟ್ಟುವದು ॥
ಹರನಪಟ್ಟವುಸಾಂಬಲೀಲೆಯು । ಗುರುತುಗಂಟದುಗುರುಮಹತ್ವವು ।
ಧರೆಯೊಳತಿಲೀಲೆಯಲಿನೀಬೆಳಗೆಂದನಾಕರ್ತಾ ॥ ೩೧ ॥
ಜನರಭಕ್ತಿಗೆಬಿಡದಲೆಾಲಿಸ । ಜ್ಞನರಿಗುರೆನೀನಡಿಸಿಕೊಡುದು ।
ರ್ಜನರಿಗೊಲೆಯದೆನಿತ್ಯದಂಡಿಸುನಿನ್ನಸೂತ್ರದಲಿ ॥
ಚಿನುಮಯನನಿರುಪಮದಸಿಂಹಾ । ಸನಪದುಮದಲಿಪರಕೆಪರತರ ।
ವೆನಿಸುವಾನಿಜಹಂಸನಾಗೆಲೆಮಗನೆಕೇಳೆಂದಾ ॥ ೩೨ ॥
ಕೇಳುಬಾಲಕಭಕ್ತಪೋಷಕ । ಕೇಳುಸುಂದರಯೋಗಬಂಧುರ ।
ಕೇಳುಜಗದಭಿರಾಮಗುಣನಿಸ್ಸೀಮಕಲಿಭೀಮ ॥
ಕೇಳುಶ್ರೀಕರಲೋಕಭೀಕರ । ಕೇಳುಸದ್ಗುರುನಿಜಜಗದ್ಗುರು ।
ಕೇಳುಕೇಳೆಂದೊಡೆದುಹೇಳಿದನಾಫಕೀರೇಶ ॥ ೩೩ ॥
ಏನುಹೇಳಿದನೇನೊಕರ್ತನ । ದೇನುಕೇಳಿದನೇನುರಾಮನ ।
ದೇನುಮಂತ್ರವೊತದನುತಂತ್ರವೊಗುರುವೆತಾಬಲ್ಲಾ ॥
ತಾನೆತನ್ನೊಳಗಾಗಿಪರಶಿವ । ಸ್ವಾನುಭವಸುಜ್ಞಾನಸದರಿನೊ ।
ಳೇನುನಡಿಸುವೆನೆಂದನೋನಲಿದಪ್ಪಿದನುಕರ್ತಾ ॥ ೩೪ ॥
ಮುಸಲಮಾನರಕುಲದಿತೋರಿ । ರ್ಪಸಮಸದ್ಗುರುನನ್ನನಿಜಗುರು ।
ಪೊಸೆದುನನ್ನನುಶ್ರೀಫಕೀರನ ಮಾಡಿದನುಬಳಿಕ ॥
ಅಸಮನಯನನಲೀಲೆಯಲಿನಸ । ಗೆಸೆದನಾತನವರಕಟಾಕ್ಷವು ।
ವಸುಧೆಯಲಿನಿನಗಾಯ್ತುನೀನೋಡೆಂದಮುದಿಪಾಚ್ಛಾ ॥ ೩೫ ॥

ನನ್ನಮತದಲಿಮಂಗಳಾರತಿ । ಯಿನ್ನುನಿತ್ಯದಿ ದೀನ್ಜಗಾಸಲಿ ।
ನನ್ನಮತದಲಿನಡೆಯಬೇಕೆರಡಕ್ಕುಸರಿಯೆನಿಸಿ ।
ಅನ್ನಕೊಡುವದುಭೇದವೂಡದೆ । ಭಿನ್ನಭಾವದೊಳೆಲ್ಲನೋಳ್ಪುದು ।
ಚನ್ನಿಗನೆನೀಕೇಳುಹೇಳುವದೆಲ್ಲನಡಿಸೆಂದಾ ॥ ೩೬ ॥
ಎಲ್ಲಮತಗಳುನನಗೆಸೈಸರಿ । ಯೆಲ್ಲಮತಕನುಸರಿಸಿತೋರಿವೆ ।
ನೆಲ್ಲಮತಕವನೊಬ್ಬನೇಶ್ರೀಅಲ್ಲಮಪ್ರಭುವು ॥
ಎಲ್ಲಕುಲದೊಳುಬಂದುನಿಂದೊಡ । ವೆಲ್ಲಮತದವರರಿಯಲಿಲ್ಲವು ।
ಖುಲ್ಲಖಳರೇಂತಿಳಿವರೆಂದನುಗುರುಫಕೀರೇಶ ॥ ೩೭ ॥
ಗುರುಸುಪುತ್ರನೆಕೆಳುನೀನೀ । ತೆರದೊಳೆಲ್ಲವನಡಿಸುಬೆಳಗೀ ।
ಪರಿಯೊಳೆಂದೆಗುನಡೆಯಬೇಕೀನನ್ನತಾಣದಲಿ ॥
ದುರಿತಕರ್ಮಿಗಳೇನುತಿಳಿಯುವ । ಠರಿತುಕೋನಿನ್ನೊಳಗೆನೀನೇ ।
ಹರನಮುಂಡಿಗೆಮರ್ತ್ಯರೆತ್ತುವರೇನಲ್ಲೆಯೆಂದಾ ॥ ೩೮ ॥
ಹರಿಯುಮಲ್ಲವುಹರನುಮಲ್ಲವು । ಸರಿಸಿರುಹಭವನಲ್ಲನೀಶ್ರೀ ।
ಗುರುದಿಗಂಬರದತ್ತಶೋಭಿಪಸಚ್ಚಿದಾನಂದ. ॥
ಧರೆಯೊಳೀನರದೇಹದಿಂದವ । ತರಿಸಿತೋರುತ್ತಿರ್ದೊಡಂಗಡ ।
ಗುರುವುನಿತ್ಯವಲಾಕುಬ್ಜೈಲಿಗೆಬೈಲುನೀನೆಂದಾ ॥ ೩೯ ॥
ನಮ್ಮಕುಲವದುಶಿವನಕುಲಗಡ । ನಮ್ಮಸಂತತಿಶಿವನಸಂತತಿ ।
ನಮ್ಮಪಟ್ಟವುಧರಣಿಯಲಿಶಿವಪಟ್ಟನಿರ್ಲಯವು ॥
ನಮ್ಮಪಂಥವುಶಿವನಪಂಥವು । ನಮ್ಮಛಲವದುಶಿವನಛಲಗಡ ।
ನಮ್ಮದೆಂಬುವದಿಲ್ಲಲೀಲಾಮಾತ್ರಕೇಳೆಂದ ॥ ೪೦ ॥
ನಮ್ಮವಾಸವುಮಸಣದೆಡೆಯದು । ನಮ್ಮಮಾರ್ಗವುಶೋಡಿಮಾರ್ಗವು ।
ನಮ್ಮಗಂಟದುಬರಿಯೆಗಂಟೇಬ್ರಹ್ಮತೇಜವದು ॥
ನಮ್ಮಸಿಂಹಾಸನವುಶೂನ್ಯವು । ನಮ್ಮರೂಪವುನಿತ್ಯಬೈಲದು ।
ನಮ್ಮದೆಂಬುವದೆಲ್ಲಪರಶಿವನಾಟಕೇಳೆಂದ ॥ ೪೧ ॥
ಬಾಲಕನೆಭೂಲೋಕದಲಿನೀ । ಬಾಲಭಾಸ್ಕರನಂತೆಪ್ರೋಲ್ಸಲೆ ।
ಕಾಲಕಾಲಕೆಬಲಿದುಬೆಳಗಾಬ್ರಹ್ಮತೇಜದಲಿ ॥

ಲೀಲೆಗಳನಾಡುತ್ತೆದುರ್ಜನ । ಜಾಲವನುದಂಡಿಸುತೆಭಕ್ತಿಗೆ ।
ಮೂಲಕಾರಣನಾಗುಜಗದೊಳಗಾಡುನೀನೆಂದ ॥ ೪೨ ॥
ಅಡಿಗಡಿಗೆನಿಜಲೀಲೆಯಲಿಗಡ । ಮೃಢನಕಡುಪಾವಾಡುತೋರ್ಕುಂ ।
ಕಡೆಗುನಡೆಗುಂಶ್ರೀಜಗದ್ಗುರುವೆಂಬಬಿರುದುಗಳು ॥
ಮೃಡನದೃಢಸಂಸ್ಥಾನದಲಿನೀ । ನೊಡೆಯನಾಗಿರುಯೋಗದಲಿಗಡ ।
ಬಿಡದೆನಿನ್ನೊಳಗಾನುಥಳಥಳಿಸುವೆನುತಿಳಿಯೆಂದಾ ॥ ೪೩ ॥
ಇಂತುಕರ್ತನುನುಡಿದುರಾಮನಿ । ಗಂತರಂಗದಿಕಟ್ಟಪಟ್ಟವ।
ನಿಂತುಮರ್ತ್ಯದೊಳಿಸೆದುತೋರೆಂದೊಳಗೆಬೆಳಗಿರಲು ॥
ಅಂತರಂಗಾನಂದಲಹರಿಯೊ । ಳಂತುಮೈಮರೆದಿರ್ದರಾಮನು ।
ಚಿಂತೆಯಳಿದೇಬಾಗಿದನುಪ್ರಭುರಾಯನಡಿಗಳಿಗೆ ॥ ೪೪ ॥
ತನ್ನಕುವರನನೆತ್ತಿಕರ್ತನು । ತನ್ನಭಕ್ತರಕಡೆಗೆನೋಡುತೆ ।
ತನ್ನಮುಂದಣಕಾರಣೋತ್ಸವಹೇಳತೊಡಗಿದನು ॥
ಕುನ್ನಿಮನುಜಾಗೇನುಹೇಳ್ವುದು । ಸನ್ನಿಮನುಜಾಗೇನುತಿಳಿವುದು ।
ನನ್ನಭಕ್ತರೆಪೇಳ್ವೆಕೇಳಿರಿಯೆಂದನುದಿಪಾಜ್ಞಾ ॥ ೪೫ ॥
ನಿಮ್ಮಮಗನಿಗೆತಿಳಿಸಿಹೇಳಿಹೆ । ನಿಮ್ಮಬಂಧುಗೆಭಾಗ್ಯಕೊಟ್ಟಹೆ ।
ನಿಮ್ಮತಂದೆಗೆಪಟ್ಟಗಟ್ಟಹೆನೀಗಲೋಕದಲಿ ॥
ನಿಮ್ಮಕೂಸನುಜೋಕೆಮಾಡಿ । ನಿಮ್ಮಗುರುವಿನಸೇವೆನಾಡಿ ।
ನಿಮ್ಮಮನದಂತೆಲ್ಲಮಾಡಿಹೆನೆಂದನುದಿಪಾಜ್ಞಾ ॥ ೪೬ ॥
ಮುಂದೆಬಹುಲೀಲೆಗಳುನಡೆವವು । ಮುಂದೆಪಾವಾಡುಗಳುಮೆರೆವವು ।
ಮುಂದೆಸದ್ಗುರುಪಾದದುತ್ಸವಕಾರ್ಯಸಾಗುವವು ॥
ಮುಂಧೆಸಕಲರುಭಕ್ತರಪ್ಪರು । ಮುಂದೆಮಠವೈಸಿರಿಯುಬೆಳೆವುದು ।
ಮುಂದೆನೋಡಿರಿಯೆಂದುನುಡಿವನುಗುರುಫಕೀರೇಶ ॥ ೪೭ ॥
ಮುಂದೆಭಕ್ತರಬಳಗಬೆಳೆವುದು । ಮುಂದೆಶಿಷ್ಯರವರ್ಗವೆಸೆವುದು ।
ಮುಂದೆತಲೆದೋರುವವುಲೋಕದಕುಂದುಕೊರತೆಗಳು ॥
ನಿಂದುನಾನೇಪಾರುಮಾಡುವೆ । ನಿಂದಕರಹಲ್ಗಳನುಮುರಿಯುವೆ ।
ನೆಂದುನುಡಿದಾಸಿದ್ಧರಾಮಗೆಂದಗುರುರಾಯಾ ॥ ೪೮ ॥

ಗುರುಫಕೀರೇಶ್ವರನುನೀನೀ । ಧರೆಯೊಳತಿಲೀಲೆಯಲಿಶೋಭಿಸು ।
ಸ್ಮರಿಪಭೂದೇವತೆಗೆಸಂತಸವಿರಿಸುನಿತ್ಯದಲಿ ॥
ಚರಿಸುತಂದದಿಸರ್ವಕುಲದೊಳ । ಗಿರುವಮನುಜರಭಕ್ತಿಯನು ಸ್ವೀ ।
ಕರಿಸುಕರುಣಿಸುನಡೆಸಿಕೊಡುಬಡಜನಕೆಬಿಡದೆಂದ　　॥ ೪೯ ॥
ಗುರುವೆಗುರುವೇಗುರುವೆಯೆನ್ನು । ತ್ತಿರುವಭಕ್ತರೆಕೇಳಿರಾತ್ರೀ ।
ಗುರುವುರಾಮುಂಗಿಂತುಪೇಳುತ್ತೆಂದ ಭಕ್ತರಿಗೆ ॥
ಇರುವೆನೀಕಡುಹುತ್ತಿನಲಿಸಾ । ಸುರುಗನೊಂದಿಗೆಸಿದ್ಧರಾಮೇ ।
ಶ್ವರನೊಳಿರುವೆನು ನೀವು ಸೇವೆಯಮಾಡಿರೆಂತೆಂದ　　॥ ೫೦ ॥
ಗುರುಫಕೀರನುಸಿದ್ಧರಾಮೇ । ಶ್ವರನುಲಿಂಗಾನಂದದಲಿಭಾ ।
ಸುರತಪಸ್ಸಾಮ್ರಾಜ್ಯಸಂಪದದಲ್ಲಿ ಶೋಭಿಪನು ॥
ನರಗುರಿಗಳಿದನೇನುತಿಳಿವರು । ಪರಮಭಕ್ತರು ನೀವುನಿಮಗಾ ।
ನಿರಿಸುವೆನುಕೈಲಾಸದಲಿಮುಂದೆಂದಮುದಿವಾಛ್ಛಾ　　॥ ೫೧ ॥
ಜನರಗೊಡವೆಗೆಹೋಗಬೇಡಿರಿ । ಜನರಿಗಾವುದುತಿಳಿಸಬೇಡಿರಿ ।
ಜನರುಪಾಪವಗಳಿಸಿನರಕಕೆಬಿದ್ದುಬಳಲುವರು ॥
ತನುಸಿರಿಗೆನೀವ್ನಂಬಬೇಡಿರಿ । ಮನಸಿನಿಚ್ಛೆಗೆಹರಿಯಬೇಡಿರಿ ।
ನೆನಹುಮಾತ್ರಕೆನಿಮಗೆಕಾಣುವೆನೆಂದಪ್ರಭುರಾಯ　　॥ ೫೨ ॥
ಹೇಳುತಿರಲಾಕರ್ತನೀಪರಿ । ಕೇಳುತಾಸದ್ಭಕ್ತರೆಲ್ಲರು ।
ತಾಳಿದತಿಹರುಷದಲಿಹಾಮಾಗುರುವೆಗತಿಯೆನುತ ॥
ಮೇಲುಕೆಳಗಣಲೋಕಕರ್ತನ । ಲೋಲಸದ್ಗುರುಸಿದ್ಧರಾಮನ ।
ಕಾಲಕಾಲಕೆಸೇವೆಮಾಡುವರಾದರೇಂಕೃತರೊ　　॥ ೫೩ ॥
ಆಪರಾತ್ಪರವಸ್ತುವನುಮರೆ । ದಾಪರಾಂಬನಧ್ಯಾನವನುಬಿ ।
ಟ್ಟಾಪರಮಶಿವಶರಣರಾಸತ್ಸಂಗವನುತೊರೆದು ॥
ಪಾಪದಲಿಪಂದಾಡಿಕೆಡುವರು । ಕೋಪದಲಿಕಡದಾಡಿಕೆಡುವರು ।
ತಾಪದಲಿಬಳಿಸಾಡಿಕೆಡುವರುಕೆಲವರಕಟಕಟ　　॥ ೫೪ ॥
ಉತ್ತಮೋತ್ತಮವೆನಿಪತತ್ವದ । ಸತ್ಯಮಾರ್ಗವನುಳಿದುಸದ್ಗುರು ।
ಮೃತ್ಯುಹರಪದದಲ್ಲಿರಮಿಸದೆಕೆಟ್ಟುಹೋಗುವರು ॥

ಕತ್ತೆಯೆಂದದೊಳಿಹರುಕೆಲವರು । ತೊತ್ತಿನಂದದೊಳಿಹರುಕೆಲವರು ।
ಬುತ್ತಿಗಳ್ಳರಪರಿಯೊಳಿರುವರುಕೆಲವರಕಟಕಟಾ ॥ ೫೫ ॥
ಶಮೆದಮೆಗಳೊಂದಿಲ್ಲವಕ್ಕಟ । ಸಮತೆಯೆಳ್ಳಷ್ಟಿಲ್ಲವಕಟಾ ।
ಮಮತೆಯೇನೇನಿಲ್ಲವೊಬ್ಬರಿಗೊಬ್ಬರೊಳಗಯ್ಯೋ ॥
ಅಮಮಗುರುಗಳುಬಕನವೋಲಿಹ । ರಮಮಶಿಷ್ಯರುಬೆಕ್ಕಿನಂತಿಹ ।
ರಮಮಭಕ್ತರುಕಪ್ಪೆಯಂತಿಹರೇನುಕಾಲವಿದು ॥ ೫೬ ॥
ಪರಮಹಂಸನಪರಿಯೊಳಾಡುವ । ಗುರುಗಳಾರ್ಯ್ಯೋಂಕರಿಪಭ್ರಮರನ ।
ತೆರದೊಳಾಡುವಶಿಷ್ಯರುಂಭೂಲೋಕದೊಳಗಿನ್ನು ॥
ಇರುವೆಯಂದದೊಳಿರುವಭಕ್ತರು । ಧರೆಗೆಬಹುಅಪರೂಪರ್ರೈದು ।
ಶ್ಬರಿತರೇತುಂಬಿಹರುಹರಹರಕಲಿಮಹತ್ವವಲಾ ॥ ೫೭ ॥
ಕಾಗೆಯಂತಿಹರರರೆಕೆಲವರು । ಗೂಗೆಯೆಂತಿಹರಮಮಕೆಲವರು ।
ರೋಗಿಯಂತಿಹರೈಸೆಕೆಲವರುಪರಿಕಿಸಲ್ಕಿನ್ನು ॥
ಶ್ರೀಗುರೂನ್ನತಪಾದಕೇಹೊರ । ತಾಗಿತ್ರೈಮಲದಲ್ಲಿಸುಖಿಸುವ ।
ರಾಗಿಮೆರೆವರನೋಡಿನಗುವನುಗುರುಫಕೀರೇಶ ॥ ೫೮ ॥
ಕರುಣಿಸಿಯೆಮರಿದೇವರಿಗೆನೀಂ । ವರಜಗದ್ಗುರುಪದವಿಕೊಟ್ಟೈ ।
ಗುರುಪರಾತ್ಪರವಸ್ತುಕರ್ತಪರಾಕುಮುದಿವಾಜ್ಬಾ ॥
ಪರಮಭಕ್ತರಿಗೊಲಿದುಮುಂದಣ । ಕುರುಹುತೋರಿಸಿಹರುಷಬಡಿಸಿದೆ ।
ಗುರುಮಹೋನ್ನತನೀನುಕರ್ತಪರಾಕುಪ್ರಭುದೇವ ॥ ೫೯ ॥
ಹರಿಹರಬ್ರಹ್ಮಾದಿಗಳನುರು । ತರದಹೃತ್ಕಮಲಾಗ್ರಪೀಠದೊ ।
ಳಿರಿಸಿಭಕ್ತಿಗೆಮಾತ್ರ ತೋರುವಗುರುದಿಗಂಬರಗೆ ॥
ಪರಶಿವನನುರೆನುಂಗಿಕೊಂಡಾ । ಗುರುನಿರಂಜನಸಿದ್ಧರಾಮಗೆ ।
ಗುರುವೆಗತಿಯೆಂದೆತ್ತಿಬೆಳಗಿರಿಮಂಗಳಾರತಿಯಾ ॥ ೬೦ ॥
ಗುರುಮಹತ್ವದಸಾರವಿಂತಿದು । ಗುರುಮಹತ್ವಮನಂತವಿಪ್ಪುದು ।
ಗುರುಮಹತ್ವವನರಿದುಪೇಳುವರಾರುಲೋಕದಲಿ ॥
ಗುರುಫಕೀರೇಶ್ವರನುಗಂಗಾ । ಧರನಮುಖದಿಂಪೇಳಿಸಿದನೀ ॥
ತೆರದಿಮುಗಿದುದುಸಂಧಿಹದಿನಾರನೆಯದೆಂದೆನಿಸಿ ॥ ೬೧ ॥

॥ಇತಿ ಶ್ರೀ ಶಿರಃಪುರಸನ್ನುತ ಶೂನ್ಯಸಿಂಹಾಸನ ಶ್ರೀ ಭಗವಾನ್‌ವಿಭುವಾತ್ಮಿಯಾ॥
ಗಂಗನಿಂ ಪೇಳಿಸಿದ ಪೌರಾಣದೋಳ್‌ಹದಿನಾರನೆಯ ಸಂಧಿಸಮಾಪ್ತಮಿಂತು।
೧೦೦೫ ಪದ್ಯಂಗಳಿಗೆ ಮಂಗಲಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ

## ೧೭ನೇ ಸಂಧಿಯು.

### ಕರ್ತರು ಹುತ್ತಾ ಹೊಕ್ಕಿದ್ದು.

ಸೂಚನೆ—
ಮೃತ್ಯುಹರಮುದಿವಾಚ್ಛನಂದದಿ । ಹುತ್ತಿನೆಡೆಮರೆಗೊಂಡುರಾಮನೊ ।
ಳುತ್ತರೋತ್ತರಬೆಳಗಿಸುಪ್ರಖ್ಯಾತನೆನಿಸಿದನು ॥ ಪಲ್ಲ ॥
ಹರಟಮಾತಿಗೆಹರುಷಗೊಂಬರು । ದುರಿತಕರ್ಮಕೆಹರಿದುಹೋಹರು ।
ಬಿರುಸುನುಡಿಯಲಿಕೆಲರುನೊಯ್ಸುವರಯ್ಯೊಸುಜನರನು ॥
ಗುರುವರನಪಗಲಿರುಳು ನುತಿಸರು । ಶರಣರೆಡೆಯಲಿಸೇವೆಗೈಯರು ।
ನರಜನುಮದಾಯುಷ್ಯದಲಿಚಿಂತಿಸರುಸದ್ಗತಿಗೆ ॥ ೧ ॥
ಪರಶಿವನತತ್ವಾರ್ಥವರಿಯರು । ಶರಣರಿಗೆಶಿರಬಾಗಿನಡೆಯರು ।
ಗುರುಕಟಾಕ್ಷವಪಡೆದುಸುಖಿಸರುಲೋಕದೀಜನರು ॥
ಬರಿದೆತರ್ಕಂಗಳಲಿನಲಿವರು । ಸಿರಿಯುಸಡಗರದಲ್ಲಿಮೆರೆವರು ।
ಮರವಿಬಾಳ್ವೆಯೊಳಾಳ್ದು ಕೆಡುವರುಮುಂದೆತೊಳಲುವರು ॥ ೨ ॥
ಎಲ್ಲಗ್ರಂಥಾರ್ಥವನುಹೇಳುವ । ರೆಲ್ಲಶ್ರುತಿಸ್ಮೃತಿಪಾಠಹೇಳುವ ।
ರೆಲ್ಲಧರ್ಮದಕೀಲಹೇಳ್ವರುಜಾಣ್ಮೆತೋರುವರು ॥
ಬಳ್ಳಿಯವರಿಗೆಕೇಡುಬಗೆವರು । ಸುಳ್ಳುಹಿಡಿದೇಗೆದ್ದುಕೊಂಬರು ।
ಬಲ್ಲಿದರುತಾವೆನಿಸಿಮೆರೆವರುಧನ್ಯರಿವರೇನೈ ॥ ೩ ॥
ಇಲ್ಲಪುಣ್ಯದಚಿಂತೆಯಿವರೊಳ । ಗಿಲ್ಲಪಾಪದಭೀತಿಯಿವರೊಳ ।
ಗಿಲ್ಲಸಜ್ಜನಸಂಗವಿವರೊಳಗಿಲ್ಲವಾಸನೆಯು ॥
ಎಲ್ಲರಿಗುಮಿಗಿಮೀರಿನಿಂತಿಹ । ರೊಳ್ಳಿತಿದುಮಝುಭಾಪುದೊಡ್ಡವ ।
ರಲ್ಲವೇಯೀಮನವರುಬಿಡುವರೆಸೇವೆಮೊಡದಲೆ ॥ ೪ ॥

ಗಂಡನನುವ್ಯೆಸೊಕ್ಕಿಬಿಟ್ಟೆ। ಮಂಡಲದಿಹಂದಾಡಿಜೀವಿಪ।
ಲಂಡಭಂಡರಿಗೇನುಹೇಳ್ವದುಬಿಚ್ಚಿಮತ್ತಿನ್ನು॥
ಗಂಡನಿಗೆನಿಜಗರತಿಯೆನಿಸಿರಿ। ಗಂಡಸಂಜಿಕೆವಿಡಿದುನಡೆಯಿರಿ।
ಕುಂಡಿಯೆಲುಬನುಮುರಿವಮಿಂಡಾಖಾನನಂತಕನು ॥ ೫ ॥
ಗುರುಫಕೀರನಭಕ್ತರೇನಿಮು। ಗೊರೆವೆಲಾಲಿಸಿರಯ್ಯಕರ್ತನ।
ಪರಮಮಹಿಮೂಕಥೆಯನತಿಸಂಕ್ಷಿಪ್ತರೂಪದಲಿ॥
ಗುರುದಿಗಂಬರಕರ್ತನಂದಿಗೆ। ಮರಿಗೆಪಟ್ಟವಕಟ್ಟಪರಶಿವ।
ಪರಮಸಿಂಹಾಸನದೊಳಿಂಸಿದಬಳಿಕಲೋಕದಲಿ ॥ ೬ ॥
ಅತ್ತಹುತ್ತಿನೊಳಿಹನುಕರ್ತನು। ಹೊತ್ತುಹೊತ್ತಿಗೆಹೊರಗೆಬರುವನು।
ಸತ್ಯಭಕ್ತರನೆಲ್ಲಕರೆದುರಕ್ಷೇಮಕೇಳುವನು॥
ಇತ್ತಮಠದಲಿಸಿದ್ಧರಾಮನು। ಹೊತ್ತುಮಾಡದೆಬಂದಜನಕುಲ।
ಕೊತ್ತರದೊಳನ್ನವನುಕಾಣಿಸಿತೃಪ್ತಿಬಡಿಸುವನು ॥ ೭ ॥
ಪರಮಭಕ್ತರೆಲಾಲಿಸಿರಿನೀವ್। ಧರೆಯೊಳಾಗುರುಶಿಷ್ಯರೀರ್ವರು।
ನಿರುತಮೊಂದೇಸೂತ್ರರಾಗಿಯೆತೋರುತಾಡುತಿರೆ॥
ವರಶಿರಃಪುರಪುಣ್ಯದೈಸಿರಿ। ಮೆರೆಯಹತ್ತಿತುಹೇಳಲೇಂಜನ।
ಪರಿಸೆಯೆಂದದಿನೆರೆಯುತಿರುವದುದಿವಸದಿವಸದಲಿ ॥ ೮ ॥
ಕಾಡುತಿರುವನುಭಕ್ತಜನರನು। ಬೇಡುತಿರುವನುಭಿಕ್ಷೆಯನುಜನ।
ಕೂಡಿದಂತಿರೆಹೇಳುತಿರುವನುಭಕ್ತಿಮಾರ್ಗವನು॥
ರೂಢಿಯಲಿಸ್ಥಿರವಲ್ಲತನುವಿದು। ಮೂಢಮತಿಯಲಿಕೆಡಲುಬೇಡಿರಿ।
ಮಾಡಿರೈಸದ್ಗತಿಗೆಸಾಧನವೆಂಬನಾರಾಮ ॥ ೯ ॥
ಶಿವನಭಕ್ತರೆನೀವುನಿಮ್ಮಯ। ಕಿವಿದೆರೆದುಚೆನ್ನಾಗಿಕೇಳಿರಿ।
ಭುವಿಯೊಳಾಪರಿಸಿದ್ಧರಾಮಸ್ವಾಮಿಯಾಡುತಿರೆ॥
ಶಿವಗೆಸರಿಮಿಗಿಲೆನಿಪಕರ್ತನು। ಕುವರನುರುತರಲೀಲೆಗತಿಹರು।
ಷವನುತಾಳುತೆಹೊರಗೆಬಂದಾಡುತ್ತಲಿರುತಿಹನು ॥ ೧೦ ॥
ಆನಿರಂಜನಪರಮಗುರುವಿಗೆ, ಮಾನವರುಭಯಭಕ್ತಿಯಿಂದನು।
ಮೊನವಿಲ್ಲದೆಬಾಗಿನಿಜಭಕ್ತಿಯನುಕೊಡುತಿಹರು॥

ಏನುಚಿಂತಿಸಬೇಡಿರೈನೀ । ವಾನೆಶ್ರೀಗುರುಸಿದ್ಧರಾಮನು ।
ತಾನೆನಡಿಸಿಯೆಕೊಡುವನೆಂಬನುಹರಸುತೆಲ್ಲರನು ॥ ೧೧ ॥
ಬರುವಜನಕೆಲ್ಲಂಗೆಹಾದಿಯೊ । ಳರರೆತೋರ್ವನುವೂತನಾಡುವ ।
ನಿರದಗೋಚರನಪ್ಪನಾಗುರುಸಿದ್ಧರಾಮೇಶ ॥
ಗುರುವಿನಾಟವದೇನೊಯೆಸುತಲಿ । ಭರದೊಳೈತಂದವರುನಮಿಸಲು ।
ಕಿರುನಗೆಯೊಳೊರೆದೊರೆದುಕಾಣಿಸಿಭಕ್ತಿಪುಟ್ಟಿಸುವ ॥ ೧೨ ॥
ಎಲ್ಲರುಂತಿಳುಕೊಳ್ಳಿರೈನೀ । ವಲ್ಲಮನಗುರುಸಿದ್ಧರಾಮನ ।
ಸಲ್ಲಲಿತಲೀಲಾವಿನೋದದಸಾರಸಂಗತಿಯ ॥
ಎಲ್ಲಕಡೆಕಣ್ಣಿಟ್ಟುತಿರುಗುವ । ನೆಲ್ಲಭಕ್ತರಕಡೆಗೆಹೋಗುವ ।
ನೆಲ್ಲಸೇವಕರಲ್ಲಿಲಕ್ಷ್ಯವನಿರುಸುವನುರಾಮೂ ॥ ೧೩ ॥
ಲೋಕದವರಿಗೆಸಿಲ್ಕದಾಜಗ । ದೇಕಕರ್ತನೆವಾದಪೂಜಾ ।
ನೇಕವಿಧದಲಿರಾಮನತ್ಯಾನಂದಬಡಿಸುತಿರೆ ॥
ಏಕಕಾಲಕ್ಕೆಲ್ಲಮನೆಯೊಳ । ಗೇಕಗುರುರೂಪದಲಿತೋರ್ವನ ।
ನೇಕಮುಖದಲಿಭಕ್ತಿಗೊಂಬನುಶ್ರೀಫಕೀರೇಶ ॥ ೧೪ ॥
ಕಾಕುಕೂಕರಿಗೊಲೆಯದಾಸುಜ । ನೈಕಬಂಧುವಶಂಭುಸುಖದೊಳ ।
ನೇಕಮುಖದಲಿಸಿದ್ಧರಾಮನುಕೀರ್ತಿಸುತ್ತಿರಲು ॥
ಏಕಕಾಲಕ್ಕೆಲ್ಲಬಾಗಿಲಿ । ಗೇಕಮೂರುತಿಯಾಗಿದಿನ್ನೆಂ ।
ಬೇಕಶಬ್ದವನಾಗಿಸುವನಾಶ್ರೀಫಕೀರೇಶ ॥ ॥ ೧೫ ॥
ಅತ್ತನೋಡಿದಡಿರುವರೀರ್ವರು । ಮಿತ್ತನೋಡಿದಡಿರುವರೀರ್ವರು ।
ಮತ್ತನೋಡಿದಡಿರುವರೀರ್ವರುಕರ್ತನಾರಾಮೂ ॥
ಮುತ್ತೆಕೀಳ್ಕುಲದವರುಬಂದುರೆ । ಚಿತ್ತದಲಿಧ್ಯಾನಿಸುವರಾಗಿರ ।
ಲತ್ತಲಾಗಳೆದರುಶನಂಗೊಡುತೀರ್ವರೇವೇಳ್ವೆ ॥ ೧೬ ॥
ಇದುವೆಭಕ್ತ್ಯಾಚಾರಪಥವಿಂ । ತಿದುವೆಶರಣರನೀತಿಪಥವಿಂ ।
ತಿದುವೆಸಹಜಾನಂದಶಿವಪಥವೀಧರಿತ್ರಿಯಲಿ ॥
ಇದುವೆಗುರುಸುಕಟಾಕ್ಷಪಥವಿಂ । ತಿದುವೆಸದ್ಗುರುಸಾಂಬಪಥವೆಂ ।
ಬೊದವಿಕರ್ತನುಸಿದ್ಧರಾಮನುತೋರ್ಪರಡಿಗಡಿಗೆ ॥ ೧೭ ॥

ತಂದೆಗಂಜಿಯೆನಡೆದುಕೊಳ್ಳು । ತ್ತೊಂಡೆಮನವಲಿಬಿಡದೆಸೇವಿಸು ।
ವಂದವನುತೋರ್ಪಂತೆತೋರ್ಪನುರಾಮಕರ್ತನಲಿ ॥
ಕಂದನಿಗೆಕೈವಿಡಿದುಕರುಣಿಸು । ತೊಂದೆಸೂತ್ರಧೆಜ್ಞಾನಕಳೆಗೊಡು ।
ವಂದವನುತೋರ್ಪಂತೆತೋರ್ಪನುಕರ್ತರಾಮನಲಿ ॥ ೧೮ ॥
ಕಿಚ್ಚುಗಣ್ಣನಕೆಣಕಬೇಡಿರಿ । ಹುಚ್ಚುಮನುಜರೆನಿಮ್ಮಶಾಸ್ತ್ರವ ।
ಮುಚ್ಚಿಬಿಡಿರೋಯೆಂದುರಾಮಪರಾಕುನಡಿಸುವನು ॥
ಎಚ್ಚರಂಗೊಡಲಿಕ್ಕೆಜಗದೊಳ । ಗಚ್ಯುತನುಬಂದಿಹನುನೀವುರೆ ।
ನೆಚ್ಚಿನಡೆಯಿರೊಯೆಂದುಕರ್ತಪರಾಕುನುಡಿಸುವನು ॥ ೧೯ ॥
ಸಕಲಭಕ್ತರೆನೀವುಕೇಳಿಂ । ಪ್ರಕಟಭಕ್ತನುಖಾನಗೌಡನು ।
ವಿಕಳಮತಿಗಳದಂಡಿಸುತ್ತಲೆರಾಜನೀತಿಯಲಿ ॥
ಯುಕುತಿಯಲಿರಾಜ್ಯವನುಪಾಲಿಸು । ತಕುಟಿಲಂಶಾನಾಗಿನಿತ್ಯದಿ ।
ಭಕುತಿಯಿಂದಲೆಬಂದುಗುರುಸೇವೆಯನುಮಾಡುವನು ॥ ೨೦ ॥
ಗುರುಫಕೀರೇಶ್ವರನಮಹಿಮೆಯ । ನರಿವಲಾರೀಸಿದ್ಧರಾಮೇ ।
ಶ್ವರನಲೀಲೆಯನರಿವರಾರೀಲೋಕದೊಳಗೆನುತ ॥
ಗುರುವೆಗುರುವಿನಗುರುವೆಜಗದು । ದ್ಧರಣಕಾರಣಕರ್ತಸದ್ಗುರು ।
ವರನೆನೀಗತಿಯೆಂದುವಂದಿಸುತಿಹನುಗೌಡಗಡ ॥ ೨೧ ॥
ಆದಿಮೂರುತಿಯಲ್ಲಿಕುಲಮತ । ಭೇದಬುದ್ಧಿಯಬಿಡಿರೊನಿಮ್ಮಯ ।
ವಾದತರ್ಕವಬಿಡಿರೊಬಾಗಿರೊಬದುಕಿರೋಯೆನುತ ॥
ಆದಿಮೂರುತಿಅಲ್ಲಮಪ್ರಭು । ಮೇದಿನಿಯೊಳೆಸೆದಪನುನೋಡಿರೊ ।
ಸಾಧಿಸಿಯೆಕೃಪೆಪಡಿಯಿರೆಂದುಪರಾಕುಹೇಳುವನು ॥ ೨೨ ॥
ಬಂದಿಹನುಶಿವಮಾಯಕಾರನು । ಬಂದಿಹನುಹರಿನ್ಯಾಯಕಾರನು ।
ಬಂದಿಹನುಜಗದಾದಿಸೂತ್ರನುಕಪಟನಾಟಕನು ॥
ಬಂದಕಾರಣಕೇಳಿತಿಳಿಯಿರಿ । ಮಂದಮತಿಗಳೆತಿಳಿದುನಡೆಯಿರಿ ।
ನಿಂದಕರೆಬಲುಜೋಕೆಯೆಂದುಪರಾಕುಸಾರುವವು ॥ ೨೩ ॥
ಗುರುಮಹಾಪ್ರಭುತನ್ನಸಂತತಿ । ವೆರಸಿತಾನೇತೋರ್ವನೆಂಬೊಂ ।
ದರಿಕೆಯೊಬಟ್ಟಂಗಿನಡೆವುದುಕರ್ತನಡಿಗಳಲಿ ॥

ಬರಿಯಕುಲಛಲವುಳ್ಳಮನುಜರಿ । ಗಿರುಳುಪಗಲುರೆಗಾದಬಿದ್ದಿಹು ।
ದರರೆಭಕ್ತರೆನೀವುಕೇಳಿರಿಗುರುಮಹತ್ವವನು ॥ ೨೪ ॥
ಒಂದುದಿನದಲಿಕರ್ತನತ್ಯಾ । ನಂದದಲಿತನ್ನಾಪ್ತಭಕ್ತ ।
ವೃಂದದಲಿನಸುನಗುತೆನುಡಿದನುರಾಮಗಮರ್ದಪ್ಪಿ ॥
ಇಂದುಹುತ್ತಿನೊಳಡಗುವೆನುಗಡ । ಮುಂದೆನಾನೇಬರುವೆನಿಲ್ಲಿಗೆ ।
ನಿಂದುನೀಮಠದಲ್ಲಿಮುಂದಣಕಾರ್ಯನಡಿಸೆಂದ ॥ ೨೫ ॥
ಹುತ್ತುಮೃತ್ಯುಂಜಯನದಾಯಿತು । ಹುತ್ತಿಗೇಗದ್ದುಗೆಯಮೊಡಿರಿ ।
ಹುತ್ತಿನಲಿಭುಜಗೇಂದ್ರನಿರುವನುಪರಮಸೇವಕನು ॥
ಹುತ್ತಿನೆಡೆಯಲಿನರರುಜಾಗ್ರತೆ । ವೆತ್ತುತಿರುಗಾಡುವದುಮತ್ತಾ ।
ಸತ್ಯಭಕ್ತರಿಗೇನುಭಯವಿಲ್ಲೆಂಧನಾಕರ್ತಾ ॥ ೨೬ ॥
ಉರಗರಾಜನುಗುಪ್ತವಾಗಿಯೆ । ಗುರುವಿನೆಡೆಯಲಿನೆಲಸಿಸಲೆಸಂ ।
ಚರಿಸುತಿರುವನುಮರ್ತ್ಯರಿಗೆಕಣ್ಣಳಿಗೆ ಕಾಣಿಸನು ॥
ನರರಕಣ್ಣಳಿಗವನುಕಂಡರೆ । ತ್ವರದೊಳವರದುಕಾವ್ಯಪೂರ್ಣವು ।
ಪರಮಗುರುಕೃಪೆಯೆಂದುತಿಳಿಯುವದೆಂದನಾಕರ್ತಾ ॥ ೨೭ ॥
ಹಿಂದೆನನಗಾರ್ಹಿಡಿಯಲಿಲ್ಲವ । ದಿಂದುನನಗಾರ್ತಿಳಿಯಲಿಲ್ಲವು ।
ಮುಂದೆನನಗಾರ್ನಂಬಲಾರರುಲೋಕದೀಜನರು ॥
ಎಂದಿಗಾದರುಹೊಂದಲಿಲ್ಲವು । ಮಂದಮತಿಗಳಿಗೇನುತಿಳಿವುದು ।
ಮುಂದಿನಾಟವುಬಹಳದುರ್ಧರವೆಂದನಾಕರ್ತಾ ॥ ೨೮ ॥
ಬಂದೆನಿಂದಿಗೆಹಿಂದುಕುಲದೊಳು । ಹಿಂದುಜನರೊಳಮೊಸದಿನ್ವಲಿ ।
ಯೆಂದುಪೆಸರಾಯ್ತೆನಗೆಕರೆದನುನನ್ನಗುರುರಾಯ ॥
ಹಿಂದುಜನರೆನಗಿಲ್ಲಿಬಹುಮುದ । ದಿಂದೆನೆನೆಯುವರಯ್ಯಕೇಳ್ಳೈ ।
ಹೊಂದಿಹುದುಗಡಚನ್ನವೀರಾಹ್ವಾನಮಿಳೆಗೆಂದಾ ॥ ೨೯ ॥
ವಸುಧಿಯೊಳಗೆನ್ನೊಡೆಯಶ್ರೀಗುರು । ಮುಸಲಮಾನರೊಳುಣ್ಮೆತೋರು ।
ತ್ತೆಸೆದುಖಾಜಾಮೊಸದೀನ್ವಲಿಯೆನಿಸಿಬೆಳಗಿಹನು ॥
ಅಸಮಸದ್ಗುರುನಾಥನಾಟವು । ರಸೆಯೊಳೆಂದಿಗುಹಿಂದುಜನರಿಗು ।
ಮುಸಲಮಾನರಿಗೆಂದಿಗಾದರುಹೊಳೆಯಲಿಲ್ಲೆಂದ ॥ ೩೦ ॥

ಆವಕುಲದವನಲ್ಲಗಡಮೇ । ನಾವಮತದವನಲ್ಲಗಡಮೇ ।
ನೀವಸುಂಧರೆಯಲ್ಲಿತನುವೆನಗೇಕೆಬಂದಪುದೋ ॥
ಆವಬಗೆಯಿಂದಾದೊಡಂಪರಿ । ಭಾವಿಸಲ್ಕಾನಾರೊತಿಳಿಯದು ।
ದೇವಸದ್ಗುರುಬಲ್ಲನೆಂದನುಕರ್ತನಸುನಗುತ ॥ ೩೧ ॥
ದೇವಶಂಕರನಲ್ಲಮಪ್ರಭು । ವಾವಿಭುವಿನಾಜ್ಞೆಯಲಿಗಡನಾ ।
ನೀವಿಲಾಸದೊಳಿಂದಿಗಾದರುಬಹೆನುಭಕ್ತ್ಯರ್ಥ ॥
ಖಾವನಾತ್ಮಾರಾಮಸದ್ಗುರು । ದೇವನಾಟವದೆಂತೊಸಚ್ಚಿ ।
ದ್ಭಾವಕಚ್ಚರಿಮುಂದೆಬರುವೆನುನೋಡಿರೈಯೆಂದ ॥ ೩೨ ॥
ಆವದೊಂದವತಾರಪಾದಕೆ । ಭಾವಶುದ್ಧಿಶ್ರೇಯದಲಿನಿಜ ।
ಸೇವೆಮಾಡಿದಭಕ್ತರಿಗೆಗುರುಬಿಡುವದಿಲ್ಲಿನ್ನು ॥
ದೇವದೇವನಸೂತ್ರವಾತ್ರದೊ । ಳಾವಕಾಲಕ್ಕಾನುಬರುವೆನೊ ।
ನೀವುಬರುವಿರಿಮುಂದೆಸೇವೆಗೆನಿಲ್ಲುವಿರಿಯೆಂದ ॥ ೩೩ ॥
ವರದಸದ್ಗುರುಬಸವಶರಣರ । ಪರಮವಾಕ್ಯಗಳೆಲ್ಲವ್ಪೋದು ।
ತ್ರಿರುವರೀಲೋಕದಲಿಹೇಳುತ್ತಿಹರುಮೂನವರು ॥
ಧರೆಗೆತತ್ಕಲ್ಯಾಣಶರಣರು । ತಿರುಗಿತಾವವತರಿಸಿಬಂದಾ ।
ಕುರುಹುತೋರಿದರವರಿಗೀಜನಸಿಂದೆಗೈಯುವರು ॥ ೩೪ ॥
ಗುರುತುಹಿಡಿಯುರುವಚನವಾಕ್ಯವ । ನರಿದರಿದುಮುರೆನೋಡಿನೋಡಿಯು ।
ಕುರುಹುಗಳನೊಳಿತಾಗಿತಿಳಿಯರುಬಿದ್ದುಕುಲಛಲಕೆ ॥
ಧರೆಯೊಳೀತೆರವೆಂದಿಗಾದರು । ನರರನಡೆನುಡಿಗಳಿಗೆಸಂಗನ ।
ಶರಣರೆಲ್ಲರುನಗುವರೆಂದನುಗುರುಫಕೀರೇಶ ॥ ೩೫ ॥
ಕೆಲರುಹವಣಿಪರೆಲ್ಲಬಗೆಯಲಿ । ಪಲರುನೋಳ್ಪರುವಚನವಾಕ್ಯಂ ।
ಗಳಲಿನಾನಿಟ್ಟಂತೆಬಂದರುಬಾರದಂತಿರುವೆ ॥
ಅಳಿದುಕುಲಛಲವೆಲ್ಲಭ್ರಾಂತಿಯ । ನುಳಿದುಭಕ್ತಿಯನಾಂತುನಿಂತಡೆ ।
ಕುರುಹಿನಲಿನಿಜತೋರ್ಪೆನೆಂದನುಗುರುದಿಗಂಬರನು ॥ ೩೬ ॥
ಗುರುತುತೋರಿಸಿತೋರದಾಡುವೆ । ಕುರುಹುಗಾಣಿಸಿಸಿಲ್ಕದಾಡುವೆ ।
ಗುರುತುಹಿಡಿಯಲ್ಕೆಂದುಹವಣಿಸುತಿಹರುಸಜ್ಜನರು ॥

ಕುರುಹುತೋರಿಸಿಗುರುತುತೋರೆನು । ಗುರುತುದೋರಿಸಿಕುರುಹು
ಸರಸವಿರಸಗಳಾಟಶರಣರದೆಂದಮುದಿಪಾಚ್ಛ ॥ ೩೭ ॥ [ದೋರೆನು ।
ಶಿವನುನರರೂಪದಲಿಜಗದೊಳ । ಗವತರಿಸಿದಾಸಮಯದಲಿನಾ ।
ಸವನುಬಲುಕಿಡಿಗೇಡಿತನದಲಿಸಿಲ್ಕದಾಡುವನು ॥
ಭುವನದಲಿಬಹುಮುದದೊಳೀವೂ । ನವರುಶ್ರೀಬಸವೇಶನಾಟನ ।
ಸಪಯನರಿವರೆನಿನಗೆಹೇಳ್ವೆನುರಾಮುಕೇಳೆಂದ ॥ ೩೮ ॥
ಅರಿತರಾರ್ಪಟ್ಟಗಳುಲೋಕಕೆ । ಮರಿತರವುಪಟ್ಟಗಳುಮೂರೇ ।
ಧರೆಯೊಳೇಳನೆಪಟ್ಟಕೆಲ್ಲವುಲಟ್ಟಪಟ್ಟೆಂದ ॥
ಧರಣಿಯೊಳಗವತರಿಸಿನಿಂದಾಂ । ಬರುವೆನೆಂಟನೆಪಟ್ಟಕಾನೇ ।
ಹರನಮುಂಡಿಗೆಮೂತುಮರ್ತ್ಯರಿಗೇನುತಿಳಿಯುವದು ॥ ೩೯ ॥
ಅರೆದಾಸಾವಂತರಲಿನೀಂ । ಸೇರಿಬಂದಂತೆನಲುನಾಂಜೋ ।
ಗೇರಕುಲದಲಿಸಾರಿಬರುವೆನುಮುಂದೆನಿನ್ನೆಡೆಗೆ ॥
ಘಾರುಣಿಯೊಳತಿಲೀಲೆಯಲಿಮಿಗೆ । ಮೀರಿಹೋಗುವೆಸಿಲ್ಕದಲೆನೀ ।
ಸಾರಯಿದುನಿಜಗುರುತುಹಿಡಿಯೆಂತೆಂದಮುದಿಪಾಚ್ಛ ॥ ೪೦ ॥
ನೀನೆಹೌದೆಂದರಿದುಪಟ್ಟವ । ನಾನುಕಟ್ಟಿದಪೋಲುನಿನಗನು ।
ಮಾನವಿಲ್ಲದೆಶಿವನಪಟ್ಟವಕಟ್ಟುರೂಢಿಯಲಿ ॥
ನಾನುನಿನಗಾದಂತೆಜಗದಲಿ । ನೀನುನನಗಾಗಿನ್ನುನಾನೇ ।
ನೀನುನೀನಾನೆಂದುತಿಳಿಯೆಂತೆಂದಪ್ರಭುರಾಯ ॥ ೪೧ ॥
ಇಂತುಮೂರವತಾರವೆನ್ನವು । ಕಂತುಹರನವುಶಿವನಪಟ್ಟಗ ।
ಳಂತರಂಗವುಮುಂದೆಕೊಡುವೆನುಲಿಂಗದಂಗರಿಗೆ ॥
ಅಂತುಮಿಂತುಂನನ್ನಹಿಡಿದೇ । ನಿಂತವರುಪಾವಾಡುತೋರುವ ।
ರೆಂತುಮೂದೊಡೆಬಿರುದುನನ್ನದುನಾನೆಬೆಳಗುವೆನು ॥ ೪೨ ॥
ನನ್ನಭಕ್ತರೆನೀವುಕೇಳಿರಿ । ನನ್ನಪೆಸರ್ಗಳುಮೂರುಕ್ರಮದಿಂ ।
ಚೆನ್ನವೀರನುಸಿದ್ಧರಾಮನುಮೇಣುಶಿವಜೋಗಿ ॥
ಎನ್ನುವೀನಾಮಗಳುಧಾತ್ರಿಯೊ । ಳೆನ್ನವಾಗಿರೆಪಟ್ಟದವರಿಗೆ ।
ಚೆನ್ನವಾಗಿರೆನಡೆಯಬೇಕೆಂತೆಂದನಾಕರ್ತಾ ॥ ೪೩ ॥

ಮೂರೆಪೆಸರುಗಳಿಂದೆಪಟ್ಟ । ಕ್ಕೇರುತಿರುವರುಸಾರಸೌಖ್ಯವ ।
ಬೀರುತಿರುವರುಸಲಹುತಿರುವರುಬಿಡದೆಭಕ್ತರನು ॥
ವಿೂರಿವೂಯೆಗೆನಡೆವುತಿರುವರು । ವಿೂರಿಬಂದರೆನನ್ನಕಡೆಗೇ ।
ಸೇರುವರುಬಿಡದೆತ್ತಿಕೊಳ್ಳುವೆನೆಂದನಾಕರ್ತಾ ॥ ೪೪ ॥
ಏಳನೆಯಪಟ್ಟಕ್ಕೆಸದ್ಗುರು । ಲೀಲೆದೇವಿಯುಮುಂವೆಯುದುಗಡ ।
ಕೇಳಿರೈಸಂಚಾರವಹುದಡಿಗಡಿಗೆಕುರುಹಿನಲಿ ॥
ಸೂಳಸೋಗಿನಬೆಡಗಿನಾಟದ । ಮೇಳಗಳುಲೋಕನಲಿಗಡಬಿಡ ।
ದೇಳನೇದಾಪಟ್ಟದಾಟವುಮೌನಸೂಚನೆಯು ॥ ೪೫ ॥
ಧರುಣಿಯಲಿಬಹುತರದರೋಗಗ । ಳರರೆನವುಮ್ಮೋಜಿಯಾಟದ ।
ಗುರುತುಗಲಿಬಿಲಿಯೆನಿಪುದೀಭೂಲೋಕದೊಳಗಕಟಾ ॥
ಧರೆಯೊಳಾಡುತೆಶರಣರಿಟ್ಟಹ । ಕುರುಹುದೋರಿಕೆವರಶಿವೋಕ್ತಿಯ ।
ನರಿಯಲೇಳನೆಪಟ್ಟದಾಟವೆಶಂಭುಸೂಚನೆಯು ॥ ೪೬ ॥
ಪಟ್ಟಗಳುಮನೆಮನೆಗೆನಡೆವುವು । ಲಟ್ಟಪಟ್ಟೆನಿಸುವವುತಾವ್ಗಡ ।
ಪಟ್ಟಕಾಗುರುಚನ್ನಬಸವನುಬರುವಕಾಲದಲಿ ॥
ಶ್ರೇಷ್ಠರೆಂಬಾಭ್ರಷ್ಟರೆಲ್ಲರು । ಸೃಷ್ಟಿಯಲಿಹೊಟ್ಟಾಗಿಹಾರುವ ।
ರೊಟ್ಟಿಗಿಳೆಯಲಿಬೇಗೆಯೆನಿಸುವದೆಂಬುದಾವಚನಾ ॥ ೪೭ ॥
ಸೃಷ್ಟಿಯಲಿಲೌಕಿಕದಬಾಳ್ವೆಗೆ । ಕಟ್ಟಳೆಗೆಸರಿಯಾಗಿವರ್ತಿಸಿ ।
ನಿಷ್ಠೆಯಲಿಸಮತೆಯಲಿಸಮದೃಷ್ಟಿಯಲಿಬಾಳ್ವರಿಗೆ ॥
ಎಷ್ಟುಕಷ್ಟವುಬಂದೊಡೇಂಗುರು । ಗಿಷ್ಟರಾಗಿಹಭಕ್ತರಿಗೆತಾ ।
ನೆಷ್ಟುಮಾತ್ರವುಬಿಡದೆರಕ್ಷಿವೆನೆಂದನಾಕರ್ತಾ ॥ ೪೮ ॥
ಇರುವರೀಭುವನದಲಿಶ್ರೀಬಸ । ವರಸನಾಪ್ತರುಶಂಭುಭಕ್ತರು ।
ಮಿರುವರಾವೂದೇವಿಯುಂಶಿಕರಚ್ಯುತಪ್ರಿಯರು ॥
ಪರಮಗುರುಸುಕಟಾಕ್ಷಪಾತ್ರರು । ಮಿರುವರೀಸ್ತ್ರೀಪುರುಷರಾಪದೊ ।
ಳಿರಿದವರನಾಂಬಿಡದೆಸಲಹುವೆನೆಂದನಾಕರ್ತಾ ॥ ೪೯ ॥
ಇರುವರುನ್ನತಸಾಧುಭಕ್ತರು । ಮಿರುವರುತ್ಕಟಯೋಗಿಭಕ್ತರು ।
ಮಿರುವರನುಪಮಪುಣ್ಯಶೀಲರುಧರುಣಿಪಾಲಕರು ॥

ಕರುಣಿಗಳುದಾತಾರಪುರುಷರು । ಪರಮತೀರ್ಥಸ್ನಾನಪಾವನ ।
ರಿರುವರೀಸ್ತ್ರೀಪುರುಷರೂಪದೊಳರಿವೆಸಲಹುವೆನು ॥ ೫೦ ॥
ಟರುವೆನೆಂಟನೆಪಟ್ಟಕಾನೇ । ಧರೆಯಮೇಲಣದುರಿತವನುಬಹು ।
ತರದತಂತ್ರಗಳಲ್ಲಿತೆಗೆವಳುಶಕ್ತಿಮೂದೇವಿ ॥
ಇರುವೆನಾನಮ್ಮೋಜಿಯೊಂದಿಗೆ । ವರವಿಪಾಕ್ಷನಮೌನನೊಂದಿಗೆ ।
ಹರನಮುಂಡಿಗೆಮೂತುನನಗುಂತಿಳಿಯದೆಂತೆಂದ ॥ ೫೧ ॥
ಗುರುರಥೋತ್ಸವಕಾರ್ಯನಡೆಯಲಿ । ಗುರುವಿನಾಜ್ಞಾಮಾತ್ರದಲಿಪ್ರತಿ ।
ವರುಷವಾಗಲಿಬಹಳಸಡಗರದೇಳ್ಗೆಯೋಜೆಯಲಿ ॥
ಪರಿಕೆಕೂಡಲಿಸರ್ವಜನಕತಿ । ಹರುಷವಾಗಲಿಶಂಭುಮತದೈ ।
ಸಿರಿಯುಪೆಚ್ಚಲಿಪಸರಿಸಲಿನಿನ್ನಾಟದೊಳೆಬೆಳಕು ॥ ೫೨ ॥
ಇಲ್ಲಿನಿಲ್ಲಲಿರಥವುನಿತ್ಯದೊ । ಳಲ್ಲಿವೈಭವಗೊಂಡುಗುರುರಥ ।
ವಲ್ಲಿವರೆಗುಂಬಿಡದೆಸಾಗಲಿಸಾಂಬಸೂತ್ರದಲಿ ॥
ಎಲ್ಲಹೇಳ್ವೆನುಕೇಳುನಡಿಸೆಂ । ದಲ್ಲಮಪ್ರಭುಕರ್ತರಾಮಂ ।
ಗೆಲ್ಲವನುತಿಳಿಸಿದನುಭಕ್ತರಿಗಾಗೆನಿಬ್ಬೆರಗು ॥ ೫೩ ॥
ಗುರುವಿನೀಕಡುಹುತ್ತಿನೆದುರಿಗೆ । ಪರಮಮಂಗಲವಾದ್ಯವಾಗಲಿ ।
ಹರನಗದ್ದುಗೆಪೂಜೆಗೊಳ್ಳಲಿತಪ್ಪದನವರತ ॥
ಎರಡುಮತಕನುಸರಿಸಿನಡಿಸುವ । ಬಿರುದುನಿಜವುಫಕೀರಸ್ವಾಮಿಯು ।
ದರಿದುನೀನಿದರಂತೆಸಾಗಿಸುಮಗನೆಕೇಳೆಂದ ॥ ೫೪ ॥
ಇದುಕಠಾರಿಯುಶಿಕ್ಕೆತಾನಿಂ । ತಿದುವೆಸಾಕ್ಷಿಯುಗುರುವುಹತ್ತ ।
ಕ್ಕಿದುವೆನಿಜದಿಗ್ವಿಜಯದೀರಣಬಿಲ್ಲಿಪಿಡಿಯೆನುತ ॥
ಮುದದಿತನ್ನಾಸಿದ್ಧರಾಮಂ । ಗದಧರರಸಂಗತಿಯನುರೆಪೇ ।
ಳದನುಬಿಡದೆಲ್ಲವನುಕೊಟ್ಟನನಾದಿಪರಶಿವನು ॥ ೫೫ ॥
ಪರಮಗುರುವೇತಾವುನನ್ನನು । ಧರೆಯೊಳಿಟ್ಟನೈಶ್ಯನಾಥನೆ ।
ನರರುನಡೆವರೊನಡೆಯದಿತುವರ್ರೊಭಕ್ತಿಮಾರ್ಗದಲಿ ॥
ನರರೊಳಗೆಪಾರಾಗುವದುಬಿಗಿ । ಧರೆಯೊಳಾನಿಶಲ್ಲಾರೆನೆಂಬಾ ।
ಭರದಿರಾಮನುಹಿಡಿದನಾತ್ಮಾರಾಮನಂಘ್ರಿಯನು ॥ ೫೬ ॥

ಬರಿಯಸಂಶಯವೇಕೆನಿನ್ನೊಳ । ಗಿರುವದೈಬಿಡುಸುಟ್ಟುಬಿಡುನೀ ।
ನರವಿನರಸನುನಿನ್ನಲಿಂಗಾನಂದದಂತಾಡು ॥
ಹರನವೋಲ್‌ದುಷ್ಟರಿಗೆಸದ್ಭ । ಕ್ತರಿಗೆಶಂಕರನಂತಿವೋಲ್‌ನೀ ।
ನಿರುವಮರೆವೊತೇಕೆಹೇಳೆಲೆಮಗನೆಕೇಳೆಂದ ॥ ೫೭ ॥
ಇರುವೆನೈನಿನ್ನಗಲದಲೆನಾ । ನಿರುವೆನೀಕಡುಹುತ್ತಿನೊಳಗಾ ।
ನಿರುವೆನೆಲ್ಲೆಡೆಯಲ್ಲಿಬ್ರಹ್ಮಾಂಡದಲಿಚರಿಸುತಲಿ ॥
ಅರಿಯಲೆಲ್ಲವುಪ್ರಾಣಿಗಳುಭಾ । ಸುರತರದಪರಬೊಮ್ಮಕೈಕ್ಯವು ।
ಪರಿಕಿಸಲ್ಕೆನಗೈಕ್ಯವೆಂಬುವದಿಲ್ಲಕೇಳೆಂದ ॥ ೫೮ ॥
ಧೊರೆಯೆನಿನ್ನಡಿವರ್ಗನಾಗಿರೆ । ಪರಮಭಕ್ತರೆನಿನ್ನಬಳಿಯಲಿ ।
ಚರಣಸೇವಾಸಕ್ತರಾಗಿರೆನೀನೆಗುರುವೆನಿಸೆ ॥
ಕೊರತೆಯೇನೆಲೆಮಗನೆಹೇಳೀ । ಮರೆನುಸುಕದೆಗೆಲೋಕದಲಿಗಡ ।
ಗುರುವಿನೆಡಿಯಲಿನಿಂತುಲೀಲೆಯನಾಡುನೀನೆಂದ ॥ ೫೯ ॥
ಮುಂದೆನಡಿಸುವಸಕಲಕಾರ್ಯಗ । ಳಂದವನುತಾತನ್ನಕುವರಂ ।
ಗೆಂದುತಿಳುಹಿಸಿಕರ್ತವೇಣ್‌ತೆಸ್ವಾಪ್ತಭಕ್ತರಲಿ ॥
ಮುಂದಿನಾಟವನೆಲ್ಲವರುಹಿಸಿ । ಚಂದದಲಿನೀವ್‌ನಡಿದುಕೊಳ್ಳುವ ।
ದೆಂದುಬೋಧಿಸಿಹರಸಿದನುಪ್ರಭುವಾದಿಶಿವಯೋಗಿ ॥ ೬೦ ॥
ನಂದಿವಾಹನನಾಗಭೂಷಣ । ನೆಂದಿನಂತಿಯೆನಿಂತುನಿನ್ನೊಳು ।
ನಿಂದಕರಹಲ್ಮುರಿದುಬೆಳಗುವನಭಯವಿದುನಿನಗೆ ॥
ಎಂದುನಿತ್ಯಾತ್ಮಕನುರಾಮಂ । ಗಂದುಕಿವಿಯೊಳಗೇನೊಪೇಳು ।
ತ್ತಂದಿರದೆತಾಗುಪ್ತನಾದನುಜನವುಬೆರಗಾಗೆ ॥ ೬೧ ॥
ಜಯಜಗನ್ನುತಶೀಲಜಯಜಯ । ಜಯಚಿದಾನಂದಾತ್ಮಜಯಜಯ ।
ಜಯಪುರಾತನಪುರುಷಜಯಜಯನಿತ್ಯನಿರ್ಮಾಯ ॥
ಜಯಗುರುತ್ಕಟದೇವಜಯಜಯ । ಜಯಕೃಪಾನಿಧಿಯೆಂದುವಂದಿಸಿ ।
ನಯದೊಳಂಬರದಲ್ಲಿಪೂಮಳೆಗರೆದುದಮರಗಣ ॥ ೬೨ ॥
ದೇವಜಯಜಯಶಂಭುಶಂಕರ । ದೇವಜಯಜಯಸಾಂಬಸದ್ಗುರು ।
ದೇವಜಯಜಯಮೃತ್ಯುಹರಗುರುರಾಯಮುದಿಪಾಹ್ಯಾ ॥

ದೇವಜಯುಜಯುದುಷ್ಟಮರ್ದನ ದೇವಜಯುಜಯುಭಕ್ತಪಾಲಕ ।
ದೇವಜಯುಜಯುಕರ್ತಸಲಹೆನುತಿತ್ತುಭಕ್ತಜನ ॥ ೬೩ ॥
ಗುರುವೆನಿನ್ನದುಸರ್ವವೆಂಬರು । ಗುರುವೆನೀನೇಸಕಲವೆಂಬರು ।
ಗುರುವೆನೀನೇನಡಿಸಿಕೊಡುನಮಗೆಂದುಕೆಲಜನರು ॥
ಬರಿಯಕೈಯಲಿಬಣ್ಣದಾಮೂ । ತೊರೆವರಕ್ಕಟಪ್ರಾರ್ಥಿಪರುಶ್ರೀ ।
ಗುರುವುಶರಣರುನಗುವರೈಮೂನುಷರನುಡಿನಡೆಗೆ ॥ ೬೪ ॥
ನರರುಸೇರುಶರಣರಾಟಕೆ । ಪರಮಗುರುವನುಸೇವಿಸರುಗಡ ।
ಕರುಣಿಸರುಬಡಬಗ್ಗರಿಗೆಚಿಂತಿಸರುಸದ್ಗತಿಗೆ ॥
ಹರಿವಹಾವಿಗೆಹಾಲನೆರದಾ । ಪರಿಯೊಳಕ್ಕಟಭಕ್ತಿಮಾಡಿಯೆ ।
ಗರಳಮುಯರೊಳುಕೆಡುವರೈಬಹುವಿಧದೊಳೇನೆಂಬೆ ॥ ೬೫ ॥
ಸೇರರೈಗುರುವಿಂಗೆಶಿಷ್ಯರು । ಸೇರರಾಶಿಷ್ಯರಿಗೆಗುರುಗಳು ।
ಸೇರರೈಭಕ್ತರಿಗೆಗುರುಗಳುಮೋಕ್ಷವಿಚಾರಿಸಲು ॥
ಸೇರರಾಗುರುಗಳಿಗೆಭಕ್ತರು । ಸೇರರೈಭಕ್ತರಿಗೆಭಕ್ತರು ।
ಸೇರರೊಬ್ಬರಿಗೊಬ್ಬರಕ್ಕಟಯುಗವಿಚಿತ್ರವಿದು ॥ ೬೬ ॥
ನೀತಿಯೆಂಬುವದಿಲ್ಲಧರ್ಮದ । ರೀತಿಯೆಂಬುವದಿಲ್ಲಯುಮನಾ ।
ಭೀತಿಯೇನೇನಿಲ್ಲಬಹುಜನರೊಳಗೆಲೋಕದಲಿ ॥
ಮಾತಿಗಾಗಿಯೆಬಾಯಿಬ್ರಹ್ಮಕೆ । ಸೋತುಕೆಟ್ಟಹರಕಟಜಗದಧಿ ।
ನಾಥನೇತಾಬಲ್ಲನಲ್ಲವೆಕಲಿಯುಮಹಿಮೆಯನು ॥ ೬೭ ॥
ಕೆಟ್ಟಹರುರುಚಿಗಾಡಿಕೆಲವರು । ಕೆಟ್ಟಹರುಬಹುರೂಪಕಾಡಿಯೆ ।
ಕೆಟ್ಟಹರುಹೊರಗೊಳಗಶಿಖಯಂತಾಗದಲೆಬರಿದೆ ॥
ಶ್ರೇಷ್ಠರೆಂಬೆನೆದುರಿತಕರ್ಮರು । ಶಿಷ್ಟರೆಂಬೆನೆಕ್ರೂರಭಾವರು ।
ಧಿಟ್ಟರೆಂಬೆನೆಕಳ್ಳರಂತಡಗುವರುಲೌಕಿಕರು ॥ ೬೮ ॥
ಅನ್ನದಾತಗೆಸಿತ್ಯಕರುಣಿಗೆ । ಭಿನ್ನಭೇದಗಳಿಲ್ಲದೊಡೆಯಗೆ ।
ಕುನ್ನಿಗಳನುರೆತುಳಿದುಹುತ್ತಿನೊಳಿರ್ದುತೋರುವಗೆ ॥
ಚನ್ನವೀರಗೆಸಿದ್ಧರಾಮಗ । ಭಿನ್ನವಹಶಿವಸಾಂಬಗುರುವಿಗೆ ।
ಕನ್ನೆಯರುಬಗೆಬೆಳಗೆಬೆಳಗಿರೆಮಂಗಳಾರತಿಯ ॥ ೬೯ ॥

ನರರಕಣ್ಣಿಗೆನರರರವ್ರೋಲ್ತನು । ಧರಿಸಲೋಕದಿಭಕ್ತಿನೋಡುವೆ ।
ಗುರುಸಮರ್ಥನುನೀನುಕರ್ತಪರಾಕುಮುದಿಪಾಚ್ಛಾ ॥
ಮೊರೆಯನಿಡುವಾಭಕ್ತಜನರಿಗೆ । ನಿರುತಹೊಳಿದೇವೋದವೀಯುವೆ ।
ಶರಣವತ್ಸಲದೇವಕರ್ತಪರಾಕುಗುರುದೇವ ॥ ೭೦ ॥
ಗುರುಮಹತ್ವದಸಾರವಿಂತಿದು । ಗುರುಮಹತ್ವಮನಂತಮಿರ್ಪುದು ।
ಗುರುಮಹತ್ವವನರಿದುಪೇಳುವರಾರುಲೋಕದಲಿ ॥
ಗುರುಫಕೀರೇಶ್ವರನುಗಂಗಾ । ಧರನಮುಖದಿಂಪೇಳಿಸಿದನೀ ॥
ತೆರದಿಮುಗಿದುದುಸಂಧಿಹದಿನೇಳನೆಯದೆಂದೆನಿಸಿ ॥ ೭೧ ॥

॥ಇತಿ ಶ್ರೀ ಶಿರಃಪುರಸನ್ಮಠ ಶೂನ್ಯಸಿಂಹಾಸನ ಶ್ರೀ ಭಗವಾನ್‌ವಿಭುವಾತ್ಮೀಯ । ಗಂಗನಿಂ ಪೇಳಿಸಿದ ಪೌರಾಣದೊಳ್ ಹದಿನೇಳನೆಯ ಸಂಧಿಸಮಾಪ್ತಮಿಂತು ।
೧೦೫೬ ಪದ್ಯಂಗಳಿಗೆ ಮಂಗಲಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ

## ೧೮ನೇ ಸಂಧಿಯು.

೧ನೇಪಟ್ಟ ಮೊದಲನೆಯ ಸಿದ್ಧರಾಮಸ್ವಾಮಿಗಳು.

ಸೂಚನೆ—
ವರದಿಗಂಬರಮೂಲಕರ್ತನು । ಮರಿಯೆನಿಪಶ್ರೀಸಿದ್ಧರಾಮೇ ।
ಶ್ವರನರೂಪದೊಳೆಸೆವನಾದನುಭಕ್ತರೊಳಹೊರಗೆ ॥ ಪಲ್ಲ ॥
ಗುರುವುಶ್ರೀಗುರುಹಸ್ತಕಮಲೋ । ದರಸುಜಾತನುನಿತ್ಯಮೋಹೇ ।
ಶ್ವರಿಸಹಿತನೆಂದೆನಿಸಿಥಳಥಳಿಸಿದನುಭಕ್ತರಲಿ ॥
ಪರಮಪರಶಿವಸಿದ್ಧರಾಮೇ । ಶ್ವರನುಪಟ್ಟದೊಳೆಸೆವುತಾಡಿದ ।
ಪರಿಯಪೇಳಲಿಕಳವೆಬಣ್ಣಿಸಲಳವೆನರಕವಿಗೆ ॥ ೧ ॥
ಧರೆಯಭಕ್ತರಕೇಳಿರೈಸಲೆ । ಗುರುಮಹಾತ್ಮನುಹುಟ್ಟಿನೊಳುತಾಂ ।
ಬೆರದಬಳಿಕಾಗುರುವಿನಪ್ಪಣೆಯಂತೆಶ್ರೀರಾಮಾ ॥
ಗುರುಮಹಾಪ್ರಭುನೀನೆಗತಿಯೆನು । ತಿರದೆಗದ್ದುಗೆಕಟ್ಟಿಸಿದನತಿ ।
ಹರುಷದುತ್ಸವಕಾರ್ಯದಲಿಮೋಕ್ಷಪ್ರಸ್ತದೇಳ್ಗೆಯಲಿ ॥ ೨ ॥

ಬರುತಲಿಹಜನಕನ್ನಕೊಡುತಲಿ । ಪರಮಭಕ್ತ್ಯಾಚಾರತೋರು ।
ತ್ತಿರವಿನಲಿಬೇಡಿದುದಕೊಡುತಲಿಬಿಡದನಾಥರಿಗೆ ॥
ಗುರುವಿನಾಬಿರುದುಗಳಹೊಗಳಿಸು । ತುರೆನಿಶಾನಿಯನಿಲಿಸಿದನುಗಡ ।
ಗುರುವೆಕಡೆಹಾಯ್ಸೆನುತೆಗದ್ದುಗೆಪೂಜೆನಡಿಸಿದನು ॥ ೩ ॥
ನಿತ್ಯಬರುವನುಖಾನಗೌಡನು ಮೃತ್ಯುಹರನಾಗದ್ದುಗೆಗೆಸ ।
ಚ್ಚಿತ್ತದಾನಂದದಲಿಮಂಗಲವಾದ್ಯರಭಸದಲಿ ॥
ಸತ್ಯಶರಣರಲೀಲೆತಿಳಿಯದೆ । ನುತ್ತೆಬರುವದುಪೌರಜನವಾ ।
ಹುತ್ತಿನಾಗದ್ದುಗೆಗೆಭಕ್ತಿಯೊಳೆರಗಿಪ್ರಾರ್ಥಿಪುದು ॥ ೪ ॥
ಸತ್ಯಸದ್ಗುರುನೀನೆಗತಿಯೆನು । ತೆತ್ತಲುಂಭಕ್ತಾಳಿಬರುವದು ।
ನಿತ್ಯದಲಿಗದ್ದುಗೆಯಪೂಜಿಸುತಿಹರುನಿಷ್ಠೆಯಲಿ॥
ಅತ್ತಮಿತ್ತಂರಾಮಸಂಚರಿ । ಸುತ್ತೆಬಂದಿಹಸರ್ವಜನರಾ ।
ಗೊತ್ತುಹಿಡಿದನ್ನವನುಕೊಡುವನುಬಹಳಕರುಣದಲಿ ॥ ೫ ॥
ಬರುತಲಿರುವರುನಿತ್ಯದಲಿಜನ । ರೆರಗುತಿರುವರುಗದ್ದುಗೆಗೆಮುದ ।
ವೆರಿಸಿಬಹುಭಕ್ತಿಯಲಿಪೂಜಿಸುತಿಹರುಗುರುವರನ ॥
ಪರಮಗುರುಕರುಣಾಳುನಮಗು । ದ್ಧರಿಸುರಕ್ಷಿಸುನೀನೆಗತಿಯೆನು ।
ತಿರದೆಸಾಷ್ಟಾಂಗಾಭಿವಂದನೆಗೈವುತಿಹರವರು ॥ ೬ ॥
ಪುರದಗುರುಹಿರಿಯರ್ಕಳೆಲ್ಲರು । ಪರಮಗುರುವೇಪಾಲಿಸೆನ್ನು।
ತ್ತಿರಗುತಿರುವರುಗದ್ದುಗೆಗೆಬಹುವಿಧದಕಾವ್ಯದಲಿ ॥
ಹಿರಿಯರೇನೀವಿನ್ನುಕೇಳಿರಿ । ಧರೆಗೆಹುತ್ತಿನೊಳಡಿಗಿಗದ್ದುಗೆ ।
ವೆರದಕರ್ತನಮಹಿಮೆಯನುನಿಮಗೈದೆಹೇಳುವೆನು ॥ ೭ ॥
ಅತ್ತಲಾದಾಸೋಗನಡಿಸು ತ್ತಿತ್ತಲಾಗದ್ದುಗೆಯಪೂಜಿಸು ।
ತೆತ್ತಲುಂಸಮದೃಷ್ಟಿಯಿರಿಸುತ್ತಾಡುತಿರೆರಾಮ ॥
ಬಿತ್ತರಿಸಿಮುದಿಪಾಕ್ಷನಾತನ । ಚಿತ್ತದಲಿವೈರಾಗ್ಯಪುಟ್ಟಿಸೆ ।
ಕತ್ತಲೊಳುಕಲ್ಹೊಡೆವನಾದನುರಾಮಗದ್ದುಗೆಗೆ ॥ ೮ ॥
ಉರಗಬಂದಂತಾಯ್ತುಭರದೊಳು । ಕರಡಿಬಂದಂತಾಯ್ತುರಭಸದೆ ।
ಭರದಿಹುಲಿಬಾಯ್ದೆರದುಬಂದಂತಾಯ್ತುಸಮ್ಮುಖಕೆ ।

ಅರರೆಹೆದರದೆಸಿದ್ಧರಾಮನು । ಗುರುವೆನೀನೇಸಕಲರಾಪೆನು ।
ತಿರದೆಗದ್ದುಗೆಯೇರಿಕುಳಿತನುಮುದದೊಳಾಕ್ಷಣಕೆ ॥ ೯ ॥
ಭರದೆಕೋಲ್ಮಿಂಚೆರಗಿಗುಡುಗಿನ । ಭರದೊಡನೆಸಿಡಿಲೆರಗುವಂದದೊ ।
ಳುರಿಯುಬಂದಾರ್ಭಟಿಸುತಂಜಿಸುತಿತ್ತುರಾಮನನು ॥
ಪರಮಗುರುವೇನಿನ್ನಸೂತ್ರದೊ । ಳಿರುವಬೊಂಬೆಯುನಾನುನೀನೀ ।
ಪರಿಯೊಳಂಜಿಪುದೇನುಧರ್ಮವೆಕರುಣಿಸೆನಗೆಂದ ॥ ೧೦ ॥
ಅರರೆಬೆಳಕಿನದೊಂದೆಕಂಬವು । ಧರಣಿಯಿಂದಾಗಸಕೆನಿಂತುದೊ ।
ಕರೆಮೆಸಿಸಿತೋರ್ದತ್ತುಬರೆತೇಜಸ್ಸುರಾಮನಿಗೆ ॥
ಗುರುಪರಂಜ್ಯೋತಿಸ್ವರೂಪನೆ । ಕರುಣಿಸೆನ್ನನೆನುತ್ತೆರಾಮನು ।
ಕರಮುಗಿದುಶಿರಮಣಿಡುವಂದಿಪನಾದನೇವೇಳ್ವೆ ॥ ೧೧ ॥
ನೋಡಲಾರೆನುನಿನ್ನತೇಜವ । ನೋಡಿಬದಕುವರುಂಟೆಲೋಕದಿ ।
ನೋಡಿದೆನುರವಿಕೋಟಿತೇಜಃಪುಂಜಮೂರ್ತಿಯನು ॥
ನೋಡಬಾರದುದೆಲ್ಲನೋಡಿದೆ । ನೋಡಿಕಂಪನವಾಯ್ತುಬಹುಭಯ ।
ಕೂಡಿಕೊಂಡಿದೆಕರ್ತಕೃಪೆಗೈಯೆಂದನಾರಾಮೂ ॥ ೧೨ ॥
ಬಾಮಗುವೆಬಾಮಗುವೆನೀನೇ । ರಾಮಣೀಯಕನಾದಜಗದಭಿ ।
ರಾಮನಹುದೈಯೆನುತಕರ್ತನುಗುರುಪರಂಜ್ಯೋತಿ ॥
ರಾಮನಂಪದೆದಪ್ಪಿಕೊಂಚೇ । ಪ್ರೇಮದಲಿನುಡಿಸಿದನುಸದ್ಗುಣ ।
ಧಾಮರೇಸಲೆನೀವುಕೇಳಿರಿಕರ್ತನೀಕಥೆಯ ॥ ೧೩ ॥
ನನಗೆಮಿರಿದವಸ್ತುನೀನ್ಯೆ । ನಿನಗದಾರ್ಸರಿಮೂರುಲೋಕದಿ ।
ನಿನಗೆನಾನವ್ಮೋಜಿಕೂಡಿಯೆಸೇವೆಮಾಡುವೆನು ॥
ಸನುಮತವುನಮಗಿದುವೆಸಂತಸ । ವನುದಿನವುಪಾವಾಡುತೋರುವೆ ।
ವೆನುತಗೋಚರನಾಗಿದೇವಿಗೆಬೆಸಸಿದನುಬಳಿಕ ॥ ೧೪ ॥
ಸುರರುಘೇಯೆನುತಿರಲುಗಗನದೊ । ಳರದಲೆಗುರುಸಿದ್ಧರಾಮನಿ ।
ಗರಕೆದೇವಿಯೆರೂಪುತೋರ್ದುದುಬಹುಭಯಂಕರವು ॥
ಶ ಣಸಂಕುಲಕಾಮಧೇನುವೆ । ಕರುಣಿಸೌನೀನೆನುತರಾಮನು ।
ಹರುಷದಲಿಶಿರಬಾಗಿನುತಿಸಿದನನಘಶ್ರುತಿಗಳಲಿ ॥ ೧೫ ॥

ಕಂದಕೇಳೈನೀನುಬ್ರಹ್ಮಾ। ನಂದಬೇಡೈನಿನಗೆನಾನೊಲಿ।
ದಿಂದುಕೊಡುವೆನುಬೇಡುವರಗಳನೆನ್ನುತಿರೆದೇವಿ ॥
ಇಂದುನೀನೆನಗಂಬೆಯಾದೊಡೆ। ಹಿಂದುಮುಂದೆಣಿಸದಲೆನನ್ನೊಳ।
ಗೊಂದಿಕೊಂಡಿರುಲೀಲೆತೋರಿಸುತೆಂದನಾರಾಮಾ ॥ ೧೬ ॥
ತರಳಚಿಂತಿಪುದೇಕೆಬಿಡುಶಿವ। ಶರಣರೆಲ್ಲರತಾಯಿಜಗದಲಿ ॥
ದುರುಳರನುದಂಡಿಸಿಯೆರಕ್ಷಿಪಳೆಂಬಬಿರುದೆನಗೆ ॥
ಹೊರಗೊಳಗೆನಾನಾಗಿನಿನ್ನೊಳು। ಗುರುವಿನೀಕಾರಣವನಡಿಸುವೆ।
ನರಿತುಕೋನೀನೆಂದಗೋಚರಳಾದಳಾದೇವಿ ॥ ೧೭ ॥
ಗುರುಫಕೀರನಭಕ್ತರೇನೀವ್। ಹರುಷದಿಂದಲೆಕೇಳಿರಿದನುರೆ।
ಗುರುದಿಗಂಬರನಾಪರಾಂಬನುವೂಗಲದೃಶ್ಯ ॥
ಗುರುವೆನೀಗತಿಯೆನುತೆಗದ್ದುಗೆ। ಗಿರದೆವಂದಿಸಿಮಠಕೆಬಂದಾ।
ಗುರುಫಕೀರನುಬಿಡದೆಭಕ್ತರಿಗೆಲ್ಲತಿಳಿಸಿದನು ॥ ೧೮ ॥
ಪರಮಗುರುಸುಕಟಾಕ್ಷಕಾಂತಿಯೆ। ಪರಿದುಪಸರಿಸಿದತೆನ್ತೊಯೆಂದೆನ।
ಲಿರದೆತೋರ್ದುದುಬೆಳಗುಪೂರ್ವಾಚಲದಶಿಖರದಲಿ ॥
ಅರಿತಭಕ್ತರುಸೇವಕರುನಿಜ। ಗುರುವಿಗುರೆಸಾಷ್ಟಾಂಗವೆರಗಿಯೆ।
ಪರಮಕರ್ತನಪೂಜಿಸಿದರೈಬಹುವಿಧಾನದಲಿ ॥ ೧೯ ॥
ಬಳಿಕಸದ್ಗುರುಸಿದ್ಧರಾಮನು। ಸಲಿವುತಾತ್ಮಾರಾಮಪದದಸ।
ಲ್ಲಲಿತಭಜನೆಯೊಳಂದುಗದ್ದುಗೆಗೆರಗಿಪೂಜಿಸುತ ॥
ಭಲರೆಕರ್ತನೆನೀನೆಬ್ರಹ್ಮವು। ಭಲರೆನಿರ್ಬೈಲಾತ್ಮನೀನೇ।
ಭಲರೆಭಲರೇಯೆನುತಪರವಶನಾದನೇನೆಂಬೇ ॥ ೨೦ ॥
ಬೊಮ್ಮತನ್ನೊಳೆಹೊಳೆವುತಿರೆಜಗ। ದಮ್ಮಹೊರಗೊಳಗೆಸೆವುತಿರೆಪರ।
ಬೊಮ್ಮತೇಜಃಪುಂಜನಾಗಿಯೆತೋರುತಾರಾಮಾ ॥
ಹೆಮ್ಮೆಯವರನುಮೆಟ್ಟುತಲಿಬಲುಃ। ಹಮ್ಮಿನವರನುಹಣಿವುತಲಿಬಿಡ।
ದೊಮ್ಮನರಪಾಲಿಸುತೆನಡೆವವನಾದನಡಿಗಡಿಗೆ ॥ ೨೧ ॥
ಜನರೆಕೇಳಿರಿಸಿದ್ಧರಾಮನು। ಜನಭಯಂಕರನಾಗಿಬೆಳಗುತೆ।
ಜನರೊಳತಿಲೀಲೆಯಲಿಬಹುರೂಪದಲಿರಂಜಿಸುತಾ ॥

ಜನದಮನದೊಳಗುಟ್ಟುಹೇಳುತೆ । ಜನಕೆಕಾವ್ಯಾರ್ಥವನುಕೊಡುತಲಿ ।
ನೆನೆದಡೆಲ್ಲಿಯೆತೋರಿನುಡಿಸುವನಾದನೆಲ್ಲರಿಗೆ ॥ ೨೨ ॥
ಬಲ್ಲಿದರಬಾಗಿಸುತೆಬಿಡದಲೆ । ಖುಲ್ಲರನುತತ್‌ಕ್ಷಣಕೆದಂಡಿಸು ।
ತೊಳ್ಳೆಯವರಿಗೆಶಾಂತಸದ್ಗುರುಕರುಣಿಯೆನಿಸುತಿಹ ॥
ಎಲ್ಲಕುಲದವರಲ್ಲಿಪೋಗುವ । ನೆಲ್ಲಜನರೊಳ್‌ಭಿಕ್ಷೆಬೇಡುವ ।
ನೆಲ್ಲರೊಂದೇನನಗೆನೀವೆಂತೆಂಬನಾರಾವೂ ॥ ೨೩ ॥
ಜಗಕಗಮ್ಯವುಶರಣರಾಟವು । ಜಗದೊಳಗಣಿತಶರಣರಾಟವು ।
ಜಗಕಗೋಚರಶರಣರಾಟವುತಿಳಿಯದೆಂದೆನಿಸಿ ॥
ಜಗದಜಂಜಡರಲ್ಲಿರಾಮನು । ಸಗುಣಲೀಲಾನಂದದಲಿವ್ಯೈ ।
ಮೆಗಳತೋರಿಸಿಲೋಕದವರನುಬಾಗಿಸುವನಾದ ॥ ೨೪ ॥
ನಾನೆಯೋಗಿಯುನಾನೆಸಾಧುವು । ನಾನೆವಿರತನುನಾಚರಂತಿಯು ।
ನಾನೆಜಂಗಮನೆಂಬಮೂಢರಬಿಡದಲಾರಾವೂ ॥
ನಾನೆಭೂಸುರನಾನೆವೈಷ್ಣವ । ನಾನೆಬ್ರಹ್ಮವದೆಂಬಹೆಮ್ಮೆಯ ।
ಮೂನವರನನುಮೂನವೂಡದೆಬಾಗಿಸುವನಾದ ॥ ೨೫ ॥
ಹೌದುನಿಜಪರವಸ್ತುತಾನಿವ । ಹೌದುತಾನಿವಧರೆಗೆಸದ್ಗುರು ।
ಹೌದುತಾಶಿವಲಿಂಗಮೂರ್ತಿಯುಹುಟ್ಟಜಂಗಮನು ॥
ಹೌದುಹೌದೆನ್ನುತ್ತನುತಿಸುತೆ । ಮೇದನೀಜನರೆಲ್ಲರಾಮನ ।
ಪಾದಪದ್ಮಂಗಳಿಗೆಭಕ್ತಿಯೊಳೆರಗಿಸೇವಿಪರು ॥ ೨೬ ॥
ದೇವಶಂಕರನೀನೆಪಾಲಿಸು । ದೇವನರಹರಿನೀನೆರಕ್ಷಿಸು ।
ದೇವಸದ್ಗುರುದತ್ತಕಾಪಾಡುವದುಬಿಡದೆನುತ ॥
ದೇವಲೋಕದಸಿದ್ಧಲಿಂಗನ । ದೇವದೇವನಶ್ರೀಫಕೀರನ ।
ಭಾವಶುದ್ಧಿಶ್ರೇಯದಲಿವಂದಿಪರುಭೂಸುರರು ॥ ೨೭ ॥
ಧರೆಗೆಬಾಜಾವಿಾನದೀನನು । ವರಫಕೀರನವಿಾನದೀನನು ।
ಪರಿಕಿಸಲ್ಕಿವರೊಂದೆಗುರುಶಿಷ್ಯರ್ಕಳಾಗಿಹರು ॥
ಗುರುಗಳಿವರೆಮಗೆಂದುಭಕ್ತಿ । ಸ್ಫುರಣದಿಂದಲೆಮುಸಲಮೂನರು ।
ಗುರುನಿರಾಕಾರನನುರಾಮನಭಜಿಸಿಸೇವಿಪರು ॥ ೨೮ ॥

ಜ್ಯೋತಿಯಾಗಿಯೆತೋರ್ವನೈನಿ । ಭೀತನಾಗಿಯೆತೋರ್ವಜಗದೊಳ ।
ಜಾತನಾಗಿಯೆತೋರ್ವನಾಗುರುಸಮಯಕನುಸರಿಸಿ ॥
ಭೂತನಾಥನುಮಾಗಿಬಹುವಿ । ಖ್ಯಾತನಾಗಿಯೆತೋರ್ವಜಗದಧಿ ।
ನಾಥನಾಗಿಯೆತೋರ್ವನಾಗುರುಲೀಲೆಗೇನಂಬೆ ॥ ೨೯ ॥
ಕೊರಡುಚಿಗರಿಸಿನಗುವನಾಗುರು । ಬರಡುಹಿಂಡಿಸಿಹಾಲುತೋರ್ವನು ।
ಕುರುಡರಿಗೆಹೆಳವರಿಗೆಕಣ್ಕಾಲ್ಕರುಣಿಸುತ್ತಿಹನು ॥
ತಿರುಕಹರಕರಿಗೆಲ್ಲಕಾಮ್ಯವ । ನರವಿನಿಂದುಪಚರಿಸಿಕೊಡುವನು ।
ಧರೆಗೆಶಂಭುಫಕೀರನೆನಿಸುತ್ತಿರುವನೇವೇಳ್ವೆ ॥ ೩೦ ॥
ಅರರೆರಾಮನದೃಷ್ಟಿಮಾತ್ರದಿ । ಭರದಿಕರ್ಪುರವುರಿವುದೈನಿ ।
ಬೈರಗುಗೊಳಿಜನಪಣತಿಬತ್ತಿಗೆದೀಪಮಾಡುವದು ॥
ಉರಿವಜ್ವಾಲೆಯುಶಾಂತಮಕ್ಕುಂ । ನರರರೋಗಾದಿಗಳುಹುಣ್ಣುಗ ।
ಳರದೆಹೋಹವುಪೇಳಲೇನಾಗುರುವಿನಾಟವನು ॥ ೩೧ ॥
ಹಿಡಿದುಕಲ್ಮಳ್ಳರಳುಗಳನೇ । ಕಡಲಿಯಂದದಿತಿಂದುಬಿಡುವನು ।
ನುಡಿಸುವನುಮಿಗೆಗ್ರಾಮದೇವತೆಗಳನುಲೋಕದಲಿ ॥
ಅಡಿಕಿರುದ್ರಾಕ್ಷಿಯನುಮಾಳ್ಪನು । ಹುಡಿವಿಭೂತಿಯಮಾಡಿತೋರ್ವನು ।
ಪೊಡವಿಶಿಲೆಯನುಲಿಂಗವಾಗಿಸಿತೋರ್ವನಾಗುರುವು ॥ ೩೨ ॥
ಒಳಗೆಹೋಗುತೆಕೀಲಿಹಾಕಿಸಿ । ಸುಳಿವನಂಗಳದಲ್ಲಿತಾಬೈ ।
ಲೊಳಗೆಬಿಡದಲದೃಶ್ಯನಪ್ಪನುಸಿದ್ಧರಾಮೇಶ ॥
ಮೃಡನಕಾಣಿಸಿಭಕ್ತಪರಿಜನ । ಕೊಡನೆನಿಜರೂಪದಲಿಬೆಳಗುತೆ ।
ನುಡಿವನೆಲ್ಲಮರಾಯನಾಟವಿದೆಂದುನಗುತಿಹನು ॥ ೩೩ ॥
ಅನ್ನವೆಲ್ಲವುಮಲ್ಲಿಗೇಹೂ । ವಿನ್ನುಮಾಂಸವುರಕ್ತಪುಷ್ಪವು ।
ಸನ್ನುತಾಮೃತವಾಗುವದುಗಡಹೆಂಡಮದ್ಯವದು ॥
ಚಿನ್ನವಕ್ಕುಂಕಬ್ಬಿಣವುಗಡ । ಹೆಣ್ಣುಗಂಡಾಗುವದುಗಂಡಾ ।
ಹೆಣ್ಣೆನಿಸುಗುಂಪರಮಸದ್ಗುರುರಾಮತಂತ್ರದಲಿ ॥ ೩೪ ॥
ಸ್ಮರಿಪಚಿಂತಿಪವ್ಯನಹರಿಪಸಾ । ದರದಿಪೂಜಿಪವೇದಪಠಿಸು ।
ಶ್ರೀಗುನತತ್ವದಮಹಿಮೆವರ್ಣಿಪಸಕಲಕುಲಜನಕೆ ॥

ಗುರುದಿಗಂಬರತೋರುತಡಗು । ತ್ರಿರುವನವನೇವರನೆಸದ್ಗುರು ।
ಬೆರಗಿನಲಿಜನನುಡಿವುದಾಯಿತುತಮ್ಮತವ್ಮೊಳಗೆ ॥ ೩೫ ॥
ಅಲ್ಲಮಪ್ರಭುಕರ್ತಪುರದೊಳ । ಗೆಲ್ಲಕಡೆಕೋಲ್ಮಿಂಚಿನಂದದೊ ।
ಳೆಲ್ಲರಿಗೆತೋರುತ್ತೆಕೂಡಲದೃಶ್ಯನಾಗುತಿರೆ ॥
ಇಲ್ಲಿದರುಶನಕೊಟ್ಟನೆನ್ನುವ । ರಲ್ಲಿನುಡಿಸಿದನೆಂದುಪೇಳುವ ।
ರೆಲ್ಲರಲಿಶಿರಹಟ್ಟಿಯೊಳಗೀವೊತುನಡೆದಿಹುದು ॥ ೩೬ ॥
ಈತನೇಸತ್ಪುರುಷನೆನ್ನುವ । ರೀತನೇಶಿವಯೋಗಿಯೆನ್ನುವ ।
ರೀತನೆಶಿವಸಾಂಬಲೀಲಾಮೂರ್ತಿಯಹುದಹುದು ॥
ಈತನಾಟವುನವುಗೆತಿಳಿಯದು । ಭೂತನಾಥನೆಬಲ್ಲನೆನುತಲಿ ।
ಖ್ಯಾತಿಯೊಳುನುತಿಸುವರುಸರ್ವರುಸಿದ್ಧರಾಮನನು ॥ ೩೭ ॥
ಈತಸದ್ಗುರುಶಿವನುಘನಲೀ । ಲಾತಿಶಯದಲಿಸಾಂಬನಾಮಹಿ ।
ವೊತಿರೇಕದೊಳಹುದುಕರ್ತನುಹೌದುಹೌದೆನುತ ॥
ಪ್ರೀತಿಯಿಂದಲೆಬಂದುಜನರೊಳು । ಖ್ಯಾತಿಗೊಂಡಾಸಿದ್ಧರಾಮಂ ।
ಗಾತುಕೀರ್ತಿಸುತಿಹರುಸೇವಿಸುತಿಹರುನಿಷ್ಠೆಯಲಿ ॥ ೩೮ ॥
ಎಲ್ಲಗೌಡರುಶಾನಭೋಗರು । ಮೆಲ್ಲದೇಸಾಯಿಯರುರಾವುತ ।
ರೆಲ್ಲಧೊರೆಗಳುರಾಮಲೀಲೆಗೆಚಕಿತರಾಗುತಲಿ ॥
ಎಲ್ಲಮದಗಳನುಳಿದುನರಹರಿ । ಯಲ್ಲಮಪ್ರಭುಕರ್ತನೆಂದೇ ।
ಎಲ್ಲರೆರಗುತಸೇವೆಮೂಡುವರಾದರಾತನಿಗೆ ॥ ೯೩ ॥
ಭಾವಿಸಲ್ಕರಿದೆನಿಸಿಭೂಮಿಯ । ದೇವರಿಗೆಪ್ರತ್ಯಕ್ಷವಾಗಿಸಿ ।
ದೇವದೇವನೆಕರ್ತನೇತಾನೆನಿಸಿಥಳಥಳಿಸಿ ॥
ಆವಗುಂಪಾವಾಡುತೋರು । ತ್ತಾವಿಭುವುಗುರುಸಿದ್ಧರಾಮನು ।
ಭೂವಲಯದೊಳುಖ್ಯಾತನೆನಿಸಿದನೆಲ್ಲದೆಸೆಗಳಲಿ ॥ ೪೦ ॥
ಪರಶಿವನುಸ್ವಾತಂತ್ರ್ಯಶೀಲನು । ನಿರವಯವನಿರುಪಾಧಿಕರ್ತನು ।
ಧರಣಿಯಲಿಭಕ್ತರಿಗೆಸಾಪ್ರತ್ಯಕ್ಷನಾಗುತಲಿ ॥
ಗುರುಫಕೀರನಸಿದ್ಧರಾಮನ । ಬೆರತುಪಾವಾಡುಗಳನಾಗಿಸಿ ।
ಬಿರುದುಮೆರೆಸುತಖ್ಯಾತಿಬಡಿಸುವನಾದನಡಿಗಡಿಗೆ ॥ ೪೧ ॥

ಗುರುಮಹೋತ್ಸವಮೊಡಲೋಸುಗ । ಸಿರಿಯುಸಡಗರತೋರುತಿರುತಿಹ ।
ನಿರದೆಮಿಗೆಪಾವಾಡುವೊಳ್ಪನುಭಕ್ತಿಗೋಸುಗವು ॥
ಅರಿಯಲಾಗುರುಸಿದ್ಧರಾಮನು । ತರಣಿಯಂತಾದಗ್ಧಪಟಗಂ ।
ತಿರುತಿಹನುತಾಸಿತ್ಯನಿರ್ಬೈಲಾಗಿಲೋಕದಲಿ ॥ ೪೨ ॥
ಅರವುಗೊಳ್ಳಿರಿನಡೆದುಕೊಳ್ಳಿರಿ । ಶರಣರಾಟವನರಿತುನಲಿಯಿರಿ ।
ಪರಮಗುರುವನುಸೇವಿಸುತ್ತಲೆಪಡೆಯಿರುರುಕೃಪೆಯ ॥
ಗುರುದಿಗಂಬರಕರ್ತನಿಳೆಗಿಹ । ನರಿಯರೈನೀವೆಂದುರಾಮೇ ।
ಶ್ವರನುಬಟ್ಟಂಗಿಯನುಹೊಗಳಿಸಿಕಾಳಿಹಿಡಿಸುವನು ॥ ೪೩ ॥
ಅಣಕವಾಡಲಿಬೇಡಿರೋನೀವ್ । ಕೆಣಕಬೇಡಿರೊಕಾಡಹಾಕಿದ ।
ಹಣದಹಮ್ಮನುಬಿಡಿರೊಬಿಡಿರೋನಿಮ್ಮದುರ್ಗುಣವ ॥
ಹೆಣಗಬೇಡಿರೊನೀವುಸುಮ್ಮನೆ । ಸೆಣಿಸಬೇಡಿರೊಭಕ್ತಿಯಲಿಶಿರ ।
ಮಣಿದುಬದುಕಿರೊಯೆನ್ನುತಿರುವವುಬಹುಪರಾಕುಗಳು ॥ ೪೪ ॥
ನೋಡಿರೈನೀವ್‌ಮೂಲಪುರುಷನ । ತೋಡುರೂಢಿಗೆ ಪೊಸತದಲ್ಲವೆ ।
ಕೂಡಿಕೊಂಡನುಮರಿಯನಾಮರಿತಾನುಮುರೆಯೂಗಿ ॥
ಆಡುತಾರಾಮನಲಿವಿಗೆಪಾ । ವಾಡುತೋರುತೆಮಠಕೆವೈಭವ ।
ಕೂಡಿಸುತ್ತೆಸೆದಪನುಶ್ರೀಭಗವಾನ್ತ್ರಿಭುವುಕರ್ತ ॥ ೪೫ ॥
ಕೇಳಿರೈನೀವ್‌ಕೇಳಿರೈಗುರು । ಲೀಲೆಯನುನಿಮಗೈದೆಪೇಳ್ವೆನು ।
ಭಾಳನೇತ್ರನುಮೂಲಪಾಚ್ಚನುರಾಮನೊಳ್ಬೆರೆಯೆ ॥
ಕಾಲಕಾಲಕೆಬೆಳಗುತೀಪರಿ । ಲೋಲಸದ್ಗುರುಸಿದ್ಧರಾಮನು ।
ತಾಳಿದತಿಶಾಂತಿಯಲಿಶೋಭಿಪನಾದನವನಿಯಲಿ ॥ ೪೬ ॥
ಸಿದ್ಧರಾಮನುಭುವನವೊಯ್ಯಾ । ಬದ್ಧರಾಗದಮೊಳ್ಕೆಯಲಿನಿಜ ।
ಬುದ್ಧಿಹೇಳುತೆಭಕ್ತರಿಗೆಶಿವಶಾಂತನೆನಿಸುತಲಿ ॥
ತಿದ್ದುತಾತ್ಮಾರಾಮಸೇವೆಯೊ । ಳಿದ್ದುಬ್ರಹ್ಮಜ್ಞಾನವರುಪು ।
ತ್ತುದ್ಧರಿಸಹತ್ತಿದನುನಂಬಿದಭಕ್ತಜನಕುಲವ ॥ ೪೭ ॥
ಗುರುನಿರೂಪದೆಸಿದ್ಧರಾಮೇ । ಶ್ವರನುಭೂಲೋಕದಲಿನಿಂತೀ ।
ನರರಿಗುಪಕೃತಿಗೈಯಲೋಸುಗಮೊಪ್ಪನಂದದಲಿ ॥

ಪರಮದಾಸೋಗದಲಿಸಮತೆಯ ನಿರಿಸಿಬೋಧಿಸಿತೃಪ್ತಿಬಡಿಸುವ ।
ನಿರದೆವಿಧವಿಧದತಿಥಿಯಭ್ಯಾಗತರನಗಲದಲೆ ॥ ೪೮ ॥
ರಾಜರಾಜವಿರಾಜರಾಮನು । ರಾಜಯೋಗಾನಂದದಲಿಸುರ ।
ಭೂಜನೆನಿಸುತ್ತಿಹನುಭಕ್ತಿಗೆಮಾತ್ರತೋರುತಲಿ ॥
ಸಾಜಮಹದಾನಂದದಲಿತಾ । ನೀಜನಕೆಬಹಳೀಲೆದೋರುತೆ ।
ಸೋಜಿಗಂಬಡಿಸುತ್ತೆಶಿವಲಿಂಗಾಂಗಿಯೆನಿಸುವನು ॥ ೪೯ ॥
ಗುರುವನುರೆನಂಬಿರ್ಪಭಕ್ತರೆ । ಗುರುಫಕೀರನಲೀಲೆಯನುನೀ ।
ವರಿಯಿರ್ಕೈನಿಜಭಕ್ತಿಮಾತ್ರಕ್ಕೊಲಿವನಾಗುರುವು ॥
ನೆರೆಯಹಳ್ಳಿಯೊಳಿರ್ಪಕುರುಡನ । ಪರಿಯಕೇಳಿರಿಗುರುಫಕೀರೇ ।
ಶ್ವರಮಹತ್ವವನರಿತುಕೊಳ್ಳಿರಿನೆನಪಿನಲ್ಲಿಡಿರಿ ॥ ೫೦ ॥
ಧರಣಿಯಲಿಪೇಳ್ವರುಪುರಾಣವ । ನೆರೆದುಕೇಳ್ವರುಸಕಲಕುಲದವ ।
ರರರೆಸತ್ಯವೊಸುಳ್ಳೊಪೌರಾಣೋಕ್ತಿಯೆನ್ನುವರು ॥
ಮರವಿಗಾವಾತದುವೆಸ್ಸೆನೀ । ವರಿತಭಕ್ತರುಹೇಳ್ವದೇನ್ಕೆ ।
ಗುರುಮಹತ್ವವುಸುಪ್ರಸಿದ್ಧವುಹೇಳ್ವೆನಾನಿನ್ನು ॥ ೫೧ ॥
ಕುರುಡನೋರ್ವನುಬಹಳಕಷ್ಟದೊ । ಳಿರುತಿರಲ್ಕವನೊಂದುದಿನದಲಿ ।
ಮರುಗಿದನುಮಿಗೆಬಗೆಯೊಳಾತ್ಮಸ್ಥಿತಿಗೆಪಳಿಗೈದು ॥
ಸರಸಿಜೋದ್ಭವನಿಂತುಪಣಿಯಲಿ । ಬರಿದನೇಕಡುಪಾಪಿಹರಹರ ।
ಕರುಣವಿಲ್ಲದೆಕೆಡಿಸಿದನೆವಿಧಿಬಿಡದುತನಗೆನುತ ॥ ೫೨ ॥
ಮರೆಯಹೊಕ್ಕರನಗಲದಿರುವನು । ಪೊರೆಯನಾಲಿಪನವರಭೀಷ್ಟವ ।
ನಿರದಲೀಯುವನೆಂದುಶ್ರುತಿಗಳುಬಹಳಸಂಭ್ರಮದಿ ॥
ಸಿರಿಯರಸನಂನುತಿಪವಾತನ । ಬಿರುದುದಿಟವಿಹುದೆಂಬವಾತನ ।
ಬಿರುದುತಾನೆಲ್ಲಿಹುದೊಪುಸಿಯಾಗಿಹುದೊಕಲಿಯುಗದಿ ॥ ೫೩ ॥
ಸಿರಿಯಸೊಬಗಿಗೆಸೋತುಶ್ರೀಹರಿ । ಶರಣರಂಮರತಿರುವನೋನರ ।
ಹರಿಯುರಾಕ್ಷಸಹರಣಸಂಹರಣಾರ್ಥದಲ್ಲಿಹನೋ ॥
ದುರಿತಕರ್ಮಿಗೆಮೋಣುತನ್ನಯ । ಬಿರುದುತೋರಿಸದಿರುವನೋಗಡ ।
ಧರೆಯೊಳೀತೆರಬಾಳ್ವದೈವವಿದೆಂದುಬಿಸುಸುಯ್ವ ॥ ೫೪ ॥

ಹರನುತಾಂಲಯಕರ್ತನಾಗಿಹ । ನಿರುವೆಮೊದಲಾದಖಿಳಜೀವರ ।
ನೊರಸಿಕೊಲ್ಲುವನೆಂದು ಶ್ರುತಿಗಳುಸಾರುತಿಹವಮವ೧ ॥
ಮರೆದನೋನನಗೇಕೆಲೋಕದೊ । ಳಿರಿಸಿಹನೊಕಡ-ಬೋಡಿದೈವದ ।
ತರವದೆಂತಿಹುದಯ್ಯೋಶಿಳಿಯದೆನುತ್ತೆಗೋಳಿಡುವಾ ॥ ೫೫ ॥
ತೊರೆದುಸಲೆವ್ಯಾಪಾರವನುಹೊ । ಕ್ಕಿರುವನೋಗಿರಿಗಂಹರವನವ ।
ಗೊರವನಾಸೊಡಬಲಿಯೊಳಿರುವನೊನಿಜವಿರಕ್ತಿಯಲಿ ॥
ಅರಿಯಲಾಪರಬೊಪ್ಪ್ಪದಲಿಬೆರ । ದಿರುವನೋಲಿಪಿತೀರದಿರುವದೊ ।
ಮರಣಬಾರದುಪಾಪಿದೈವಮಿದೆಂದುದುಃಖಿಸುವಾ ॥ ೫೬ ॥
ಆಕುರುಡನ·ವಿಧಿಗೆಚಿಂತಿಸಿ । ಶೋಕಮಂಮಿಗೆವೊಡುತಿರೆಗಡ ।
ಸೋಕಿದುದುಶ್ರುತಿಹರನುಮುನಿಗರುಕಾವಗುರುವೆಂಬಾ ॥
ಕಾಕುಮತಿಯನುಬಿಟ್ಟುನಂಬುತೆ । ಲೋಕವೆಲ್ಲವೃಪುತಕೆನಡೆವುದು ।
ಲೊಕನಾಥನಭಜಿಸಿಬಯಕೆಯಪಡೆವುದೆಂದರಿದಾ ॥ ೫೭ ॥
ಪರರುಪಾಯಗಳೆಲ್ಲತೀರಿದ । ವರಿಯೆಗುರುಸಾಹಸನದೊಂದಿದೆ ।
ಮರೆತುಕೆಟ್ಟೆಹೆನಿನ್ನುನೋಡುವೆನೆಂದಕಂಗಳನು ॥
ಗುರುಫಕೀರಸ್ವಾಮಿಯನುಕ । ರ್ತರನುಜಾನಿಸಿದೃಢಸುಭಕ್ತಿಗೆ ।
ಕೊರತೆಬಾರದವೋಲ·ನಂಬಿದನವನುಗುರುಪದವಾ ॥ ೫೮ ॥
ಕುರುಡನಾಧೃತಿಗೊಂಡುಗುರುವಿನ । ಚರಣವನುಜಾನಿಸುತೆಹೃದಯದಿ ।
ಶರಣರಕ್ಷಕನೀನೆನಿನ್ನಿಂದಧಿಕರಿಲ್ಲೆನುತಾ ॥
ಶರಣಚಿಂತಾಮಣಿಯುನೀನೇ । ಶರಣಸುರತರುನೀನೆಜಗದೊಳು ।
ಪುರುಷನಿರ್ಜರಕಾಮಧೇನುವೆನೀನೆಗತಿಯೆನುತಾ ॥ ೫೯ ॥
ಮರವೆಪೋಗಿರೆಹೃದಯಬೆಳಗಿರೆ । ಸ್ಥಿರವದಾಗಿರೆಭಕ್ತಿಯಂದವು ।
ಗುರುವಿನಡಿಗುರುಸಿಷ್ಟನೆಲಗೊಳೆಕುರುಡನಗಲದಲೆ ॥
ಗುರುವತಾಂನಲಿನಲಿದುಪಾಡು । ತ್ತಿರಲಿಕಾಗುರುವರಗೆಕರ್ತಗೆ ।
ಕರುಣಮುಣ್ಮಿತ್ತಾಗಳಾಜಾತ್ಯಂಧಭಕ್ತನಲಿ ॥ ೬೦ ॥
ಧರೆಯವೈದ್ಯರರೂಪದಿಂಶ್ರೀ । ಗುರುವುಕುರುಡನಕೇರಿಯೊಳ್‌ಸಂ ।
ಚರಿಸಹತ್ತಿದನರರೆವೈದ್ಯರವೈದ್ಯನಿವನೆನುತಾ ॥

ಕುರುಡರಕ್ಷಿಗೆತಕ್ಕವುದ್ದನು । ಹರಸಿಕೊಡುವೆನುನಿವ್ಮೊಳದೊರ್ಡೆ ।
ಕುರಡನಂಕರತಂದುತೋರಿಸಿರೆಂದನಾಕರ್ತಾ ॥ ೬೧ ॥
ಕುರುಡನಾಪ್ತರುಕಂಡುವೈದ್ಯನ । ಕರೆವುತಂದರುಮನೆಗೆತೋರಿಸಿ ।
ದರವನನುಮುಂದಿರಿಸಿಕಣ್ಣಿಸಹಾಡುಹೇಳಿದರು ॥
ಸರಸಿಜಾಸನವಿಧಿಯುಮರವೆಯು । ಪರಿಯುಮೊಳ್ಕೆಯೊಮೇಣುಪಾವಾಂ ।
ಕುರಿತಫಲವೋಶಿವಶಿವಾಯೆಂತೆಂದನಾವೈದ್ಯ ॥ ೬೨ ॥
ಕುರುಡನೇನಲ್ಲಿವನುನಾಳಿಗೆ । ಕುರುಡನೆಂಬುದುಸತ್ಯವೊದೊಡೆ ।
ಪರಿಕಿಪೆನುಗಡತಿಳಿದುದಿವ್ಯೌಷಧಿಯನಿತ್ತಪೆನು ॥
ಇರುಳದಪ್ಪುದುಹೊಟ್ಟೆಹಸಿವದೆ । ಬರುವೆಪ್ರಾತಃಕಾಲಕೆನ್ನುತೆ ।
ಹರನುವೈದ್ಯನುಮಾಯವಾದನುಜನಸಮೂಹದಲಿ ॥ ೬೩ ॥
ಅರರೆಕುತಿಳಿಹವೈದ್ಯನೆಲ್ಲಿಹ । ಹೊರಗೆಹೋಗಿಲ್ಲವನುಮನೆಯೊಳ ।
ಗಿರುವನೆಂದೊಡಮಿಲ್ಲವೈಗರೆದಿಲ್ಲಮೂಲೆಯಲಿ ॥
ಬೆರಗಿದೇನೆನುತವರುಸಂಶಯ । ವೆರಸಿಹುಡುಕಿದರೆಲ್ಲಕಡೆಯಲಿ ।
ತಿರುಗಿಕಾಣದೆವೈದ್ಯನಲ್ಲಿವನೆಂದರಾಜನರು ॥ ೬೪ ॥
ಒರೆವುತೊಬ್ಬರಿಗೊಬ್ಬರಿರುಳೊಳು । ಭರದೊಳೆಲ್ಲರುಮನೆಗೆಬಂದರು ।
ಕುರುಡಗೆಂದರುವೈದ್ಯನಲ್ಲಿವಶಿವನೊಶ್ರೀಗುರುವೋ ॥
ಹರುಷದಚ್ಚರಿಯಲ್ಲಿನುಡಿವು । ತ್ತೊರಗಿದರುಗಡಭೋಜನೋತ್ತರ ।
ಕುರುಡನತಿಹರುಷದಲಿನೆನೆದನುಗುರುಪದಾಂಬುಜವ ॥ ೬೫ ॥
ಕುರುಡನಾಗಿರೆಗಾಢನಿದ್ರಾ । ಭರಿತನಾತನಕಣ್ಗಳೊಳುಸಂ ।
ಚರಿಸಿನಿರ್ಮಲಮಾಡಿಥಳಥಳಿಸಿದನುಮುದಿವಾಚ್ಛಾ ॥
ಹರನಬಲಗಣ್ಣಾನೆನೋಡೆಂ । ದರಪುವಂತಿರೆಪೂರ್ವದಿಕ್ಕಿಗೆ ।
ತರಣಿಕಂಗೊಳಿಸಿದನುಭಕ್ತಂಗಾಯ್ತುದೆಚ್ಚರವು ॥ ೬೬ ॥
ಪರಿದುದಾತನದೃಷ್ಟಿಯೆಸ್ಥೆಸೆ । ಗಿರದೆಕಂಡುದುಸೃಷ್ಟಿಯಾಟವು ।
ಕುರುಡನಾಪ್ತರನಪ್ಪಿನುಡಿದನುಪೇಳಲೇನದನು ॥
ಗುರುವತಾಂವಂದಿಸುತೆಜಗದ್ಯೈ । ಸಿರಿಯುಸೊಬಗನುನೋಡುತಿರಲವ ।
ಹರುಷಮೊತ್ತರಿಸಿತ್ತುಕೌತುಕವೆತ್ತಜನಕುಲದ ॥ ೬೭ ॥

ಹುಟ್ಟುಗುರುಡನಕಣ್ಗಳೆರಡುಂ । ನೆಟ್ಟಗಾದವುನೋಡೆವೈದ್ಯನು ।
ಮುಟ್ಟಲಿಲ್ಲವುಭೆಟ್ಟಿಗೊಟ್ಟುದಕಿಷ್ಟುಫಲವಾಯ್ತು ॥
ಹುಟ್ಟಿದಂದಿನಮಿನ್ನೆವರವಾವ್ ಪೊಟ್ಟವೈದ್ಯರೊಳಾಡಿಕೆಟ್ಟೆವು ।
ಕೊಟ್ಟಹಣವದುಬರಿದೆಹೋದತ್ತೆಂದುದಾಜನವು ॥ ೬೮ ॥
ಅವನುವೈದ್ಯನೊವೈದ್ಯನಲ್ಲವ । ನವನುಭಕ್ತೋದ್ಧಾರಸದ್ಗುರು ।
ವಿವನಭಕ್ತಿಗೆಮೆಚ್ಚಿಕಣ್ಗಳನಿತ್ತನಲ್ಲದಲೇ ॥
ಇವನಿಗೇಂಬಂದಪುವೆಕಣ್ಗಳು । ಬುವಿಯವೈದ್ಯರಕೃತ್ಯವಲ್ಲಿವು ।
ಶಿವನವರಡಫಕೀರನಾಟವಿದೆಂದುದೈಜನವು ॥ ೬೯ ॥
ನೋಡಿರೈನಿಜಭಕ್ತಿಯಂತುಟು । ನೋಡಿರೈಗುರುವುಹಿಮೆಯಂತುಟು ।
ರೂಢಿಗಚ್ಚರಿಯೆನಿಸಿಭಕ್ತಗೆಗುರುವುಕರುಣಿಸಿದ ॥
ಜೋಡದುಂಟೇಭಕ್ತಿಮಾರ್ಗಕೆ । ಕಾಡಭಕ್ತರೆನೀವುತಿಳಿಯಿರಿ ।
ಮೂಢತನವನುಬಿಟ್ಟುನಂಬಿರಿಗುರುವಿನಂಘ್ರಿಯನು ॥ ೭೦ ॥
ಗಿರಿಜೆಯನುಪೂಜಿಸುತೆನಲಿಯುವ । ಪರಮಭಕ್ತರೆನೀವುಕೇಳಿರಿ ।
ಗುರುಫಕೀರನಗಾಧಮಹಿಮಾಸಾರಸಂಗತಿಯಾ ॥
ಅರಿದಲಾಶ್ರೀಶಕ್ತಿದೇವಿಯು । ಹರಿವಿರಂಚಿಹರ್ಕಳಂಬೆಯು ।
ಗುರುಮಹಾದ್ವಾರವನುಸಂರಕ್ಷಿಸುವಳೊಳಹೊರಗೆ ॥ ೭೧ ॥
ಹರನಭಕ್ತರೆನಲಿದುಕೇಳಿರಿ । ಹರಿಯಭಕ್ತರೆಬಿಡದೆಕೇಳಿರಿ ।
ಪರಮಭಕ್ತರೆನೀವುಕೇಳಿರಿಕೇಳಿರೀಕಥೆಯ ॥
ವರದಿಗಂಬರಪಾಚ್ಛನಡಿದಾ । ವರೆಯೊಳಾರಡಿಯೆನಿಸಿರಂಜಿಸು ।
ತಿರುವಸದ್ಗುರುಸಿದ್ಧರಾಮುನುತೋರುತಾಡುತಿರೆ ॥ ೭೨ ॥
ವರಶಿರಃಪುರದಲ್ಲಿನೆರೆಹೊರೆ । ಗರಬಡಾಗಿರೆನೀರುಬಳಲಿಕೆ ।
ವೆರಸಿಮಿಗೆಕಂಗೆಟ್ಟುಪೌರಜನಾಳಿಚಿಂತಿಪುದು ॥
ನೆರೆದುಮಠಕೈತಂದುಗುರುಪದ । ಕಿರದೆಸಲೆಸಾಷ್ಟಾಂಗವೆರಗುತೆ ।
ಗುರುವೆಪಾಲಿಪುದೆಂದುಮೊರೆಯಿಟ್ಟಿತ್ತುಜನಜಾಲ ॥ ೭೩ ॥
ಮೊರೆಯಿಡುವಭಕ್ತರನುಬಿಡದಾ । ದರಿಸಿದನುಗಡಸಿದ್ಧರಾಮೇ ।
ಶ್ವರನುನುಡಿದನುನಡಿಸಿಕೊಡುವನುನಮ್ಮಮುದಿಪಾಚ್ಛಾ ॥

ಸೊರಗಬೇಡಿರಿನನ್ನಮಕ್ಕಳೆ । ಹರುಷಗೊಳ್ಳಿರಿಸಾಗಿರೆಂದಾ ।
ಗುರುನಿರಂಜನಮೂರ್ತಿಯೆಂಡನುಭಕ್ತಜನಕೊಲೆದು ॥ ೭೪ ॥
ಪುರದಜನಕಭಯವನುಕೊಟ್ಟರೆ । ಹರಿಸಿಕಳುಹಿಸಿಸಂತವಿಸಿಶ್ರೀ ।
ಗುರುಫಕೀರೇಶ್ವರನುಮಠವನುಬಿಟ್ಟುಹೊರಹೊರಟಾ ॥
ನರರಕಣ್ಣುಗರೆತೋರಿತೋರದೆ । ಚರಿಸಿಕೃಷ್ಣಾಮೂಲಕೈದಿರೆ ।
ಭರದಿಮಿಗೆವೈದೋರಿವಿನಮಿತಳಾದಳಾದೇವಿ ॥ ೭೫ ॥
ಗುರುವೆತಾವೇಕಿಲ್ಲಿಶಿವಶಿವ । ಧರೆಯೊಳೆಡೆಯಾಡುವದುಕಷ್ಟವು ।
ಬರಿಯಕಾಲೊಳುನಡೆದುಬಂದಿರಿಶ್ರಮವದೆನಿತಾಯ್ತೊ ॥
ಗುರುವೆತಮ್ಮಯಪಾದಸೇವೆಯೊ ಳಿರುವಳಲ್ಲವೆನಾನುಸಾಕಿ ।
ನ್ನೊರೆಯಬೇಕ್ಕೈಬಂದಹದವೇನೆಂದಳಾದೇವಿ ॥ ೭೬ ॥
ಎಂದುಲಲಿತಪಯೋಧರಾಕರೆ । ಬಂಧುರಾನಿಮಿಷಾಳಿಸಂಯುತೆ ।
ನಿಂದುಕೃಷ್ಣಾದೇವಿಬೆಸಗೊಳೆಗುರುವನವನೆಂದಾ ॥
ಬಂದುದಕ್ಕಟಬರವುನೀರಿನ । ದೊಂದುಶ್ರೀಗುರುಗ್ರಾಮದೆಡೆಯಲಿ ।
ನಿಂದುವಾಹಿನಿಯಾಗಬೇಕೌಯೆಂಡನಸುನಗುತೆ ॥ ೭೭ ॥
ಗುರುಕಥಾಮೃತದಲ್ಲಿಸುಖಿಸು । ತ್ತಿರುವಭಕ್ತರೆಬಿಡದೆಕೇಳಿರಿ ।
ಗುರುವುನುಡಿದಾಪೂತಿಗಾಗಲೆನುಡಿದಳಾದೇವಿ ॥
ಗುರುವೆಚಿತ್ತೈಸಿನ್ನುನಾನಿಂ । ತೆರಡುಪಾತ್ರೆಯೊಳಾಗಲಾಗದು ।
ದುರಿತಕರ್ಮವುನಡೆಯುತೊಡಗಿದೆಕಲಿಯಲೀಲೆಯದು ॥ ೭೮ ॥
ಪರಮಕರ್ತನಬಲದಭಾಗಕೆ । ಸರಸವೆನಿಸುವಬಾವಿಹುಟ್ಟಲಿ ।
ನಿರುತನಾನಿಹೆನಲ್ಲಿಗುಪ್ತದೊಳೆನ್ನುತಾದೇವಿ ॥
ಗುರುವುಸರ್ವೇಶ್ವರನುತಾನೆನೆ । ಪುರವುದಕ್ಷಿಣಕಾಶಿಯೆನಿಸಲಿ ।
ಧರೆಗೆಗಂಗಾತೀರ್ಥವೆನಿಸಲಿವಾಪಿಜಲಮದುವೇ ॥ ೭೯ ॥
ಪರಮಜಾಹ್ನವಿಯೆಂದುಮಿಯ್ಯು । ತ್ತಿರುವಭಕ್ತರುಧನ್ಯರಾಗಲಿ ।
ಹರುಷಗೊಳ್ಳಲಿನರಸುರೋರಗರೆಲ್ಲಪ್ರಾಶಿಸಲಿ ॥
ಗುರುವೆತಮ್ಮಯಗ್ರಾಮದೆಡೆಯೊಳ । ಗಿರುವೆನೆಲ್ಲೆಡೆಯಲ್ಲಿಬಾವಿಯು ।
ನಿರದೆತೆಗೆದೆಡೆಯಲ್ಲಿಜಲವನುತೋರುತಡಗುವೆನು ॥ ೮೦ ॥

ಗುರುವೆತಮ್ಮಯಪಾದಸೇವೆಯೊ । ಳಿರುವೆನಂದದಿಪುರಕೆಜಲದಾ ।
ಕೊರತೆಯಾಗದುಮಠಕೆಬಿಜಯಂಗೈಯಿರಿನ್ನೆನುತಾ ॥
ನರಹರಿಯುಬಹುಕಪಟನಾಟಕ । ಗುರುಮಹಾತ್ಮನಶಂಭುಲಿಂಗನ ।
ದರುಶನದೊಳಾಂಧನ್ಯಳೆಂದಡಗಿದಳುಪೊಳೆಯೊಳಗೆ ॥ ೮೧ ॥
ಗುರುಮಹಾತ್ಮನುಸಿದ್ಧರಾಮೇ । ಶ್ವರನುಬಂದನುಮರಳಿನಿಜಮಠ ।
ಕರಿದುಭಕ್ತಜನೌಘಮದುಪೊಡಮಟ್ಟುದಾಪದಕೆ ॥
ಗುರುಮಹಾಪಾದವನುಕಂಡತಿ । ಹರುಷಗೊಂಡಾಭಕ್ತರಿಗೆಶ್ರೀ ।
ಗುರುವೃತಿಳಿಸಿದನರರೆಬಿಡದಾದ್ಯಂತಸಂಗತಿಯಾ ॥ ೮೨ ॥
ಗುರುಮುಖದಿನಾಸರ್ವಸಂಗತಿ । ಯರಿದುಸಂತೋಷಿಸಿದರಾಭ ।
ಕ್ತರುಪುರದೆ ೞಗಿಸಿದರುಬಾವಿಗಳೆಲ್ಲಕೇರಿಯಲಿ ॥
ಭರದೊಳಂದದಿನೀರುಬರುತಿರೆ । ಗುರುವಿನಾಟವಪೊಸತುಪೊಸತೆಂ ।
ದೊರೆವುದಾಯ್ತಾಪುರಮದಲ್ಲಿಯಭಕ್ತರೇಂಕೃತರೊ ॥ ೮೩ ॥
ತೆಗೆಸಿದನುಬಾವಿಯನುಶ್ರೀಗುರು । ಪರಮಕರ್ತನಬಲದಭಾಗ ।
ಕೆಸ್ಕಗುಮಿಗೆಯೊಳಾದೇವಿತಾಂಪ್ರತ್ಯಕ್ಷಳಾಗಿರಲು ॥
ಜಗದಭಕ್ತರಿಗಾಯ್ತುಬಲುಸೋ । ಜಿಗವುಜಲಮಯವಾಯ್ತುವಾಪಿಯು ।
ಸುಗುಣಭರಣರೆತಿಳಿದುಕೊಳ್ಳಿರಿಗುರುವಿನಾಟವನು ॥ ೮೪ ॥
ಗುಪ್ತವಾಹಿನಿಯಾಗಿಬರುತಿಹ । ಳಾಪ್ತಳಾಗಿಹಳವಮಗಂಗೆಯು ।
ಪ್ರಾಪ್ತಳಾಗಿಹಳಲಲಗುರುಸಾನ್ನಿಧ್ಯಸೇವೆಯಲಿ ॥
ಆಪ್ತಭಕ್ತರೆಕೇಳಿರೀಜಗ । ದಾಪ್ತಗುರುವಿನಬಿರುದುನೋಡಿರಿ ।
ಗುಪ್ತಭಕ್ತರೆಬೀಳಬೇಡರಿಕಲಿಯುಬಲಿಯೊಳಗೆ ॥ ೮೫ ॥
ದುರಿತಕಲಿಯಲಿಬರುವಳೆಂಬುದು । ಪರಮಭಾಗೀರಥಿಯುಬಾವಿಯೊ ।
ಳಿರುತೆದರ್ಶನಗೊಡುವಳೆಂಬುದುಬಹುವಿಚಿತ್ರವಲಾ ॥
ಮರುಳುತನವೆಂತೆಂದುಭಾವಿಸಿ । ಗುರುಘಕೀರನಲೀಲೆಯಲಿಭ ।
ಕ್ತರಲಿಕೆಲವರಿಗಾಯ್ತುಬಹುಸಂಶಯವುಹೃದಯದಲಿ ॥ ೮೬ ॥
ಚರಣಕೊಂದಿದಭಕ್ತರಲಿಪಲ । ವರಿಗೆಸಂಶಯವೆಸಗೆತಿಳಿದಾ ।
ವರಘಕೀರನುಸಂಶಯಂಗಳೆಯಲೆ ಬಗೆದಂದಾ ॥

ಪರಮಶಿವಯೋಗದಲಿತೋರ್ದರೆ । ನಿರತನಾಗಿಯೆದೂರದೇಶಾಂ ।
ತರದಭಕ್ತರನೆಳೆದುಭಾಗೀರಥಿಯತೆರಿಸಿದಾ ॥ ೮೭ ॥
ಕಾಶಿಯಾತ್ರೆಯಮಾಡಬೇಕೆಂ । ಬಾಸೆಪುಟ್ಟಿಸಿದನುಕಣ್ಗಾಜಗ ।
ದೀಶಕರ್ತನುಹೊರಟರಾಮೈಸೂರಕಡೆಯವರು ॥
ಸಾಸದಿಂನಡೆಯುತ್ತೆಮಾರ್ಗಾ । ಯಾಸದಲಿತದ್ಭಕ್ತಮಂಡಳಿ ।
ಯೊಶಿರಃಪುರಕೈದಿಸಂಜೆಗೆವಸ್ತಿಮಾಡಿದರು ॥ ೮೮ ॥
ಅವರೊಳಗೆಯಜಮಾನಗೋರ್ವಂ । ಗವಗಡಿಸೆರುಜೆಯಂಜಿಶಿವವಾ ।
ಚವನುಸ್ಮರಿಸುತೆಬಂದುಕಂಡರುಗುರುಮಹಾತ್ಮಕನ ॥
ಭವಹರನೆತವಪಾದಸನ್ನಿಧಿ । ಶಿವನಸನ್ನಿಧಿಯೆಂದುಕೊಂಡಾ ।
ಡುವದುಜನವಿಡುನಮಗೆಕೃಪೆಗೈಯೆಂದರಾಜನರು ॥ ೮೯ ॥
ಇದುವೆಗದ್ದುಗೆನಮ್ಮಕರ್ತನ । ದಿದುವೆಮಹಿಮಾಸ್ಥಾನವಿದುತಾ ।
ನಿದುವೆಕಾಮ್ಯಫಲಪ್ರದಾಯಕಸೂತ್ರದಾಸ್ಥಾನ ॥
ಇದುವೆಗಂಗಾವಾಸವಾಪಿಯು । ದಿದುವೆತೀರ್ಥಸ್ಥಾನಸುಸ್ಥಳ ।
ಮಿದುವೆಸದ್ಗತಿಗೊಡುವಪುಣ್ಯಸ್ಥಾನವರಿಯುವದು ॥ ೯೦ ॥
ಇವನೆವಿಶ್ವೇಶ್ವರನುಭಾವಿಸ । ಲಿವನಮಠವೇಕಾಶಿಯೆಡೆತಾ ।
ನಿವನಬಾವಿಯೆಪರಮಭಾಗೀರಥಿಯಸುಸ್ಥಾನ ॥
ಅವನಿಯೊಳುನಿಜಭಕ್ತಿನಿಷ್ಠೆಯೊ । ಳಿವನಬಾವಿಯಪೂಜೆಗೈದವ ॥
ನವನೆನಿರ್ಮಲಧನ್ಯನೆಂದನುಗುರುಫಕೀರೇಶಾ ॥ ೯೧ ॥
ಆವಿಧಾನದಮಾಳ್ಕೆಯಲಿವಿಗೆ । ನೀವ್ರಮಾಡಿದರಿಲ್ಲಿಯುಂನಿಮ ।
ಗಾವಿಶೇಷಫಲಂವಲಂದೊರೆದಪುದುಸಾಜದಲಿ ॥
ದೇವದೇವನಗುರುತುಹಿಡಿವವ । ನಾವನೀಲೋಕದಲಿಭಕ್ತರಿ ।
ಗಾವಿಭುವೆನಿಮ್ಮನ್ನುಸಲಹುವನೆಂದನಾಸ್ವಾಮಿ ॥ ೯೨ ॥
ಆಗಳಾಜನರೆಲ್ಲಪರಶಿವ । ಯೋಗಿಸನ್ನಿಧಿಗೆರಗಿಸಲೆತಲೆ ।
ವಾಗಿಮಾಪ್ರಸ್ತವನುನಡಿಸಿದರೇಕಚಿತ್ತದಲಿ ॥
ಭೋಗಿಭೂಷಣಭಕ್ತರೇನೀವ್ । ಕಾಗುಣಂಗಳನಳಿದುಕೇಳುವೆ ।
ರಾಗಿರೈಮನಮುಟ್ಟಿಪೂಜಿಸುತಿರೆವಿಧಾನದಲೀ ॥ ೯೩ ॥

ನಾಗಶಯನನಭಕ್ತರೇನೀವ್ । ಶ್ರೀಗುರುವಿನತಿಲೀಲೆಕೇಳುವ ।
ರಾಗಿರೈಕಿವಿದೆಕಿದುಮುಂದಣಶಿವಕಥಾಮೃತವಾ ॥
ರಾಗರಂಜಿತೆದಿವ್ಯಭೂಷಿತೆ । ಯಾಗಿಭಾಗೀರಥಿಯುಬಾವಿಯೊ ।
ಳಾಗುರುಗೆಭಕ್ತರಿಗೆವ್ಯೆದೋರುತ್ತಲಡಗುತಿರೆ ॥ ೯೪ ॥
ಅರರೆಜಾಹ್ನವಿತೋರುತಡಗಿರೆ । ದರುಶನಂಗೊಂಡೆಲ್ಲಭಕ್ತರು ।
ವಂಘಕೀರಂಗೆರಗಿಸಾಡ್ಭುತಚಿತ್ತರಾಗುತಲಿ ॥
ಗುರುಸಮಾರಾಧನೆಯನತಿಶಯು । ಹರುಷದಿಂಕೈಗೈಸಿಮುಠದೊಳ ।
ಗುರುವಿಧಾನದಿಪೂಜೆಗೈದರುಗುರುಪದಾಂಬುಜವಾ ॥ ೯೫ ॥
ಹರನಕಾಶಿಯುದುತ್ತರಕ್ಕಿರೆ । ಗುರುಘಕೀರನಕಾಶಿದಕ್ಷಿಣ ।
ಕಿರುವಡಲ್ಲದೆಭೇದವೇನೇನಿಲ್ಲವದರೊಳಗೆ ॥
ಹರಿಹರಾದ್ಯರನೆಳದುಕೊಂಡೀ । ನರರೊಳವತಾರವನುಮಾಡಿಹ ।
ಗುರುಶಿರಃಪುರಕಾಶಿಯೆನಿಸುವದೇನುಸೋಜಿಗವು ॥ ೯೬ ॥
ಎನುತಲಾಸದ್ಭಕ್ತರೆಲ್ಲರು । ಘನಮಹಾತ್ಮನಗುರುಘಕೀರನ ।
ನೆನೆದಮಾತ್ರದೊಳಾಯ್ತುನೆಟ್ಟಗೆನಮ್ಮಹಿರಿಯನಿಗೆ ॥
ಅನಘರಾದೆವುಜಾಹ್ನವಿಯುದರು । ಶನದೆಸಂಶಯುವೇಕೆಜನಕಿ ।
ನ್ನೆನುತೆಸಾರುತ್ತವರುಹೊರಟರುತಮ್ಮಪುರದೆಡೆಗೆ ॥ ೯೭ ॥
ಅತ್ತಪೋಗಿರೆಭಕ್ತರಾಪರಿ । ಯಿತ್ತಕೇಳಿರಿನೀವುಗುರುದೇ ।
ವೋತ್ತಮನಲಾಗುರುಗಳಲಿಶ್ರೀಗುರುಘಕೀರೇಶ ॥
ಎತ್ತನೋಡಿದಡತ್ತಭಕ್ತರ । ಮೊತ್ತಮೆರೆದುದುಪೇಳಲೇನದು ।
ಬಿತ್ತರಿಪಭಯುಭಕ್ತಿನೆಲಗೊಂಡಿತ್ತುನಾಲ್ದೆಸೆಗೆ ॥ ೯೮ ॥
ವರಸುಧಾರಕನಂತೆಸುಜನರಿ । ಗಿರದೆತೋರ್ವನುಶ್ರೀಮದಾಂಧರಿ ।
ಗರರೆತೋರ್ವನುಯುಮನಪೋಲ್ಗುರುಸಿದ್ಧರಾಮೇಶ ॥
ಖರಕರನಪೋಲ್ತೋರ್ವನಾಭ । ಕ್ತರಹೃದಯುಕಮಲಾಳಿಗಾನರ ।
ಗುರಿಗಳಿಗೆನರಸಿಂಹನಂತೆಸೆದಾಡುತಿಹನಮುಮ ॥ ೯೯ ॥
ಸೇವಿಸುವನಿಜಶಿಷ್ಯಭಕ್ತರಿ । ಗಾವಗುಂಶಿವತತ್ವದಂಗವ ।
ನಾವಿಚಿತ್ರದಲೀಲೆಯನುತಿಳಿಸುವನುಗುಪ್ತದಲಿ ॥

ದೇವಿಯಗಣಿತಮಹಿಮೆಯನುಸಲೆ । ಸಾವಧಾನದಿಪೇಳುವೆನುಗುರು ।
ದೇವರಾಮನುಭಕರೇನುನ್ನತರೊಜಗದೊಳಗೆ ॥ ೧೦೦ ॥
ಒಂದೆಸಮಯಕ್ಕಾತ್ಮಲೀಲೆಯ । ನೊಂದಿಬಹುರೂಪದಲಿಭಕ್ತ ।
ವೃಂದವಲಿವ್ಮೈದೋರಿದರುಶನಗೊಡುವನಾರಾಮೂ ॥
ಬಂದುನೆರೆದಿಹವಿವಿಧಧರ್ಮದ । ಮಂದಿಗುಂನಿಜಕುರುಹುತೋರಿಸಿ ।
ಮಂದಹಾಸದೆನುಡಿಸಿಭಕ್ತ್ಯಚಾರವರುಪುವನು ॥ ೧೦೧ ॥
ಅರಿತರರವ್ರುಳ್ಳವರುಕೇಳಿರಿ । ಗುರುವುದಾಸೋಗದಲಿತಾಂಗಡ ।
ನಿರತನಾಗಿರೆಕರ್ತನಾತಗೆಹೊಳೆವನೊಳಹೊರಗೆ ॥
ಸುರರುಯಕ್ಷರುಗರುಡರಾಕಿಂ । ನರರುಮೊದಲಾದವರುರಾಮನ ।
ಚರಣಸನ್ನಿಧಿಗೈದುಸೇವಿಸುತಿಹರುಗುಪ್ತದಲಿ ॥ ೧೦೨ ॥
ಮರವಿಮನುಜರೆಕೇಳಿ ತಿಳಿಯಿರಿ । ಗುರುಫಕೀರನುಭಕ್ತಮಂಡಳಿ ।
ವೆರಿಸಿಸಹಜಾನಂದಲಹರಿಯೊಳಿಂದನೊಂದುದಿನ ॥
ಹರನಪಟ್ಟಕೆಮುಂದಿನಾಟಕೆ । ಬರುವನೆಂದಿಗೊಪ್ರಭುವಿನಂಶಿಕ ।
ನಿರುವನೋಅನೆಲ್ಲಿತಿಳಿಯಗನೆ ತ್ಮೆನಸುನಗುತೆ ॥ ೧೦೩ ॥
ಗುರುಫಕೀರನುಭಕ್ತರೊಂದಿಗೆ । ಶರಣಸಲ್ಲಾಪಗಳನೊರೆವುತೆ ।
ಹರುಷಬಡಿಸುತ್ತಿರಲಿಕಂದಿಗೆದಿವ್ಯಪದರಿನಲಿ ॥
ಕುರುಹಿನಾವುರಿದೇವನಾತ್ಮದಾ । ಳರುಹೆಕರ್ತನುಬಂದುಸನ್ನಿಧಿ ।
ಗೆರಗಿಹಣ್ಣನುತೋರಿಕೃಪೆಗೈನಿನ್ನತನುವೆಂದಾ ॥ ೧೦೪ ॥
ಇವನೆಪರಶಿವನಂಶಿಕನುತಾ । ಸಿವನೆಮತ್ಪ್ರಿಯಕುವರನೀತನೆ ।
ಭವಹರನವುರಿದೇವನೀತನೆಗುರುವುಮುಂದಿನ್ನು ॥
ಧರೆಯೊಳೆಮ್ಮಯಮಠದಸಕಲೈ । ಸಿರಿಯುಪೆರ್ಚುಗುವಿೂತನಿಂದಲಿ ।
ಗುರುಪ್ರಸಾದವುಬಿಡದೆನಡೆವುದುಸಾಂಬದಾಸೋಗ ॥ ೧೦೫ ॥
ಎಂದೆನುತಶ್ರೀಸಿದ್ಧರಾಮನು । ಬಂದುಸದರಿಗೆಮರಿಗೆಬಾರೈ ।
ಕಂದಬಾರೆಂದಪ್ಪಿಹಣ್ಣನಮೇಲೆಕೈಯೆಳೆಯೇ ॥
ವಂದಿಸ್ಯೆವೆರಗಾಗೆಮರೆಯಾ ಯ್ತೆಂದುಹಣ್ಣನುಕ್ಕಶ್ರೀಗುರು ।
ಬಂದುಕೂಡಿದೆಭಾಪುಬಾರೆಂದೊಳಗಕರೆದೊಯ್ದಾ ॥ ೧೦೬ ॥

ಕೇಳುಕೇಳ್ಳೈಮಗನೆಸಿಸಗಾಂ । ಹೇಳುವೆನುತಿಳಿಯೆಂದುಶ್ರೀಗುರು ।
ಹೇಳಿದನುಭಕ್ತರಿಗೆಬಿಡದಲೆಕರ್ತನಾಟವನು ॥
ಕೇಳಿರೈನೀವೆಲ್ಲಭಕ್ತರೆ । ವ ಉಲಕರ್ತನಕಥೆಯಸಾರವ ।
ಲಾಲಿಸಿರಿನಿಜವೆಂದುನಂಬಿರಿಧನ್ಯರಾಗುವಿರಿ ॥ ೧೦೭ ॥
ವರಶಿರಃಪುರದಲ್ಲಿವಾಸಿಪ । ರರಿತವರೆನೀವಿರುವಿರೈಸಲೆ ।
ಗುರುವಿನೆಡೆವಿಡಿದವರುಧನ್ಯರುಧನ್ಯರೀಜಗಕೆ ॥
ಗುರುಚರಣವೇಗತಿಯೆಂದುಸೇವಿಸು । ತಿರುವಭಕ್ತರೆಲಾಲಿಸಿರನೀವ್ ।
ಗುರುಘಕೀರೇಶ್ವರಕಥಾಮೃತಸಾರದಂದವನು ॥ ೧೦೮ ॥
ಮೆರೆವದಿಲ್ಲಿಬಿಜಾಪುರಂಗಳ । ಧೊರೆಗಳಲಿದುರ್ಗದಲಿಶ್ರೀಗುರು ।
ವರನಿರಂಜನಮಠದೊಳಾಗೋಪಾಲಲೀಲೆಯಲಿ ॥
ಶಿರಿಪುರದಕದಗೇರಿಯಲಿತ । ತ್ಪುರದನೃಪನಲಿಭೂಜನಭಯಂ ।
ಕರದಕಡುಹುತ್ತಿನಲಿಸುರಭುಜಗೇಂದ್ರಕೇಳಿಯಲಿ ॥ ೧೦೯ ॥
ಸ್ಮರಿಪಭಕ್ತರಬಳಗದಲಿಬಹು । ತರದಪುಣ್ಯಕ್ಷೇತ್ರದಲಿಸಂ ।
ಚರಿಸಿಬೆಳಗಿದನಮ್ಮಕರ್ತನಲೀಲೆ ಪೊಸತೆಂದ ॥
ಉರುತರದಡಂಬಳದಪ್ರಸ್ತದೊ । ಳುರುವಣಿಸುತಿಹಸಭೆಯೊಳಾಭೂ ।
ಸುರತನೂಭವನಲ್ಲಿವಿಂಧ್ಯಾಚಲದರಣ್ಯದಲಿ ॥೧೧೦ ॥
ಬರಿಸಿಲಿಂಗಪವಾಡುಮೂಡಿದ । ನರರವಾಣಿಗೆಸಿಲಿಸಿಗೆಲಿಸಿದ ।
ಸುರವಿತಾನಕೆಹರಸಿದನುಗಡನಮ್ಮಮುದಿವಾಚ್ಛಾ ॥
ಧರೆಯೊಳಾಕೈಲಾಸದಲಿನಿಂ । ತಿರುವನೀಭೂಲೋಕವಾಟ ।
ಕ್ಕಿರದೆಪಕಪಕನಗುವನ್ಮೆಗಡಮೌನಮುದ್ರೆಯಲಿ ॥ ೧೧೧ ॥
ಸರ್ವಕಾಲಜ್ಞಾನದಾಟ । ಕ್ಕೊರ್ವನೇಪ್ರಭುಚನ್ನಬಸವನ ।
ಖರ್ವಲೀಲಾಮಹಿಮಸಾತನೆಮೌನಘನಲಿಂಗಾ ॥
ಸರ್ವಜೀವನಸೂತ್ರಧಾರಕ । ನೋರ್ವನೇಗುರುವಲ್ಲಮಪ್ರಭು ।
ವೀರ್ವರೆನ್ನುವದೇನುಪುಸಿಯದುಜ್ಯೋತಿಯೊಂದೆಂದಾ ॥ ೧೧೨ ॥
ಹರಿಯಕೀರ್ತಿಸಿಹರನಪಳಿವಗೆ । ಹರನಬಣ್ಣಿಸಿಹರಿಯಪಳಿವಗೆ ।
ಹರಿಹರಾದ್ಯರಮೂಲದೇವಿಯನುತಿಸಿಲೋಕದಲಿ ॥

ಶರಣರನುಭಕ್ತರನುನಿಂದಿಸು । ತಿರುವನರರಿಗೆಸುಗತಿದೊರೆಯದು ।
ನರಕವಾಗುವದವರಿಗಾಗದುಮುಂದೆನರಜನುಮಾ ॥ ೧೧೩ ॥
ಧರಣಿಯಲಿಪಿಂದಾದಶರಣರು । ಬರುವರೈಮುಂದಿನ್ನುಕಾಲಾಂ ।
ತರದೆಣಿಕೆಗೊಂಡವರುಬೈಲಿಗೆಬಂದುಬೆಳಗುವರು ॥
ಅರರೆಕಾಲಜ್ಞಾನದಾಟವ । ನಿರದೆತೋರಿಸಿಸತ್ಯಧರ್ಮವ ।
ನರುಪಿಭೂದೇವತೆಗೆಸಂತಸಬಡಿಪರವರೆಂದಾ ॥ ೧೧೪ ॥
ಹೊರಗೆಬಲುಕಿರಿದಾಗಿನಡೆವುದು । ಶರಣುಕೊಡುವದುಲೋಕದವರಿಗೆ ।
ಶರಣಸಂತತಿಯಲ್ಲಿಸೇವಿಸಿನಿತ್ಯನಲಿಯುವದು ॥
ವರಪುರಾತನರೆಡೆಗೆಪೋಪುದು । ಗುರುಪ್ರಸಾದವನೀಯುವದುಗಡ ।
ದುರಭಿಮಾನಕೆಬೀಳದಿರುವದುಭಕ್ತರೆಂಬವರು ॥ ೧೧೫ ॥
ಗುರುಗೆಹೊಂದಿದಭಕ್ತರಿಳೆಯೊಳು । ನರರಬಲಿಯುಳಿಬೀಳರೆಂದಿಗು ।
ಮರಿತುನಡಕೊಳ್ಳುವರುಬಸವಾಂಶಿಕರತಾಣದಲಿ ॥
ದುರುಳಕಾಮಕ್ರೋಧದಾಟದ । ಮರವಿಕವಚದಬೇಟಕೊಲೆಯದೆ ।
ಪರಮಸದ್ಗತಿಮುಕ್ತಿಚಿಂತಿಯೊಳಿರುವರವರೆಂದಾ ॥ ೧೧೬ ॥
ಗುರುಫಕೀರನುಬಸವಲಿಂಗನು । ವರವಿಪಾಕ್ಷನುಚನ್ನಬಸವನು ।
ಗುರುಗಳೀರ್ವರುನಮಗೆಕಾಲಜ್ಞಾನದಾಟದಲಿ ॥
ಪರಮಮಹಿಮರುಸರ್ವಸೈನ್ಯಕೆ । ವರವಿನೌನನೆಮುಖ್ಯನಧಿಪತಿ ।
ಧರೆಯೊಳಡಗಿಹರೆಲ್ಲರೆಂದನುಸಿದ್ಧರಾಮೇಶ ॥ ೧೧೭ ॥
ಪರಕಿಪರುನಿನ್ನಾಟದಲಿಪೊಸ । ತರಃಸೊಬಗಿನಬಿರುದಿನಲಿತ ।
ತ್ವರದದಾಸೋಗದಲಿಮಹದುತ್ಸವದಸಮಯದಲಿ ॥
ಸುರುಚಿರದಸಿಂಗರದವೇಶ್ಯಾ । ತರುಣಿಯರನವಹಾವಭಾವದ ।
ಪರಿಣತೆಯೊಳಹೊರಗೆನಿನ್ನನೆನೋಳ್ಪರವರೆಂದಾ ॥ ೧೧೮ ॥
ಪರಮಗುರುಮುದಿಪಾಕ್ಷನೀಜಗ । ಕರುಪಿತೋರುವಮಹಿಮೆಗಳನಾ ।
ಗುರುಫಕೀರನುಸಿದ್ಧರಾಮನಪೇಳ್ದನಾತನಿಗೆ ॥
ಅರವಿನಲಿಗುಪ್ತದಲಿತಿಳಿಸು । ತ್ರಿರದೆಬೋಧಿಸಿಹೊರಗೆಬಂದನು ।
ಹರನಸದರಿಗೆಕಾಳಿತುಶೋಭಿಸುತಂದನೀತೆರದಿ ॥ ೧೧೯ ॥

ಪರಶಿವನಪಟ್ಟದಲಿನೀನಾ ।ಗುರುನಿರಂಜನಮೂರ್ತಿಯೆನಿಸೈ ।
ನರರಿಗೇಂತಿಳಿದಪುದುನೀಶಿವಜೋಗಿನಾಮದವ ॥
ಗುರುಫಕೀರನುನಿಜಜಗದ್ಗುರು । ಪರಮಗುರುವೇನಿಜಫಕೀರನು ।
ಧರೆಯೊಳಾಗುಪದೇಶಗೊಳ್ಳೆಂದೇನೊಪೇಳಿದನು ॥ ೧೨೦ ॥
ಗುರುಕಥಾಮೃತಸೇವೆಯಲಿಗುರು । ಚರಣಸುಮಮಕರಂದಸೇವಾ ।
ತುರದಿಸೊಗಯಿಪರೆಲ್ಲಕೇಳಿರಿಗುರುವಿನಾಟವನು ॥
ಮರೆಯದಲೆದಾಸೋಗದಲಿಕ । ಣ್ಣಿರಿಸುಸಮಲಕ್ಷ್ಯದಲಿನಿನ್ನೆಡೆ ।
ಗಿರದೆಬರುವರುಹರಿಹರಾದ್ಯರುಸಪರಿವಾರದಲಿ ॥ ೧೨೧ ॥
ಪರಮಕರ್ತನುನಮ್ಮಶ್ರೀಗುರು । ಹಿರಿಯನೀತನುವರವಿರಾಜ್ಞನು ।
ಕಿರಿಯನಾತನುನಮ್ಮಶ್ರೀಗುರುವಿರುವರಿವರೊಂದೆ ॥
ಧರೆಯೊಳಾಪರಲೋಕದಲಿನಾ । ವೆರಡುಭಾವಿಸಲಾಗದೆಂದಿಗು ।
ಮರಿತುಕೋಶಿವಜೋಗಿನೀನೀತೆರದಿತಿಳಿಯೆಂದಾ ॥ ೧೨೨ ॥
ಅಂದಿಗಾಗುರುಸಿದ್ಧರಾಮನು । ಬಂದಭಕ್ತರಕರೆದುಕೊಂಡಾ ।
ಸಂದದಲಿತಿಳಸಿದನುವರವಿಯಮೌನಲೀಲೆಯನು ॥
ಅಂದುಗುರುಮುಖದಿಂದೆತಿಳಿದಾ । ನಂದಗೊಂಡಾಭಕ್ತರೆಲ್ಲರು ।
ಮುಂದಿನೆಚ್ಚರಹಿಡಿವರಾದರುಗುರುವಿಗೇಂಕೃಪೆಯೋ ॥ ೧೨೩ ॥
ಪರಮಗುರುಸೂತ್ರದಲಿಜೋಗೀ । ಶ್ವರನುಗುರುಪದದಾಜ್ಞೆಯಾಂತುರೆ ।
ಶಿರದೊಳಾಜ್ಯೋತಿಸ್ವರೂಪನೆತಾನೆತಾನಾಗಿ ॥
ಪರಮಕರ್ತಗೆಗುರುಮಹಾತ್ಮಂ । ಗೆರಗಿಪ್ರಾರ್ಥನೆಗೈದನೇನೋ ।
ಗುರುಮಹಾಗುರುವೇನೊಪೇಳ್ದನುತಿಳವರವರಾರು ॥ ೧೨೪ ॥
ಹರನಪಟ್ಟಕ್ಕೇರುಮಹಿಮಾ । ಪುರುಷನಾಗೀಜಗದಭಕ್ತಿಗೆ ।
ಕರುಣಿಯೆನಿಸೀಕಲಿಗೆನೀಕಲಿಯೊಗುಶಿವಜೋಗಿ ॥
ಮರೆಯಮೂತಿನ್ನೇಕೆನಿನ್ನೊಳ । ಗಿರುವೆನಭಯವುಸತ್ಯವೆಂದಾ ।
ಗುರುಫಕೀರನುಕೊಟ್ಟನಧಿಕಾರವನುಸದರಿನಲಿ ॥ ೧೨೫ ॥
ನೆರೆದಗೌಡರಶಾನಭೋಗರ । ಮೆರೆವಸೆಟ್ಟರಭಾಗ್ಯವಂತರ ।
ಸರಸಭಕ್ತರವರಮಹೇಶ್ವರರಧರಣಿಪರಾ ॥

ಶಿರಿಯುಪೆಂಪಿನಲಂಪುಬಡಿದಾ । ವರಶಿರಃಪ್ರುಂಮೆಸೆದ-ದೈಸಲೆ ।
ಗುರುಮಹೋತ್ಸವಪಟ್ಟಧೈಸಿಂಯಾಯ್ತುಸಾಜಂಲಿ ॥ ೧೨೬ ॥
ಗುರುಸುಸೇವೆಯೊಳಾಡುತಿರುವರೆ । ಗುರು-ಫಕೀರನಲೀಲೆಕೇಳಿರಿ ।
ಮೆರಿಗೆವಟ್ಟವನಿತ್ತಬಳಿಕಾಸಿದ್ಧರಾಮೇಶ ॥
ಇರುತಲಾದಿನಪ್ರೊದಗೆಸರ್ವರಿ । ಗರುಹಿಶಿವಸಾಯುಜ್ಯಹೊಂದಿದ ।
ನೊರೆಯಲಸದಳಶಿವಮಹೋತ್ಸವಮಾಡುದಿಹಪ ದಿ ॥ ೧೨೭ ॥
ಜಯಜಯತುಬಹುಲೋಕವಂದ್ಯಗೆ । ಜಯಜಯತುಶ್ರೀಮಂಗಲಾತ್ಮಗೆ ।
ಜಯಜಯತ-ಭೂಭಾರವಿಳಿಸುವಗುರುಮಹೋನ್ನತಗೆ ॥
ಜಯಜಯತುತ್ರೈಲೋಕಪಾಲಗೆ । ಜಯಜಯತುಶ್ರೀಗ-ರುಫಕೀರಗೆ ।
ಜಯಜಯತುಜಯತೆಂದ-ನಭದೆಡೆಗೊಂಡುದಮರಾಳಿ ॥ ೧೨೮ ॥
ಬಂದಭಕ್ತರೆಕೇಳಿರೈಸೀ । ವಿಂದುಕೇಳಿರಿಗುರುವಿನಾಜ್ಞೆಯ ।
ನೊಂದಿಶ್ರೀಶಿವಜೋಗಸ್ವಾಮಿಯುಪಟ್ಟಕೊಪ್ಪಲಿ ॥
ಬಂಧುರಾತ್ಮಾರಾಮನೆನಿಸು । ತ್ತಂದದಲಿದಾಸೋಗವನ-ನಡೆ ।
ನಿಂದುನಡಿಸುತ್ತೆಸೆವನಾಡನುಭಕ್ತಜನರೊಳಗೆ ॥ ೧೨೯ ॥
ಗುರುಮಹತ್ವದಸಾ ವಿಂತಿದು । ಗುರುಮಹತ್ವಮನಂತಮಿಪ್ಪುದು ।
ಗುರುಮಹತ್ವವನರಿದುಪೇಳುವರಾರುಲೋಕದಲಿ ॥
ಗುರುಫಕೀರೇಶ್ವರನ-ಗಂಗಾ । ಧರನಮುಖದಿಂಪೇಳಿಸಿದನೀ ॥
ಠೆರದಿಮುಗಿದುದುಸಂಧಿಹದಿನೆಂಟನೆಯದೆಂದೆಸಿಸಿ ॥ ೧೩೦ ॥

॥ಇತಿಶ್ರೀ ಶಿರಃಪುರನ್ಯಸಂಹಾ ನ ಶ್ರೀ ಭಗವಾನ್ ವಿಭುವಾತ್ಮೀಯ ।
ಗಂಗನಿಂ ಪೇಳಿಸಿದ ಪೌರಾಣಾದೊಳ್ ಹದಿನೆಂಟನೆಯು ಸಂಧಿಸಮಾಪ್ತಮಿಂತು ।

೧೨೦೬ ಪದ್ಯಂಗಳಿಗೆ ಮಂಗಲಮಹಾ ಶ್ರೀ ಶ್ರೀ ಶ್ರೀ ಶ್ರೀ

## ೧೯ನೇ ಸಂಧಿಯು

### ೨ನೇಪಟ್ಟ ಮೊದಲನೆಯ ಶಿವಜೋಗಿಸ್ವಾಮಿಗಳು.

**ಸೂಚನೆ—**

**ಗುರು** ಪರಾತ್ಪರವಸ್ತುಕರ್ತನು । ಮರಿಯೆ ನಿಜಶಿವಜೋಗಿನಾಮದೊ ।
**ಳಿ**ರದೆಪರಶಿವಲೀಲೆತೋರುವನಾವನವನಿಯಲಿ ॥ಪಲ್ಲ॥
**ಶ್ರೀ**ಗುರುವುಗುರುಹಸ್ತಕಮಲಜ । ನಾಗಿಬ್ರಹ್ಮಾನಂದದಮುಯಂತಾ ।
**ನಾ**ಗಿಪರಶಿವಲೀಲೆಯಾಡುತ್ತೆಸೆದನಂದದಲಿ ॥
**ಮೂ**ಗುರುವುಗುರುದೇವನಾಶಿಗ । ಯೋಗಿಸ್ವಾಮಿಯುನಿಜಫಕೀರನು ।
**ನಾ**ಗಳುಂಪಾಲಿಸಲಿತನ್ನಯಪಾದಭಕ್ತರನು ॥ ೧ ॥
**ಹೇ**ಳುವೆನುನಿಮಗಿನ್ನುಸದ್ಗುರು । ಲೀಲೆಯನುಕಿವಿಗೆರೆದುಕೇಳಿರಿ ।
**ಕಾ**ಲಕಾಲನಮಹಿಮೆಯರಿವುದೆಮರ್ತ್ಯದೀಜನವು ॥
**ಲೀ**ಲೆಯಾಡುತೆಸ್ವಾಮಿ ನಿಜಭ । ಕ್ತಾಳಿಪಾಲಿತಾಯ್ತುಂದಿಯೆನಿಸುತೆ ।
**ಕಾ**ಲಕಾಲಕ್ಕೆಸೆವನಾದನುಜಗಕೆಬೆರಗಾಗೆ ॥ ೨ ॥
**ಗು**ರುಫಕೀರೇಶ್ವರನುತನ್ನುರು । ತರದದಾಸೋಗದಲಿಭಕ್ತೋ ।
**ತ್ಕ**ರದೊಳಸ್ಯಾನಂದದಲಿಶಿವಲೀಲೆಯಾಡುತಿರೆ ॥
**ಮ**ರುಳಮನುಜರಿಕೇಳಿರಾಗುರು । ವರನಕರ್ತನಲೀಲೆಕೇಳಿರಿ ।
**ಪ**ರಮನಿಷ್ಠೆಗೆವೆಚ್ಚಿಸಲಿಸಿದನೋರ್ವಬಡವನನು ॥ ೩ ॥
**ನೆ**ರೆಯುಹಳ್ಳಿಯೊಳಿರುವ ಬಡವನು । ಕುರುಬನೋರ್ವನುತನಗೆನುಸ್ವಾ ।
**ಮಿ**ಸೆಮಿಗೆಕೂಳಿಲ್ಲದಲೆಚಿಂತಿಸನುದಿನಗಳು ॥
**ಇ**ರುವನೀಪರಿಯಾತಗಂದಿಗೆ । ಧರೆಗೆದೊಡ್ಡವನನ್ನದಾತನು ।
**ವ**ರಫಕೀರನುಕರುಣಿಯೆಂಬುವದಾಯ್ತುಶ್ರವಣಪದು ॥ ೪ ॥
**ಧ**ರೆಯೊಳಹುದಹುದಿದುವೆಸತ್ಯತ । ಗುರುಫಕೀರೇಶ್ವರನುಭಕ್ತರ ।
**ಕ**ರುಣಿಸೈನಿಜವೆಂದುನಂಬುತನಾದನಾತೃಪ್ತಾ ॥
**ಗು**ರುಫಕೀರೇಶ್ವರನೆಬಸವನು । ಗುರುಫಕೀರನೆಸಾಂಬಸದ್ಗುರು ।
**ಧ**ರಣಿಯಲಿಹೌದೆಂದುನುತಿಸುವನಾದನಾಬಡವ ॥ ೫ ॥

ಗುರುವೆನೀಗತಿಯೆಂದುಜಾನಿಸು । ತಿರುವನಾಶಿವತತ್ವಪದಗಳ ।
ನಿರದೆಹಾಡುತೆಹರುಷಹೊಂದುವನಾದನಾಮುದುಕಾ ॥
ವರಶಿರಃಪುರಮಠಕೆಬರುವನು । ಗುರುವಸ್ವಾಮಿಯಬೇಡಿಕೊಂಬನು ।
ನೆರೆಪ್ರಸಾದವನುಂಡುಕೊಂಡಾಡುತ್ತೆಹೋಗುವನು ॥ ೬ ॥
ನಾಡೆಬಳಲಿಕೆಬಟ್ಟುತೊಳಲುತೆ । ಬೇಡಿಕೊಳ್ಳುತೆಗುರುವತಾಂಕೊಂ ।
ಡಾಡುತಂನಿಜಭಕುತಿಸ್ಥಳದವನಾದನಾಬಡವ ॥
ಜೋಡುನೋಡದೆಕೋಲ್ವಿಡಿದುಬ । ಳ್ಳಾಡುತಂತಾನೊಯ್ಯನೊಯ್ಯನೆ ।
ಹಾಡುತಂಪಥವಿಡಿದುಬರುವವನಾದನಾಮುದುಕಾ ॥ ೭ ॥
ಎನ್ನಕಂಗೆಡಿಸುವದುಬಡತನ । ವಿನ್ನುನೀಂಪರಿಹರಿಸುಮಿಗೆಸಿರಿ ।
ಯನ್ನವನುಕೊಡುದೀನಬಂಧುವೆಭಕ್ತರಕ್ಷಕನೆ ॥
ಎನ್ನನಗಲದೆಕರುಣಿಸೈನೀ । ನಿನ್ನುರಕ್ಷಿಸದಿರ್ದೊಡಾರೈ ।
ಯೆನ್ನನೋಳ್ಪರುಗುರುವೆಸಲಹೆನುತಿರ್ಪನಾಬಡವ ॥ ೮ ॥
ಬೆನ್ನುಬೊಗ್ಗಿದೆನಡುಗುತದೆತಲೆ । ಯನ್ನವಿಲ್ಲದೆಹೊಟ್ಟೆಕುಸಿದದೆ ।
ಮನ್ನಿಸುವರುಣ್ಣಿಸುವರಾರಿಲ್ಲಕಟಲೋಕದಲಿ ॥
ಬನ್ನಬಡುವೆನುಬಂಧುಬಳಗವ । ದೆನ್ನೊಡೆಯನೀನಲ್ಲದುಂಟೇ ।
ಇನ್ನುನೀನೇನನಗೆಗತಿಯೆಂದೆಂಬನಾಮುದುಕಾ ॥ ೯ ॥
ಕಣ್ಣುಗಳುಕಾಣಿಸವುಕಾಯದ । ಬಣ್ಣಕೆಟ್ಟದೆಹಲ್ಲುಬಿದ್ದವೆ ।
ಸಣ್ಣವಾಗಿವೆಶಿಥಿಲವಾಗಿವೆಕೀಲುನಾಡಿಗಳು ॥
ಹಣ್ಣುದುರುವಪ್ಪಂದಕೊನೆಯಿಂ । ಮಣ್ಣುಪಾಲೆನೆವೃದ್ಧತನುನಿ ।
ರ್ಜಿಣ್ಣವಾಗಿದೆದುಡಿಯಲೇನಹುದೆಂಬನಾಬಡವ ॥ ೧೦ ॥
ನಡೆವಡೆನ್ನೊಳಗಿಲ್ಲತ್ರಾಣವು । ದುಡಿದುತಿನ್ನುವನೆಂತೊಶಿವಶಿವ ।
ಸುಡಲಿದೈವವುಮುಪ್ಪಿನಲಿವಿಧಿವ್ಯಥಿಸುವಂತಾಯ್ತೆ ॥
ನಡುವೆಕೈಬಿಟ್ಟಾಪ್ತರೆಲ್ಲರು । ನಡೆದರೆನಗಿಲ್ಲಿಟ್ಟುಹರಹರ ।
ಕಡೆಗದೇನಾದಪೆನೊಹಾಹಾಯೆಂಬನಾಮುದುಕಾ ॥ ೧೧ ॥
ಎಡೆಗೆಡೆಗೆಸಾಷ್ಟಾಂಗವಂದನೆ । ಯಡಿಗಡಿಗೆಗುರುಪಾದಭಜನೆಯ ।
ನಡಿಸುತಂನಡೆನಡುಗುತಂಬಳಕಾಡುತಂಬಳಲಿ ॥

ಎಡೆಗೆಡೆಗೆಕಾಡ್ರುತ್ತೆನಿಲ್ಲು । ತ್ತೊಡನೆನಡೆವುತೆಮಠಕೆಬರುವನು ।
ಬಿಡದೆಕಾಪಾಡೆಂದುಮೊರೆಯಿಡುತಿಹನುಗದ್ದುಗೆಗೆ ॥ ೧೨ ॥
ಮಡದಿಮಕ್ಕಳುಮಡಿದುಪೋಗಿಹ, ರೊಡವೆವಸ್ತುಗಳಿಲ್ಲಮನೆಯೊಳ ।
ಗೊಡಲಿಗನ್ನವದೆಂತೊಕಾಸಿಲ್ಲಕಟಕೈಯೊಳಗೆ ॥
ನೃಡಮಹಾತ್ಮನೆಗುರುಫಕೀರನೆ । ಬಿಡದೆರಕ್ಷಿಸುರಕ್ಷಿಸೆಂದೇ ।
ಬಡವನಳುತಿರೆಕರ್ತಗೆಚ್ಚರವಾಯ್ತುಗದ್ದುಗೆಗೆ ॥ ೧೩ ॥
ಊರಪೆಸರೇಂಮುದಕಪೇಳ್ನೀ । ನಾರದೆಲ್ಲಿಗೆಪೋಪೆನೀನತಿ ।
ಘೋರಕಷ್ಟದೊಳಿರುವವೋಲ್‌ತೋರುತಿದೆಕಣ್ಮನಕೆ ॥
ಹಾರುತಿದೆಬಲಗಣ್ಣುಗಡಕ । ಣ್ಣಾರೆನಿನ್ನನುಕಂಡವೊತ್ರಕೆ ।
ಸಾರದಿರುನಿಲ್ಲೆಂದುತರುಬಿದನಾದಿಗಂಬರನು ॥ ೧೪ ॥
ಗ್ರಾಮವಿದುಶಿರಹಟ್ಟಿಯೆಂಬುದು । ಸ್ವಾಮಿನೆಲಸಿಹನಿಲ್ಲಿಮಠದೊಳ ।
ಗಾಮಹಾಪ್ರಭುದೇವನವತರಿಸಿಹನುಕಲಿಯುಗದಿ ॥
ಭೂಮಿಯಲಿಗುರುವರನಗದ್ದುಗೆ । ಪ್ರೈಮೆಮಿಗೆನಡೆದಪುದುಭಕ್ತರ ।
ಕಾಮಿತಾರ್ಥವುಸಿದ್ಧಿಸುವದೆಂತೆಂದನಾಮುದುಕಾ ॥ ೧೫ ॥
ಮರುಳತನವಿನಿತೇಕೆಬಿಡುನರ । ಗುರುಗಳೊಳಗೇನುಂಟುಲೌಕಿಕ ।
ನರರುತಮ್ಮಯಮತದಗುರುವಿಗೆನಡೆದುಕೊಂಬುವರು ॥
ಸಿರಿಯಸಡಗರದಲ್ಲಿಬೆರತಿಹ । ಗುರುವುನಿನಗಿನ್ನೇನುಕೊಡುವನು ।
ಮರುಳೆಭಕ್ತಿಯುಭ್ರಾಂತಿನಿನಗೆಲ್ಲಿಂದಬಂತೆಂದ ॥ ೧೬ ॥
ಗುರುವುಕೊಡುವವನಾದರೇತಕೆ । ತಿರಗುತಿಹೆವುಫಕೀರರಾವ್ಗಡ ।
ಪರಿಕಿಸಲ್‌ನಾವ್‌ಹೊಟ್ಟೆಬಟ್ಟೆಗೆಬಳಲುವದಕೇನು ॥
ತಿರುಗುತೂರೂರ್ಗಳನುಕಷ್ಟದಿ । ತಿರಿದುತಿನ್ನುವೆವಿಂತುತಿಳಕೋ ।
ಮರುಳೆತಿರಕೊಂಡುಣ್ಣುನಡೆಹೋಗೆಂದನಾಪಾಚ್ಛಾ ॥ ೧೭ ॥
ತಿರಕನೀನುಫಕೀರಕೇಳಲೆ । ಧರಣಿಯಲಿಪ್ರತ್ಯಕ್ಷದೇವರು ।
ಜರೆದೆಯಾಗುರುನಿಂದಕನೆಪಾತಕಿಯೆಕುಲಛಲದ ॥
ಗುರುವೆನಮ್ಮಯಗುರುವುಫಡಫಡ । ಬರಿದೆನಿಂದಿಸನರಕಿಯಾಗುವೆ ।
ಮರವೆಯಲಿನೀಪಳಿದರೇನಹುದೆಂದನಾಬಡವ ॥ ೧೮ ॥

ಸ್ವಾಮಿಯಸುನಂಬಿಹೆನುಮನದಲಿ । ನೇಮದಿಂಗುರುವ.ಠಕೆಪೋಗುವೆ ।
ನಾಮಹಾತ್ಮನ.ಭಕ್ತಜನರಿಗೆಬಿಡ಼ಲೊಲಿವವನು ॥
ಸೋಮಶೇಖರಭಕ್ತಿವಿರಹಿತ । ಭೂಮಿಭಾರಕರೇನುಗುರುವಿನ ।
ಮೈಮೆಯರಿವರೆನಿನ್ನಮತವೇನೆಂದನಾಮುದುಕಾ ॥ ೧೯ ॥
ಗುರುವುನಮಗೇನಿಲ್ಲವೇನಿಜ ಗುರುವುದೊರಕುವದುಂಟೆಜಗದಲಿ ।
ಗುರುವುನರರೊಳಗಲ್ಲಲೌಕಿಕಗುರುವುಶಿವನಲ್ಲ ॥
ಗುರುವುಗುರುವೆಂಬೋದುಚಿಂತೆಗೆ । ಸೇರಗದಿರುಬಡಮುದುಕಪ ನೆನಸೆ।
ತಿರುಗಿತಿರಿದುಂಬುವದುಲೇಸೆನಗಿಂತುತೋರುವದು ॥ ೨೦ ॥
ಗುರುವಿನೋದದರ್ಚನೆಯಲಿಕಾ । ನಿರದೆಮುರುಳಾಡುತ್ತೆತನ್ನನೆ ।
ಜರಿದುಕೊಳ್ಳೆಫಕೀರಗಾಬಡಮುದುಕಕೋಪದಲಿ ॥
ಮರುಳೆಕೇಳ್ಗುರುನಾಥನಾಟವ ನರಿಯೆನೀನಾವ್ಯಡವ.ಹಾತ್ಮಗೆ ।
ಜರೆದೆಯಾನಡೆಹೋಗುಸಿಲ್ಲದಿರೆಂದುಗರ್ಜಿಸಿದಾ ॥ ೨೧ ॥
ನಿನ್ನಭಕ್ತಿಗೆಮೆಚ್ಚಿದನುಶಿವ । ನಿನ್ನಬಡತನವೆಲ್ಲಹೋಗುವ ।
ದಿನ್ನುಚಿಂತಿಸಬೇಡಮುದುಕನೆಪೋಗ.ನಡೆಯೆನುತ ॥
ಕಣ್ಣೆದುರಿನೊಳೆಮಾಯವಾಗಲು । ಚನ್ನವೀರನಲೀಲೆಯಚ್ಚರಿ ।
ಯೆನ್ನುತಾತನುಚಕಿತನ ದನ.ನೆನೆದನಲ್ಲಮನ ॥ ೨೨ ॥
ಹೋದನೈಗುರುಮಠಕವಿಸ್ಮಿತ । ನಾದಮುದುಕನುನಮಿಸಿಗುರುವಿನ ।
ಗಾಥಮಹಿಮನೆಶಂಕರನೆಪರಶಿವನೆಸದ್ಗುರುವೆ ॥
ವಾದನಡೆಯಿಸಿಭಿನ್ನಮತದಿಂ । ದಾದನೆನೆಮದ್ಭಕ್ತಿನೋಡಿದೆ ।
ಸ್ಯೆದಯಾಂಬುಧಿಯೆಂದುಗದ್ದುಗೆಗೈದೆವಂದಿಸಿದಾ ॥ ೨೩ ॥
ಗುರುಮಹತ್ವವಕಂಡಮುದುಕನು । ಗುರುಫಕೀರೇಶಂಗೆಸನ್ನಿಧಿ ।
ಗರುಪಿತಾಸಾಷ್ಟಾಂಗವಂದನೆಗೈದನೈಬಳಿಕ ।
ಅರವಿನರಸನುಶಿ ಫಕೀರೇ । ಶ್ವರನುತದ್ಭಕ್ತನಿಗೆತಾನಂ ।
ಹರಿಸಿಮನೆಗಪ್ಪಣೆಯನೀಯಲುಹೊರಟನಾಮುದುಕ ॥ ೨೪ ॥
ಗುರುಗೆನಮಿಸಿನಗಾರಿಖಾಸಿಯೊ । ಳೆರಗಿಬಾಗಿಫಕೀರರೆಲ್ಲರಿ ।
ಗಿರದಲಾಗದ್ದುಗೆಗೆವಿನಮಿತನಾಗಿಬಡಮುದುಕಾ ॥

ಗುರುವೆಣಾಹಿತ್ರಾಗಿಯೆನ್ನುತೆ । ಕೋಟುಸಂತೋಷದಲಿನಡೆವುತ ।
ಗುರುವೆಗುವೇಯೆನುತೆಮನೆಗ್ಯೆದಿದನುಸಂಜೆಯಲಿ ॥ ೨೫ ॥
ಇರುವೆಯಾಬಡಮುಗುಕಮನೆಯಲಿ । ಮರಕೆಯಾಸೀನೆನ್ನಮನದಲಿ ।
ಗುರುತಿನವಸೀನೆಂಬುಬಂಧನ ನಿನ್ನನುಸೆಗಾನು ॥
ಭರದಿಬಾನೋಡಿಕ್ಷನಿಸಗಿದು ದೂರಕವದುಸಿಕ್ಷೇಪವೆಂದಾ ।
ಗುರುತುತೆರೋರಸಿಕರ್ತಬ್ಯೆಕೆಗಬ್ಯೆಲತಾನಾದಾ ॥ ೨೬ ॥
ಹರವರಾನೂದೇವಸೀನೇ । ಗುರುಫಕೀರನುನೀನೆಬಂದೀ ।
ಪರಿಯತೋರಿಸಿಬಡುಕಿಸಿದೆಯಾಯೆನ್ನುತಾಮುದಕ ॥
ಹರುಷದಲಿನಮಿಸಿನನುಗುರುವನು । ಸಿರಿಯುಕ್ಯೆವಶಮಾಡಿಕೊಂಡಾ ।
ಸಿರಿಯುಬಲವಿಂಸೌಖ್ಯಹೊಂದುವನಾಸನಾಬಡವ ॥ ೨೭ ॥
ಪರಮುಕರ್ತನವಾಸನಾಗಿಹ ಗುರುನಿರಂಜನಜೆಗಿಸ್ವಾಮಿಯು ।
ಹರನದಾಸೋಗದಲಿತಾಸಿಜದಾಸನೆನಿಸುತಲಿ ॥
ಅರವಿಸಿಂದಾಡುತ್ತೆತನ್ನೊಳ । ಹೊರಗೆಬಂದಿಹಜನಕೆವಿಗೆಸ ।
ತ್ಕರಿಸುತಿರ್ವನಭಿನ್ನಭಾವದೊಳೇಕಸೂತ್ರದಲಿ ॥ ೨೮ ॥
ಬರುವಜನಕುಪದೇಶನೂಡು । ತ್ರಿಭುವನಾಶಿವಜೋಗಿಸ್ವಾಮಿಯು ।
ಧರೆಯೊಳಾಡಿದಶಲೀಲೆಯನೊರೆವನಂದದಲಿ ॥
ಅರವುಗೊಡುತೆಚ್ಚರಿಸಿಭಕ್ತಿಯು । ಪರಿಯನರುಹಿಸುತಾಡುತಿರುವನು ।
ಗುರುವಿಲಾಸವನೇನಹೇಳಲಿಕೇಳಿರೈಮುಂದೆ ॥ ೨೯ ॥
ನೆರೆದನಾನಾಕುಲದಭಕ್ತರಿ ರರರೆಸುರಸಂಕುಲಕೆಮಾಹೇ ।
ಶ್ವರರಿಗಾಸತ್ಪುರುಷಸಾಧುವಿತಾನಕರುವಿನಲಿ ॥
ನರಶರೀರವೆಸಿಂತುಸರ್ವತ । ಗುರುತುವಿಡಿದಾಚರಿಸಿತಾನುಪ ।
ಚರಿಸುತಿರುವನುಕೇಳಿರಾದಾಸೋಗದಂದವನು ॥ ೩೦ ॥
ಪರಮುಕರ್ತನಮೂಲಗದ್ದುಗೆ । ಗುರುತರವವೈಭವದೆಬಹುವಿ ।
ಸ್ತರಿಸಿಮೇಲಂತಸ್ತುವೆರಡಾಗಿಸಿದನಾಸ್ವಾಮಿ ॥
ಧರುಶನದಲಾಭದಲಿಬಾಳಲಿ । ನರರುಸದ್ಗತಿಪುರುಷರಾಗಲಿ ।
ಧರೆಯೊಳೆಂದೇತೋರಗದ್ದುಗೆಮಾಡಿಸಿದನಾತಾ ॥ ೩೧ ॥

ಧರೆಯಬಾಳ್ವೆಯನಂಬಿನಲಿಯು । ತ್ರಿರುವಪುರುಷರೆಲೀಲೆತಿಳಯಿರಿ ।
ಗುರುಫಕೀರನಕಪಟನಾಟಕಸೂತ್ರಧಾರಕನಾ ॥
ಪರಮಪರಶಿವನೆನಿಪನಾಗುರು । ವರಫಕೀರನುಜೋಗಿಸ್ವಾಮಿಯು ।
ನರಜನರಕಣ್ಣನಕೆಸಂಶಯವುಣ್ಮೆತೆಗೆದೆಸೆದಾ ॥ ೩೨ ॥
ಮೂರಮರ್ದನಗುರುಫಕೀರನು । ಮೂರಜನಕನಕೃಷ್ಣನಾಟವ ।
ಸಾರೆಮರ್ತ್ಯದಜನವುಸಂಶಯಗೊಂಡುದಡಿಗಡಿಗೆ ॥
ಸೇರಿದಂತಿರೆವಿಷಯದಲಿಗುರು । ವೀರನೀಲೋಕದಲಿಮರ್ತ್ಯರು ।
ದೂರಿದರುಬಿಡದೊಬ್ಬರೊಬ್ಬರುತಮ್ಮತಮ್ಮೊಳಗೆ ॥ ೩೩ ॥
ಸತತಲೀಲಾನಂದಸದ್ಗುರು । ವಿತತಮಾಯಾಲೀಲೆಯನುವಸು ।
ಮತಿಗೆತೋರಿಸಿದನುಕಣಾಬ್ಜೈಲಾಟಹೂಡಲ್ಕೆ ॥
ಮತಿವಿಹೀನರುಕುಂದನಿಟ್ಟರು । ಶ್ರುತಿವಿಚಾರರುಸ್ತುತಿಸಿದರುಶ್ರೀ ।
ಪತಿಯಗುರುವಿನಘನವಿನೋದದರಚನೆಗೇನೆಂಬೆ ॥ ೩೪ ॥
ಪರತಪೋಪಹನಾಗಿಮಹಿಮಾ । ಪರನುಮೂಗಿರೆವಿರತಿಭಾವದೊ ।
ಳುರುತಪಸ್ಸಾಮ್ರಾಜ್ಯನೃಪರಿಗೆರಾಜಶೇಖರನು ॥
ವರಚಿದಾನಂದಾತ್ಮನಾಗಿರೆ । ಪರಮಸದ್ಗುರುವಿಂಗೆಲೌಕಿಕ ।
ದಿರವುಸಂಗಡಿಸುವದೆಪುಸಿಯೆನುತಿಹರುಸಾಧುಗಳು ॥ ೩೫ ॥
ಕರವನೋರ್ವನುತನ್ನಮನೆಯಲಿ । ಗುರುವಿನಡಿಯಲಿಮಡದಿಯನುಕಂ ।
ಡಿರದೆಶಂಕಿಸಿಕೀಲಿಜೋಡಿಸಿಬಿಡದೆಬಾಗಿಲಿಗೆ ॥
ಹೊರಗೆನಾಲ್ಡೆಸೆಗಿಟ್ಟುಕಾವಲ । ಹರಿದುಭೂಪಗೆಮೊರೆಯನಿಡೆಕೇ ।
ಳ್ದರರೆಬಂದರುರಾಜಸಭೆಯವರೆಲ್ಲರೊತ್ತರಿಸಿ ॥ ೩೬ ॥
ತೆಗೆದುಬಾಗಿಲದೊಳಗೆಹೊಕ್ಕರು । ಬಗೆದುನೋಡಿದರಲ್ಲಿಕೋಣೆಯ ।
ನಗಲಪಲೆಹುಡುಕಿದರುಹರಹರಗುರುವುತಾನಿಲ್ಲ ॥
ನಗೆಮೊಗದಸತಿಮಲಗಿರಲುನಾ । ಲಿಗೆದೆಗೆಪಕಪ್ಪಿಡಿದಗೂಳಿಯು ।
ಸೊಗಯಿಸಿರಲುರೆಬೆರಗುಬೆಜ್ಜರಗೊಂಡುದಾಜನವು ॥ ೩೭ ॥
ನಿರಘಗುರುವನುಮುಸುಕಿಕೊಂಡಿಹ । ನೆರವಿಗರಹೊಯ್ಯಿಹೊಯ್ಯೆನುತಸರ ।
ಸರಸಿಭಂಡನುಗುರುವಿನೆಡೆಯಲಿಪುರದಭೂಪತಿಯು ॥

ಮುಂಗಳತನವಿನಿತೇಕೆಬಿಡಿಬಿಡಿ । ಗುರುವಿನಕೃಕಲಿಯುಂಟೆಜಗದಾ ।
ಗುರುವಿನರ್ಗಳವುಹಿಮೆತಿಳಿವ್ರದಜೋಕೆಸೀವೆಂದಾ ॥ ೩೮ ॥
ನೆರೆದಜನವೂತಂಗೆಬ್ಕೆದುದು । ಪರಮಹಂಸನಸುಳುವುಸುಳ್ಳೆಂ ।
ದೊರೆದುದೂರವಿಗೆವುಳಿದನೆಲ್ಲರಿಗಾಯ್ತುಸೋಜಿಗವು ॥
ಮೆರೆವಗೂಳಿಯುಹೊರಗೆಬಂದುದು । ಭರದೆಕಾಣಿಸವಾಯ್ತುಶ್ರೀಗುರು ।
ವರನುವುಠದಲಿಭಕ್ತಜನರೊಳಗಾಡುತಿಹನರರೆ ॥ ೩೯ ॥
ಮಂಗಬುದ್ಧಿಯವುನುಜರೇಶಿವ । ಲಿಂಗಲೀಲೆಯುನಿಮಗೆತಿಳಿವುದೆ ।
ಲಿಂಗಕಟ್ಟಿದವೂತ್ರದಲಿಲಿಂಗಾಂಗಿಗಳೆನೀವು ॥
ಅಂಗನಾಜನವೋಹವೀಗುರು । ಲಿಂಗಗುಂಟೇಸಾಕುಬಿಡಿಭವ ।
ಭಂಗಗೇಂಸ್ತ್ರೀಸಂಗವುಂಟೇಯೆಂದನಾಭೂವಾ ॥ ೪೦ ॥
ಗುರುವಿನವಕೃಪೆಯಿಂದಕೆಡುವಿರಿ । ನರಕಭಾಜನರಾಗುವಿರಿನರ ।
ಗುರಿಗಳೇಬಲುಜೋಕಿಹರಿಹರಸವುನುಗುರುವರನು ॥
ಉರಿನಕುಂಡದೊಳುಳಿವುನುಂಟೇ । ಕರುಣಿಸದುಗ್ರುನಿವುಗೆಕಾದಿಹ ।
ನರಿಯಿರೈನೀವ್ಬದುಕಿರೆಂದನುಭೂಪನಾಜನಕೆ ॥ ೪೧ ॥
ಸಂದಣಿಸಿಜನವುಂಡುವುಠದಲಿ । ಬಂದುಸದ್ಗುರುಪಾದಪದ್ಮಕೆ ।
ವಂದಿಸುತೆಸಲೆಬೇಡಿಕೊಂಡಿತುಕ್ಷವಿುಸುತಪ್ಪೆನುತಾ ॥
ಬಂದಭಕ್ತರಿಗೆಲ್ಲಗುರುತಾ । ನಂದದಿಂವಿುಗಪರಸಿವುನ್ನಿಸ ।
ಲಂದುಸರ್ವರುವೂಜ್ಞೆಗೊಂಡೈದಿದರುವುನೆಗಾಗಿ ॥ ೪೨ ॥
ಗುರುಚರಣದೊಳುಭಕ್ತಿಯಿಡದಲೆ । ಗುರುಚರಣವನುಸೇವಿಸದೆಗಡ ।
ದುರಿತಸಂಸಾರದಲಿನಯಭಯಭಕ್ತಿಯಿಲ್ಲದಲೆ ॥
ಧರೆಗೆಭಾರಕರಾಗಿಬಾಳು । ತ್ತಿರವನಿಂದಕಜನರಕರ್ತನು ।
ತರತರದತಂತ್ರದಲಿಕಳಿಸಿದನಂತಕನಪುರಕೆ ॥ ೪೩ ॥
ಗುರುವುಹಾಪ್ರಭುಸೂತ್ರವೂತ್ರದಿ । ಗುರುಫಕೀರನುಭಕ್ತರೊಂದಿಗೆ ।
ಪರವುದಾಸೋಗವನುನಡೆಯಿಸುತಾಡುತಂದದಲಿ ॥
ಧರೆಗೆಬೈಲಿಗೆಲೀಲೆದೋರುವ । ತೆರನುಹನಣಿಸಿಶಂಭುಲಿಂಗನು ।
ಸರಸತತಾಳ್ವಂಗನೆಯುರಾಗಿಸಿದನುಕಣಾವುಠದಿ ॥ ೪೪ ॥

ದುಷ್ಟರಿದುನಿಜವೆಂದುವಂದಿಸೆ । ಶಿಷ್ಟರಿದುಪುಸಿಯೆಂದುವಂದಿಸೆ ।
ಸೃಷ್ಟಿಸಿದನಾಗುರುವುಮಠದಲಿನವ್ಯನಾರಿಯರಾ ॥
ಎಷ್ಟುಮಂತ್ರದಶಕ್ತಿಯೋಮೇ । ಶಿಷ್ಟಸಾಂಬವಿಲಾಸರಚನೆಯೊ ।
ಶ್ರೇಷ್ಠಭಾಮಿನಿಜನರುವಿಭ್ರಾಜಿಸಿದರೇವೇಳ್ವೆ ॥ ೪೫ ॥
ಗುರುವಿನಾಮಾಟದಲಿತೋರಿಹ । ತರುಣಿಯರುರತಿದೇವಿಯಂತಿರೆ ।
ಮೆರೆವರುರೆನವಕನಕಮಣಿಭೂಷಣದಶೋಭೆಯಲಿ ॥
ವರಷಡಕ್ಷರಪರಮಪಂಚಾ । ಕ್ಷರಸುಮಂತ್ರಗಳನ್ನುಗುರುವಿಂ ।
ದರಿದುಶಿವಸುಖದಲ್ಲಿಮೈಮರೆದಿರ್ದರಾಮಠದಿ ॥ ೪೬ ॥
ಗುರುವಿನಲಿನಿಜಭಕ್ತಿಯಲಿಗುರು ಚರಣದಲಿಘನಸೇವೆಯಲಿತ ।
ತ್ತರುಣಿಯರುಗುರಿವಿಡಿದುಲೌಕಿಕಹಾವಭಾವಗಳ ॥
ಗುರುವಿನಪ್ಪಣೆಯಲ್ಲಿಬಾಹ್ಯದೊ । ಳಿರದವಿರಚಿಪರಮಮನಶ್ವರ ।
ನರರುಗುರುವಿಗೆಮತ್ತೆಶಂಕಿಪರಾದರಡಿಗಡಿಗೆ ॥ ೪೭ ॥
ಗುರುವುನಡಿಸಿದಬಾಹ್ಯಲೀಲೆಗೆ । ನೆರೆಪಳಿವರ ದುರ್ಜನರುಭ
ಕ್ತರುಭಕುತಿಯಲಿಶಂಕೆಗೊಂಡರುನಿಜವನರಿಯದಲೆ ॥
ಸಿರಿಗರವುಸೋಂಕಿರ್ಪಕೆಲವರು । ಮರುಳತನದಲಿನಿಂದೆಗೈದರು ।
ಶರಣರಂಶಿಕರೆಲ್ಲತಲೆದೂಗಿದರುಗುರುಕೃತಿಗೆ ॥ ೪೮ ॥
ಪೌರಜನವಾಗುರುವಿಲಾಸಕೆ । ಸೇರದಲೆಗುರುಪಾದಭಕ್ತ್ಯಾ ।
ಚಾರವಿರಹಿತರಾದರಕ್ಕಟಕೇಳಲೇನದನು ॥
ನಾರಿಯರನೆಳಕೊಂಡುಗುರುತಾ । ಸೇರಿಮಠದಲಿರಮಿಸುತಿಹನಾ ।
ಚಾರದಪ್ಪಿಹನೆಂದುಪಳಿಯುವದಾಯ್ತುಜನವೆಲ್ಲ ॥ ೪೯ ॥
ಸ್ವಾಮಿಯಾಟಕ್ಕೊಸೆಯದೊಪ್ಪದೆ । ಗ್ರಾಮವಾಸಿಗರೆಲ್ಲಕೋಪಿಸಿ ।
ಕಾಮಕೇಳಿಗೆನಲಿವನೀಗುರುಕಾಮಹರನಲ್ಲ ॥
ಸಾಮಸರಿದುದುದಾನದಣಿದುದು । ಮೈಮೆಮುರಿದುದುಭೇದವದುಮೇಣ್ ।
ಸ್ವಾಮಿಯನುಯೆಚ್ಚರಿಸೆದಂಡೋಪಾಯವೊಂದಿಹುದು ॥ ೫೦ ॥
ಎನುತೆತವ್ವೊಳಗೊಟ್ಟುಗೂಡುತೆ । ಮುನಿದು ಮುನಿಕುಲಮೌಳಿಮಣಿದ
ರ್ಶನಕೆಹೋಗದೆರಾಜಸಭೆಯೊಳಗೈದೆದೂರಿದರು ॥

ಘನಮಹಾತ್ಮಗೆಗುರುಗೆನೀವಿಂ । ತೆನಲುಬಾರದುತೆರಳಿನಿಮ್ಮಯ ।
ಮನೆಗೆನೀವೆಂತೆಂದುಕಿಡಿಕಿಡಿಯಾದನಾಭೂಪ ॥ ೫೧ ॥
ಮರುಳತನವನುಬಿಟ್ಟುಬೇಗನೆ । ದುರುಳರಾಡುವನುಡಿಯಕೇಳದೆ ।
ಪರಮಗುರುವಿಗೆನಡೆದುಕೊಳ್ಳಿರಿಭಕ್ತಿಭಾವದಲಿ ॥
ಶರಣರಕ್ಷಕಗುರುವೃತಾನೇ । ಕರುಣಿಯಲ್ಲವೆಜಗಕೆನಿಮಗೆಂ ।
ದೊರೆದುಥೊರೆವಿಗೆಸಿಟ್ಟುಮೂಡಿದನೆಲ್ಲಪ್ರಜೆಗಳಿಗೆ ॥ ೫೨ ॥
ಸಿಂಗಳೀಕನಮನದನುನುಜರು । ಮಂಗಳಾತ್ಮಕಸದ್ಗುರುವಿನು ।
ತ್ತುಂಗಲೀಲೆಯನರಿಯದಲೆಬಲುಬಗೆಯಬೇಟದಲಿ ॥
ಲಿಂಗಮಯಶಿವಯೋಗಿಸದ್ಗುರು । ಗಂಗವಿಸಿಪರಿಕಿಸಲಿಕೆಯ್ದಿರೆ ।
ಸಂಗನಾಶಿವಯೋಗಿಥಳಥಳಿಸಿದನುಸದರಿನಲಿ ॥ ೫೩ ॥
ಹೊಂಚಿದಾಜನಮಧ್ಯದಲಿಕೋ । ಲ್ಮಿಂಚುಮಿಂಚಿಕೆತ್ತಡನೆಘನಮೋ ।
ಘಾಂಚಿತಧ್ವನಿಪುಟ್ಟದುದುಮೇಲ್ವಾಯ್ದುಪೊಡೆವಂತೆ ॥
ಪಂಚಮುಖಪರಮೇಶನಾಟಕೆ । ಮುಂಚಿತಾಗಿಯೆಬೆದರಿಬಿದ್ದರು ।
ಹೆಂಚುಗಾರರುಮೂರ್ಛೆಹೊಂದಿದರಲ್ಲಿಮೈಮರೆದು ॥ ೫೪ ॥
ಪರಮಹಂಸನೆನಮ್ಮೊಳಂತಃ । ಕರಣವನುಸ್ಥಿರಗೊಳಿಸುನಮ್ಮನು ।
ಪೊರೆಸದಾಶಿವಶಂಭೊಯೆಂದರಗಿತ್ತುಪೌರಜನಾ ॥
ಮರುಳುತನಕಿನ್ನೇನುವಳ್ಸುದು । ಗುರುನಿರಂಜನವಿಭುವೆಜಗದೀ ।
ಶ್ವರನೆರಕ್ಷಿಸುರಕ್ಷಿಸೆಂದೆರಗಿದನುಭೂಪಾಲ ॥ ೫೫ ॥
ಪುರನರೇಂದ್ರನುಖಾನಗೌಡನ । ಪರಮವಂಶಜನೆನಿಪನಾತನ ।
ಪರಿಯಪೇಳುವದೇನುಸಜ್ಜನವರಶಿಖಾಮಣಿಯು ॥
ಗುರುಫಕೀರೇಶ್ವರನುಭೂಪನ । ಪರಮಭಕ್ತನನೆತ್ತಿಹರುಷದಿ ।
ಹರಸಿದನುಗಡಸಾಂಬಸದ್ಗುರ-ಭಕ್ತಬಂಧುವಲಾ ॥ ೫೬ ॥
ವಿರತಿಮೂರ್ಗಾಶ್ರಮರೆಕೇಳಿರಿ । ನೆರೆದಿರಲ್ಜನರಾನರೇಂದ್ರನು ।
ಗುರುಫಕೀರನುನುಡಿದನಾಸ್ತ್ರೀಯರನುದಿಟ್ಟಿಸುತಾ ॥
ತರುಣಿಯರುನೀವಾರುಯೋಗೀ । ಶ್ವರನಬಳಿಗಿಹುದೇನುಬಹುಜನ ।
ರರರೆವೆಣ್ಗಳಿಗಾಡಿಕೆಟ್ಟಹರೆಂದನಸುನಗುತೆ ॥ ೫೭ ॥

ಗುರುವಿನೆಡಬಲದಲ್ಲಿನಿಂತಾ । ಸಿರಿಯಸೊಬಗಿನೊಳೆಸೆವಸುಂದರ ।
ತರುಣಿಯರುರುಮರೆಯಾದರಾಕ್ಷಣಶಿವನಸದರಿನಲಿ ॥
ನೆರೆದಜನಭಯಗೊಂಡುಬಿದ್ದರು । ಹರುಷಬಟ್ಟರುತಿಳಿದಭಕ್ತರು ।
ಗುರುಫಕೀರನಲೀಲೆಕಲಿಯಲಿಬಹುವಿಚಿತ್ರವಲಾ ॥ ೫೮ ॥
ಗುರುವುಲೌಕಿಕಮಾರ್ಗದಲಿಸಂ । ಚರಿಸುವನೆವಿಷಯದಲಿಗುರುತಾ ।
ನೆರಗುವನೆಸ್ವೀಕರಿಸುವನೆಗುರುವಿಷಮವೆ ದೇಹವನು ॥
ಗುರುವಿಗೀಸ್ತ್ರೀಜನರಸಂಗವೆ । ತರಳೆಯರುಲೌಕಿಕರೆನೋಡಿರಿ ।
ಧರೆಗೆಮುಂದಣಕುರುಹುತಿಳಿಯಿರಿಯೆಂದನಾಭೂಪಾ ॥ ೫೯ ॥
ಮರವಿಮನುಜರುಸೇವುಬಿಮಗೇ । ನರಿಕೆಸಂರಕ್ಷಿಸುವೆನೆಂದನು ।
ಗುರುಫಕೀರನುಕರುಣಿಬಲುದೊಡ್ಡಾತನೀಜಗಕೆ ॥
ಧರೆಗೆದುರ್ಜನರೆನಿಸಬೇಡಿರಿ । ಗುರುಸುಭಕ್ತರನಗಲಬೇಡಿರಿ ।
ಚರಿಸಬೇಡಿರಿನಿಮ್ಮದುರ್ಗುಣನೆಂದನಸ್ವಾಮಿ ॥ ೬೦ ॥
ಈಗಶಿರಹಟ್ಟಿಯಲಿಶೋಭಿಸ । ರಾಗಿಗುರುವಾದರಲಿಸೇವಕ ।
ರಾಗಿರುವರಿಯರ್ಕಳೆಲ್ಲರುಕೇಳಿರೈಸೇವ್ಯ ॥
ಆಗಳಾಗುರುಲೀಲೆಗಂಜುವ । ರಾಗಿಸಂಶಯನಳಿದುಗುರುಕೃಪೆ ।
ಗಾಗಿಮಠಕುರೆನಡೆಯುತೊಡಗಿದರೈಸೆಪೂರ್ವಜರು ॥ ೬೧ ॥
ಅರಿವೆಮೊಸವತೆರದಕಾಲದಿಂ ತದಿನುನವಿಮವೊಸೆವಿಷಯ ।
ಕ್ಕೆರಗಿಮರೆವರುಗುರುವರದುಶ್ಚಿಂತೆಯೆ ಇಳಗಹರು ॥
ಸರಸಸುಜನರಸಂಗವೊಡದೆ ಗುರುಸುಭಕ್ತರಮಾತುಕೇಳದೆ ।
ದುರುಳರೆನಿಸುವರವ್ಯೋಚಿಂತಿಸನಯ್ಯಗುರುರಾಯ ॥ ೬೨ ॥
ಸಕಲಭಕ್ತರಕೇಳಿಂದನುರೆ । ಪ್ರಕಟಷಂಢರುಕರ್ತನಿಗೆತಾ ।
ಸಕುಟಲಂಸೈಯೆನಿಸಿಗುರುಕೃಪೆನತೆದುಸುಖಿಸಿವನು ॥
ಸಕಲರಲಿಕಳೆದೋರಿಸೊಗಯಿಸ । ಪ್ರಖರರಂಗಜನೆನಿಪಕಾಮನು ।
ವಿಕಳನಾಗಿಹನೇಕೊನಸ್ನೊಳಗೆಂದುಚಿಂತಿಸಿದಾ ॥ ೬೩ ॥
ಕುದಿಮಷಂಢರತನೆನ್ನೊಳಾಪರಿ ಯಿದಕುಪಾಯವನಡಿಸಬೇಕೆಂ ।
ಕಹರಹಳಹಳಿಎಡಿದುಮಾಂತ್ರಿಕವೈದ್ಯರಡಿಗಡಿಗೆ ॥

ಸದಯಹೃದಯರಕೇಳ್ವುದೆನ್ನೊಳು । ಮುದನನುದಯುಂಗೊಂಡುನಿಲ್ವಂ ।
ತೆದಯಪಾಲಿಸಿರೆಂದುಬೇಳ್ಪನುಮುಗಿದುಕರಯುಗವ । ೬೪ ॥
ಗಂಧವಿಲ್ಲದದೂವ್ರಸಾರಸು । ಗಂಧವಿಲ್ಲದಕೊರಡುತನಿರಸ ।
ಗಂಧವಿಲ್ಲದಕಬ್ಬುಗಂಧವದಿಲ್ಲದಾಹೃದಯು ॥
ಗಂಧವಿಲ್ಲದಭ ಷೆಕಾನಿ । ಗಂಧವಲ್ಲವೆರತಿಯುಸುಖಸೌ ।
ಗಂಧವಿಲ್ಲದಬಾಳ್ವೆಸಿಸ್ಫಲವಲ್ಲವೇನೆಂದ ॥ ೬೫ ॥
ಎಲ್ಲವೈದ್ಯರಕಾಲ್ಗೆಬೀಳುವ । ನೆಲ್ಲಮಾಂತ್ರಿಕರೆಡೆಗೆಸುಳಿಯುವ ।
ನೆಲ್ಲಯಾಂತ್ರಿಕರೆಡೆಗೆನವಿುಸುವಸವನುವಿನಯುದಲಿ ॥
ಎಲ್ಲಹಣವನುವೆಚ್ಚಮಾಡಿಹ । ನೆಲ್ಲಸಾಹಸವಾಡಿನೋಡಿಹ ।
ನೆಲ್ಲಕಡೆಗಡೆಯಾಡಿದಣಿದಿಹನಾತ್ಮಚಿಂತೆಯಲಿ ॥ ೬೬ ॥
ನರರಸೇವೆಯಮಾಡಿದಣಿದೆನು । ಮರುಳುತನದಲಿಹಣವಕಳೆದೆನು ।
ಗುರುಫಕೀರನಮರೆತುಬಿಟ್ಟೇಕೆಟ್ಟೆನಕಟೆನುತ ॥
ಗುರುವೆಮಹಿಮನೆಸೃಷ್ಟಿಕರ್ತನೆ । ಕರುಣಿಸೈಸೀನೆನಗೆಜಗದಲಿ ॥
ಚರಣವೇಗತಿಯೆನುತೆನಂಬಿದನಾನಪುಂಸಕನು ॥ ೬೭ ॥
ಗುರುಮಹತ್ವದಗದ್ದುಗೆಗೆವಿುಗೆ । ಗುರುಪದಾಬ್ಜಕೆಭಕ್ತಿಭಾವವ ।
ನಿರಿಸಿನೇಮಿಸಿಮಠಕೆತಾನಡಕೊಳ್ಳಲೆಸಗಿದನು ॥
ಗುರುಫಕೀರೇಶ್ವರನೆಸಿನ್ನುರು । ತರದಸೂತ್ರದೊಳೆನಗೆಬಿಡದು ।
ಧರಿಸುವದುಪುರುಷತ್ವಮಿತ್ರನ್ನೆಂದುಭಜಿಸುವನು ॥ ೬೮ ॥
ಗುರುವಿನೊಳುದೃಢವಿಡಿದುಷಂಢನು । ಬರುವನೈಪ್ರತಿನಿತ್ಯವಿರುಳೊಳೆ ।
ಭರದೆಸೇವಿಸಿಮೊರೆಯನಿಡುವನುಕರ್ತನಂಘ್ರಿಯಲಿ ॥
ನರರುಮರುಳರುಸಾಂಬಸೂತ್ರವ । ನರಿಯರವರಿಗೆತಿಳಿಸಿಭಕ್ತಿಗೆ ।
ಕುರುಹುಕಾಣಿಸಲೆಂದುಕರ್ತನುಬಿಡದೆಬಗೆದಂದಾ ॥ ೬೯ ॥
ಸ್ಮರಿಸಿಗುರುಪಾದವನುಭಕ್ತನು । ಬರುತಿರಲ್‌ಪಥವಿಡಿದುನೇಮದೊ ।
ಳಿರುಳೊಳಂಜದೆಮಠಕೆಪ್ರತಿದಿನದಂತೆಭಕ್ತಿಯಲಿ ॥
ಅರರೆಘೋರಾಕಾರಸಿಂಹನ । ತರದೊಳೆದುರಿಗೆಬಂದುಕರ್ತನು
ಹರಿದುತಿನ್ನುವನಂತೆಮುಗಿಬಿದ್ದೆರಗುತಂಜಿಸಿದಾ ॥ ೭೦ ॥

ಗುರುವಿನಂಘ್ರಿಯನೆನೆದುಹೆದರದೆ। ಗುರುವೆಗತಿಯೆಂದೆನುತೆಮುಂದಕೆ।
ಹರಿಯೆಕರ್ತನುಮತ್ತೆತೋರ್ದನುವಧ್ಯಮಾರ್ಗದಲಿ ॥
ಜರಡವಸ್ತ್ರಾಭರಣಕಾಂತಿಗೆ। ನೆರೆದಕಳ್ಳಲೆಪರಿಯೆಶೋಭಿಸು।
ತರರೆಶಾನೆದುರಾದನಾತಗೆಸ್ತ್ರೀಯರೂಪದಲಿ ॥ ೩೧ ॥
ಕಾಮಪೀಡಿತರಮಣಿಯಂದದಿ। ಕಾಮಿಸೀನವರೂಪದಲಿಗುರು।
ಭೂಮಿಯಲಿತಾಂಭಕ್ತಕರವನುಪಿಡಿಯಲಾಕ್ಷಣಕೆ ॥
ಕಾಮತಾಪವುಪುಟ್ಟಭಕ್ತನು। ಕಾಮಿನಿಯಕೈವಿಡಿಯಲಾತ್ಮಾ।
ರಾಮವೊಯವನುಳಿದುರೂಪವತೋರಿಬಯಲಾದ ॥ ೩೨ ॥
ಕೋರುತಡಗಿದಮೂರ್ತಿಯನುಕ। ಣ್ಣಾರೆಕಂಡಾಭಕ್ತನಾಗುರು।
ವೀರನಂಕೀರ್ತಿಸುತೆಗಸ್ಪುಗೆಗೈದಿನಮಿಸಿದನು ॥
ಭೂರಿಸಂತೋಷದಲಿಕರ್ತನ। ವಾರವನುಹಿನಾಲೀಲೆ ಮನುಬಿಡ।
ದೋರಣಿಸಿವೇಳ್ವಾಪ್ತಜನಕಾನಂದಬಡಿಸಿದನು ॥ ೩೩ ॥
ಊನಪುಂಸಕನನುಮಲೆಶಕದಿ। ತಾನವಾಪುರುಷತ್ವವಡೆದನು।
ನ್ಯೂನವಿಲ್ಲದೆಶ್ರೀಫಕೀರೇಶ್ವರನಕರುಣದಲಿ ॥
ಏನದಾದರುಮೂಗದಿರುವದೆ। ಮೂನವಂಗೇಂತಿಳಿವುದೆಸ್ನುತೆ।
ಧ್ಯಾನಕೊಳಗಾಗಿತ್ತುನೆರೆಹೆಸರಯೆಲ್ಲರೊಳಹೊರಗೆ ॥ ೩೪ ॥
ಪುರುಷರಾಗಲಿಸ್ತ್ರೀಯದಾಗಲಿ। ಧರೆಯೊಳಾತ್ಮಸ್ಥಿತಿಯನರಿದಾ।
ಚರಿಸ್ಪಿಡಡೆಗಡವುಂದೆಸರಗುರುಯಾಗದವರಿನ್ನು ॥
ಮರಳಬುಂಮೊಡದೇನುಮರ್ತ್ಯಕೆ। ದುರಿತಜಾಲಕೆಬೀಳರೆಂದಿಗು।
ಗುರುವುಬಿಡದೆಚ್ಚರಿಕೆಗೊಡುವನುಹೃದಯಕಮಲದಲಿ ॥ ೩೫ ॥
ಗುರುಫಕೀರನುಜೋಗಿಸ್ವಾಮಿಯು। ಧರೆಗೆಮಹಿಮೋತಿಶಯಲೀಲೆಯೊ।
ಳಿರುತತನ್ನಂಶಿಕಗೆತಾನಳಕೊಂಡುತನ್ನೆಡೆಗೆ ॥
ವರದಿಗಂಬರಚನ್ನವೀರೇ। ಶ್ವರನನಾಮುವನಿಟ್ಟುಕರುಣಿಸಿ।
ವರತರದನಿಜಬೋಧವನುಕರುಣಿಸಿದಗುಪ್ತದಲಿ ॥ ೩೬ ॥
ಮರಿಯೆನಿಸಿಥಿಕ್ಕರಿಸಿಸರ್ವವ। ನರವಿನಿಂಶಿವಸುಖದೆಸೇವೆಯೊ।
ಳಿರುವಗಾತ್ರಮಗೊಟ್ಟನೈಗಡಶ್ರೀಫಕೀರೇಶ ॥

ವರಕಟಾಕ್ಷವಸಿರಿಸಿಸಾಜದಿ । ನೆರೆಭಕ್ತರಿಗರುಹಿಪರಿಜನ ।
ವೆರಸಿಶಿವಸಂಭ್ರಮದೆಬೆಳಗುವನಾ ನೆಳ ಹೊರಗೆ ॥ ೨೭ ॥
ಪರಮಗುರು ಶಿವಜೋಗಿಸ್ವಾಮಿಯು । ಗುರು ಪಿನ ಜ್ಞಾಸೂತ್ರಪಾತ್ರದೊ ।
ಳಿರುತ ಮಂಗಲಮೂರ್ತಿಮಹಿಮೂಪುರ ಷನೆಸಿಸುತಲಿ ॥
ಗುರುಸಿರಿಜನಕರ್ತನಪ್ಪಣೆ । ವೆರಸಿಪಟ್ಟವನ್ನಟ್ಟವಂದೇ ।
ವರನುಹರಸಿದನೇನೊಬಲ್ಲರಾರುಲೆ ಕದಲಿ ॥ ೨೮ ॥
ಅರರೆಶ್ರೀಗುರುಜೋಗಿಸ್ವಾಮಿ । ಪರವ ಶಿ ಸಾಯುಜ್ಯವೈದಿದ ।
ನರಿಯಲಂದೇಹೇಳಬೇನಾಗುರುವಿನಾಟವನು ॥
ಅರಿತುನಲಿಯಿರಿಬಾಗಿನಡೆಯಿರಿ । ಗುರುಸುಲೀಲೆಯನಂಬಿಕೊಳ್ಳಿರಿ ।
ಗುರುಮಹತ್ವದನಿಜಕಥಾನಕದಲ್ಲಿಕಿವಿಗೊಡಿರಿ ॥ ೨೯ ॥
ನೆರೆದಭಕ್ತರುಘೋಷದಲಿನಿ ರ್ಝರದ ನಾನಾವಾದ್ಯದಲಿಸಿಂ ।
ಗರಿಸಿದಾಶಿವಸದರಿಗಿರೆಶ್ರೀಚನ್ನವೀರೇಶ ॥
ಮರಳಿಮರ್ತ್ಯಕೆಕರ್ತನೇಬಂ । ದಿರುವನೋಯೆಂಬಂತೆಕಾಣಿಸೆ ।
ಗುರುಪದದಬಿರುದುಗಳುಶೋಭಿಸುತಿರ್ದವೇವೇಳ್ವೆ ॥ ೩೦ ॥
ಮರವಿಕವಚನನಾಂತುಮಾಯಾ । ಭರದೆಬಳಲುವಭಕ್ತರುಗಡ ।
ಗುರುಗಳುಂಶಿಷ್ಯರ್ಕಳುಂಹೃದಯದೆಸಿರೀಕ್ಷಿಸಿರಿ ॥
ಅರವಿನಾಟವೆಗುರುವಿನಾಟವು । ಗುರುವಿನಾಟದಸೂತ್ರವೊಂದೇ ।
ನರಗುರುಗಳೇನರಿದವರೆತಾವ್ಸಾಂಬಸೂತ್ರವನು ॥ ೩೧ ॥
ಜಯಜಯವುಗುರುಸಿದ್ಧರಾಮಗೆ । ಜಯಜಯವುಗುರುಜೋಗಿಸ್ವಾಮಿಗೆ ।
ಜಯಜಯವುಕರ್ತಂಗೆಶ್ರೀಗುರುಚನ್ನವೀರಂಗೆ ॥
ಜಯಜಯವುಜಯವೆಂದುಭುವನದಿ । ಜಯಜಯವುಜಯವೆಂದುಗಗನದಿ ।
ಜಯಜಯಧ್ವನಿಗೈದುನಲಿದಾಡಿದರುನರಸುರರು ॥ ೩೨ ॥
ಆರುತಾಣವಮೀರಿದಾತಗೆ । ಮೂರುತಳವನುಮೀರಿನಿಂತಗೆ ।
ಸಾರಮಹಿಮೆಯತೋರ್ದಗುರುವಿಗೆಬೆಳಗಿರಾರತಿಯಾ ॥
ತೋರಿತೋರದನಂತರೂಪಗೆ । ಮೀರಹರನಿರ್ಮಾಯದೇವಗೆ ।
ಸಾರಿಸದ್ಗುರುಚನ್ನವೀರಗಬೆಳಗಿರಾರತಿಯಾ ॥ ೩೩ ॥

ಗುರುಮಹತ್ವದಸಾ ವಿಂತಿದು । ಗುರುಮಹತ್ವಮನಂತಮಿರ್ಪುದು ।
ಗುರುಮಹತ್ವವನರಿದುಪೇಳುವರಾರುಲೋಕದಲಿ ॥
ಗುರುಫಕೀರೇಶ್ವರನುಗಂಗಾ । ಧರನಮುಖದಿಂಪೇಳಿಸಿದನೀ ॥
ತೆರದಿಮುಗಿದುದುಸಂಧಿಹತ್ತೊಂಭತ್ತನೆಯದೆನಿಸಿ ॥ ೮೪ ॥

॥ಇತಿ ಶ್ರೀ ಶಿವಪುರಾಣಾಂತರ್ಗತ ಶಿವಸಂಹಿತಾ ಸ ಶ್ರೀ ಭಗವಾನ್ ಫಕೀರೇಶ್ವರ ಗಂಗನಿಂ ಪೇಳಿಸಿದ ಪೌರಾಣದೊಳ್ ಹತ್ತೊಂಭತ್ತನೆಯ ಸಂಧಿಸಮಾಪ್ತಮಿಂತು।
೧೭೯೦ ಪದ್ಯಂಗಳಿಗೆ ಮಂಗಲವಹಾ ಶಿವ ಶ್ರೀ ಶ್ರೀ ಶ್ರೀ ಶ್ರೀ

## ೨೦ನೇ ಸಂಧಿಯು.

### ೩ನೇಪಟ್ಟ—ಮೊದಲನೆಯ ಚನ್ನವೀರಸ್ವಾಮಿಗಳು.

ಸೂಚನೆ—
ಪರಮಪರಶಿವನಾದಿಕರ್ತನು । ಮರೆಯೆನಿಸುತಿಹಚನ್ನವೀರೇ ।
ಶ್ವರನನಾಮದೊಳೆಸೆವನಾದನುಮತ್ತೆಭಕ್ತರಲಿ ॥ ಪಲ್ಲ ॥

ಗುರುವುಶ್ರೀಗುರುವರಕರಾಬ್ಜಜ । ನರರೆಬ್ರಹ್ಮಾನಂದದಲಿತಾ ।
ನಿರುತೆಭಕ್ತರನೆತ್ತಿಸಲಹುವನಾದನಾಲದಲೆ ॥
ವರದಯೂಪರಚನ್ನವೀರೇ । ಶ್ವರನುಘನಮಹಿಮೆಯನುತೆತೋರಿದ ।
ಪರಿಯಬೇಳಲಿಕಳವೆಹಾಮುರರಾಜರೇಸದನು ॥ ೧ ॥
ಬರೆವೆನಾಗುರುಚನ್ನವೀರೇ । ಶ್ವರನಮಹಿಮಾಸಾರವನುನೀ ।
ವರಿಯಿರ್ಪಸದ್ಭಕ್ತರೆಂಬವರೆಲ್ಲಕುಲದವರು ॥
ಗುರುವಿನಪ್ಪಣೆಯಂತೆವರ್ತಿಸು । ತಿರುವನಾಗುರಚನ್ನವೀರನು ।
ನಿರತನಾಗಿರುತಿಹನುದಾಪೋಗದಲಿಪಗಲಿರುಳು ॥ ೨ ॥
ಅವಧರಿಸಿರ್ಪವಿಬುಧರೆಲ್ಲರು । ಶಿವನುಕರ್ತನುಹರಿಯುರಾಮನು ।
ಪ್ರವಿದಿತಾದಿಯಗುರುವುಶ್ರೀಶಿವಯೋಗಿಯೆಂಬವರು ॥
ಅವತರಿಸಿನುತದಲ್ಲಿನಿಂತೀ । ಭುವನಕಚ್ಚರಿಬಡಿಸಿಬೆಳಗಿದ ।
ರವರಮಹಿಮಾಕಥೆಯಸಂಧಿಗಳೆಲ್ಲಹಿಂದಿಹವು ॥ ೩ ॥

ಧರೆಯೊಳವರಿವರೆಂಬುದಿಷ್ಟೇ । ಪರಿಕಿಸಲ್ಕವರೊಂದೆಜ್ಯೋತಿ ।
ಸ್ಫುರಣವುಹಿಮರುಭಕ್ತಿಗೋಸುಗವಾಗಿಬಂದವರು ॥
ಅರಿಯಲವರೇಮುಂದೆಬರುವವ । ರರಿಯಲಿವರೇಹಿಂದೆಬಂದವ ।
ರರಿದಲಾಮರ್ತ್ಯರಿಗೆರೂಪಾಂತರದಹೊಲಬುಗಳು ॥ ೪ ॥
ಗುರುತುತಿಳಿಯದುಸಾಕುಹಿಂದಿನ । ಗರವುಪುಟ್ಟಿದುಸಾಕುಮುಂದಿನ ।
ಗುರುಹುಹೊಳೆಯದುಸಾಕುಪರಿಭವದಾಟಸಾಕೆನುತೆ ॥
ಗುರುಪುರಾಣದೊಳಸಮಸದ್ಗುರು । ವರಕಥಾಮೃತಸಾರಕೆರಗಿಂ ।
ಗುರುನಿರಂಜನನೊಸೆದುಶಿವಸುಖಪದವಿಕೊಟ್ಟಪನು ॥ ೫ ॥
ಪರಿಭವದಕುಲಛಲದಭಕ್ತರೆ । ಹರುಷಗೊಳ್ಳಿರಜಗದಕರ್ತನ ।
ಮೆರೆವಗದ್ದುಗೆಗಿರುವಪ್ರಭುವಿನವಾದಲೀಲೆಯನು ॥
ಹಿರವೆನಿಂದಿಗೆಕೇಳಿತಿಳಿಯಿರಿ । ಮರುಳರಾಗದೆನೋಡಿನಡೆಯಿರಿ ।
ಗುರುಪದಾಂಬುಜಭಕ್ತರಾಗಿರಿಸುಖಿಸಿರನವರತ ॥ ೬ ॥
ಭೂಸುರಾಂಗನೆಯೋರ್ವಳವಳೊಳು । ವಾಸವಾಗಿರೆಪಾಂಡುರೋಗವು ।
ಘಾಸಿಯಾಗುವಳವಳುನವಯೌವನದಕಾಲದಲಿ ॥
ಹೇಸಿಜನ್ಮವುಸುಡಲಿಸಂಸೃತಿ । ಯಾಸೆನಿಷ್ಫಲವಾಯ್ತುಪಿಂದಣ ।
ದೇಸುಜನ್ಮದಪಾಪಫಲವೋಯೆಂದುಚಿಂತಿಪಳು ॥ ೭ ॥
ಸಿರಿಯಪೂಜಿಸಿಬೇಡಿಕೊಂಬಳು । ಹರಿಯಧ್ಯಾನಿಸಿಬೇಡಿಕೊಂಬಳು ।
ಮರುಗುವಳುಪಾಡುವಳುಸಲೆಶ್ರೀಕೃಷ್ಣಲೀಲೆಯನು ॥
ನಿರಶನವ್ರತಗೊಂಡುಚಿಂತಾ । ಭರಿತೆಯಾಗುವಳೊಮ್ಮೆತನ್ನೊಳು ।
ಕೊರಗುವಳುಪ್ರಾಲಬ್ಧಕರ್ಮವುಬಿಡದುತನಗೆನುತಾ ॥ ೮ ॥
ಗಿರಿಜೆಗರ್ಚಿಸಿಪದೆದುಪರಮೇ । ಶ್ವರನಪ್ರಾರ್ಥಿಸಿಬೇಡಿಕೊಂಬಳು ।
ತರುಣಿಪರಿಹರಿಸೆನ್ನರೋಗವನೆಂದುಪ್ರಾರ್ಥಿಪಳು ॥
ನೆರೆಮನೆಯಶಿವಮತದಪೆಣ್ಮಣಿ । ಕರೆದುಕೊಂಡಾಕೆಯನುಪೇಳು ।
ತ್ತಿರುಹಿದಳುಗಡವರಶಿರಃಪುರಗುರುಮಹತ್ತ್ವವನು ॥ ೯ ॥
ವರಶಿರಃಪುರಮಠವೆಜಗದೀ । ಶ್ವರನಮಠವದುತಿಳಿದುಕೊಳ್ಳೌ ।
ವರಭಕೀರನುಹುಟ್ಟುಜಂಗಮನೆನಿಸುತಿಹನವನು ॥

ತರತರದರೋಗವನುಕಳೆವನು । ಧರಣಿಯಲಿಭಕ್ತರಿಗೆಬಿಡದೈ ।
ಸಿರಿಯಕೊಡುವನುನೀನುನಡಕೊಳ್ಳೆಂದಳಾತಾಯಿ ॥ ೧೦ ॥
ಅಹುದುಗಡಹೌದವ್ವೆಲೋಕದೊ । ಳಿಹುದುಶ್ರೀಗುರುವುತದೊಳತಿಶಯ ।
ಮಹಿಮೆನಡೆಯುವದಾನುಕೇಳಿಹನೆಲ್ಲಲೀಲೆಯನು ॥
ಮಹಿತಮಹಿಮನಿಗೆಗುರುಫಕೀರಗೆ । ವಿಹಿತವಾಗಿಯೆನಡೆದುಕೊಂಬೆನು ।
ಮಹಿಯೊಳೀತನುಪಾತಗರ್ಭಿತವೆಂದಳಾಪಸಿತೆ ॥ ೧೧ ॥
ಗುರುಸುವಾರಕ್ಕೊಮ್ಮೆಬರುವಳು । ಕರವಮುಗಿದುಶಿರಬಾಗಿಕರ್ತಗೆ ।
ಗೆರಗುವಳುಮಿಗೆಸುಪ್ರದಕ್ಷಣೆಗೈವಳಂದದಲಿ ॥
ಗುರುಫಕೀರೇಶಂಗೆಸ್ವಾಮಿಗೆ । ಚರಣಕನುಲಕೆನಮಿಸಿಭಕ್ತಿ ।
ಸ್ಫುರಣದಲಿಗುರುರಾಯುಸಲಹೆನುತಿಹಳುಸಿಷ್ಟ್ಯಯಲಿ ॥ ೧೨ ॥
ತಪ್ಪದಲೆಗುರುವಾರಕವಳ್ಳೆ । ತಪ್ಪುವಳುಮುದದಿಂದಲೆಡಗಡೆ ।
ರೆಪ್ಪೆಹಾರುತ್ತಿರಲುತಿಳಿವಳುಶುಭದಸೂಚಸೆಯಾ ॥
ಕಪ್ಪುರಾರತಿಗೊಂಡುಬೆಳಗುವ । ಳಪ್ಪನೀಸಲಹೆಂದುನಮಿಸುವ ।
ಳೊಪ್ಪಿಸಿಹೆನೀತನುವನಿನಗೆಂತೆಂಬಳಾತಾಯಿ ॥ ೧೩ ॥
ಗುರುಕಟಾಕ್ಷವದೆಂತೆತನಗಾ । ಗುರುಪಿನೊಲುಮೆಯದೆಂದಿಗಪ್ಪುದೊ ।
ಗುರುಫಕೀರನವಾದವೇಗತಿಯೆನ್ನುತಾತರುಣಿ ॥
ಸ್ಮರಿಸುತಂನಿಜಪತಿಗೆತಿಳುಹಿಸು । ತಿರುವಳೇಕಾಂತದಲಿಚಿಂತಿಸು ।
ತಿರುವಳ್ಳೆಗುರುದತ್ತನಂದೇಭಜಿಸುತಿಹಳವಳು ॥ ೧೪ ॥
ಬಿಸಿಲುಮಳೆಚಳಿಗಳನುನೋಡದೆ । ಹಸಿವೆತೃಷೆಗಳಕಡೆಗೆನೋಡದೆ ।
ಕಿಸಿಮುಖಿಬರುತಿರ್ಪಳಾಗುರುಮಠಕನೇಮದಲಿ ॥
ಮುಸುಕಿದೀಘನರೋಗವಿದುನೀ । ಬೆಸನನಾದರೆಸಿಲ್ವುದುಂಟೇ ।
ವಸುಧೆಯಲಿಭಕ್ತಳಿಗೆಕರುಣಿಸುಕರುಣಿಸೆನ್ನುವಳು ॥ ೧೫ ॥
ಗುರುಫಕೀರನೆಭಕ್ತಕರುಣಾ । ಕರನೆಕರುಣಾದೃಷ್ಟಿಯೀನೀ
ಚರಣಭಕ್ತಳನೋಡುಕಣ್ದೆರೆಯೆಂಬಳಾತಾಯಿ ॥
ಘೋರದಿಗಂಬರದೇವದತ್ತನೆ । ಘೋರೆಯಬೇಡೆನಗಾರುಗತಿಯೆಂ ।
ದೊರಲುತಿರುವಳುಕರ್ತನನುಮರೆಹೊಕ್ಕುಪ್ರಾರ್ಥಿಪಳು ॥ ೧೬ ॥

ಹಾರಲೆಡಗಣ್ಣವಳುಗುರುಕೃಪೆ । ದೋರೆಶುಭಸೂಚಿತವುತನಗೆಂ ।
ದಾರಯಿದುಭೂಸ ರೆಯುಸಂತಸಬಟ್ಟಳಾತ್ಮದಲಿ ॥
ವೂರಹರನಾಪಾದಕರುಣವು । ತೋರುತಿದೆಗಡಸ್ವಾಮಿಯಾಟವ ।
ನಾರುತಿಳಿಯುವರೆಂದುವೊರೆಯಿಡುತಿಹಳುಮನದೊಳಗೆ ॥ ೧೭ ॥
ಸಿರಿಪುರದೆ ಪೊರವುಟ್ಟುಗುರುವನು । ಸ್ಮರಿಸುತಂಪಥವಿಡಿದುತಾಂನಿ ।
ರ್ಭರದೊಳ್ಳೈತರುತಿರ್ಪಿನಂಗುರುಗೊಲ್ಲನಂತಾಗಿ ॥
ಕರೆದನಾಕೆಯ ಮಾರ್ಗದಲಿವುಂ । ಬರಿದು ಕೇಳಿದನವ್ವೆತರುಣಿಯೆ ।
ಹರಿದುಹೋಗುವದೆಲ್ಲಿಗೌಸೀನೆಂಡನಸುನಗುತಾ ॥ ೧೮ ॥
ಇಲ್ಲಿನಿಲ್ಲದಿರಿನ್ನುಬಳಿಯಲಿ । ಖುಲ್ಲನಿನ್ನನು ಕರೆದೆನೇನೀ ।
ಗೊಲ್ಲನೇಬಿಡುಗಳುಹದಿರುನೀನೆನ್ನುತಡಿಯಿಡಲು ॥
ಬಲ್ಲೆನವ್ಮನೆನಿನ್ನಕೋಂಕೆ । ಗಲ್ಲಿಗಾರಿಲ್ಲೆಂಡುಬಂದಿಹೆ ।
ನಿಲ್ಲದೈದುವದುಂಟೆನಿಲ್ಲೌಯೆಂದನಾಗೊಲ್ಲಾ ॥ ೧೯ ॥
ಗೊಲ್ಲನಾನುಡಿಗಳನುಲಾಲಿಸ । ದಲ್ಲಿನಿಲ್ಲದೆಸೊಲ್ಲಿಸದೆತಾ ।
ನೆಲ್ಲಿಯುವನಿವನೆಂದುಬಗೆಯದೆವುಂದಕಡಿಯಿಡಲು ॥
ಬಲ್ಲೆ ಬಲ್ಲೆನುನಿನ್ನಬಯಕೆಯ । ಸೆಲ್ಲಸುವ್ಮನೆ ಹೋಗುವದುನೀ ।
ನಿಲ್ಲಿ ಕೈಗೊಡುರೋಗವರಕಿಪೆನೆಂದನಾಗೊಲ್ಲಾ ॥ ೨೦ ॥
ಗೊಲ್ಲನೇಬಿಡುಬಲ್ಲೆ ಬಿಡುಕೂ । ಳಿಲ್ಲಸಲ್ಲೆಡೆಯಲ್ಲಿಬೇಳ್ಪುದು ।
ಬಲ್ಲೆನೀಪುಸಿಗೊಲ್ಲನೆನುತಾತರುಣಿಸಿಟ್ಟಿನಲಿ ॥
ಗೊಲ್ಲನೇಬಿಡುಹಾದಿಯನುಗುರು । ಬಲ್ಲನೆನ್ನಯರೋಗವಿದುನೀ ।
ನೆಲ್ಲಬಲ್ಲವನಾದೊಡೆನ್ನಯರೋಗದೆಗಯೆನಲು ॥ ೨೧ ॥
ಸುಳ್ಳುಹೇಳುವದಿಲ್ಲಸುಗುಣಿಯೆ । ಬಲ್ಲೆನಿದರೌಷಧವನೆಂದಾ ।
ಗೊಲ್ಲನಾಕ್ಷಣಕಲ್ಲಿತೋರಿದನೊಂದುಮೂಲಿಕೆಯ ॥
ಎಲ್ಲಗೊಲ್ಲರಮಾತುಬೇರೀ । ಗೊಲ್ಲನಾಟವನೋಡುನೆರೆನೀ ।
ನೊಲ್ಲದಿದೌಷಡವಿೂವೆನೆಂದನುತಿತ್ತುವುತ್ತೆಂದಾ ॥ ೨೨ ॥
ಗೊಲ್ಲನೌಷಧವೆಂದುತಾಯಿಯೆ । ಚಲ್ಲಿಕೊಡದಿರುನೀನುವ್ಮೈಮೇ ।
ಲೆಲ್ಲಹಚ್ಚುವದಿದನುತೇದುರಗಂಧದಂದದಲಿ ॥

ನಿಲ್ಲುನಿಲ್ಲೆನುತವನುತತ್ಕ್ಷಣ । ಕಲ್ಲಿಭಕ್ತಳುನೋಡುತಿರೆತಾ ।
ನಿಲ್ಲಿಸಿದನುಕರ್ತನಾತನಲೀಲೆಯೆಂಥನವೊ ॥ ೧೩ ॥
ಕೋರುತಡಗಿದಗೊಲ್ಲನಾಗಂ । ಭೀರವಾದ್ರೈಯನರಿತುತಾನೆದೆ ।
ಹಾರಿಹೆದರಿದಳವಳುತಾನಿವಗೊಲ್ಲನಲ್ಲೆನುತಾ ॥
ಆರೊಯೆಂದೆನುತಂತುಚಿಂತಿಸಿ । ಸಾರಿದಳುಗುರುವಾಕೆಬೇಗನೆ ।
ಸೇರಿಗದ್ದುಗೆಗೆರಗಿಪ್ರಾರ್ಥನೆಗೈದಳೀತೆರದಿ ॥ ೧೪ ॥
ಗುರುವೆತವ್ಮಯುಮಠಕೆಪಾಡಕೆ । ಬರುತಿರಲುಪೊಸಗೊಲ್ಲನೋರ್ವನು ।
ಸರಸವಾಡಿದನೆನ್ನತಡೆದನುಮಧ್ಯಮಾರ್ಗದಲಿ ॥
ಸುರಿಸಿದನುಬಲುಸವಿಯನುಡಿಗಳ । ನರರೆರೋಗವಕಳೆವೆನೆಂದನು ।
ಭರದೆಮೂಲಿಕೆಗೊಟ್ಟತಾಂಮರೆಯಾದನಾಕ್ಷಣಕೆ ॥ ೧೫ ॥
ಅರಿದದಾಯ್ತುಕಟಕಟಕೇಳ್ಳೈ । ಗುರುಫಕೀರನೆದೇವಪತ್ರನೆ ।
ಸರಹರಿಯೆಸದ್ಗುರುವೆನಿನ್ನಯಲೀಲೆಯದ್ಭುತವು ॥
ಕರುಣಿಸೈಭಕ್ತಳನುನೀನೆಂ । ದೆರಗಿದಳುಗದ್ದುಗೆಗೆಮೋಣಾರೆ ।
ಮೊರೆಯನಿಟ್ಟಳುಕೇಳಿರೆಲ್ಲರುಭಕ್ತರೆಂಬವರು ॥ ೧೬ ॥
ಮನೆಗೆನಡೆನೀನಿನ್ನಗುಣವೂ । ನಿನಿಯಮೂಲಿಕೆತೇದುತನುವಿಗೆ ।
ಮನದಶುದ್ಧಿಗದೊರೆದುರಸವನುಹಚ್ಚುಕುಡಿಬಿಡವೆ ॥
ಜನಿತರೋಗವುಹೋಗಿಕಾಯವು । ಕನಕರುಚಿವಾಳುವದುಗಡನೀ ।
ನನಗೆಮಗಳೌಯೆಂದುಗದ್ದುಗೆನುಡಿದುದೇವೇಳ್ಳೆ ॥ ೧೭ ॥
ಗುರುವಿನಾಗದ್ದುಗೆಯಶಂಭು । ಸ್ವರವನಾಲಿಸಿಸಲಿವಭವಸುರೆ ।
ತರುಣಿಸ್ವಾಮಿಯನಮಿಸಿತಿಳುಹಿಸಿಹೊರಟಳಸವಸದೆ ॥
ಸಿರಿಪುರಿಗೆಮಂದಿರಕೆಮುಟ್ಟಿದ । ಳೆರಗಿನಿಜಕಾಂತಂಗೆಪೇಳ್ದತಿ ।
ಹರುಷಬಡಿಸಿದಳಾದ್ವಿಜಾಂಗನೆಪೇಳಲೇನದನು ॥ ೧೮ ॥
ತೇದುಮೂಲಿಕೆಕುಡಿದುರಸವನು । ಮೋದದಿಂಮೈಗೆಲ್ಲಕಡೆಯಲಿ ।
ಸಾಧಿಸಿಯೆಮಿಗೆಹಚ್ಚಿಕೊಂಡಾವನಿತೆಮಲಗಿದಳು ॥
ಶ್ರೀದಿಗಂಬರದತ್ತಸದ್ಗುರು । ಪಾವಕತುಸಾಮೊತ್ರದಲಿಮರೆ ।
ಯಾದುದಾಘನರೋಗಮೊಳಹೊರಗಿಲ್ಲವೆಂದೆನಿಸಿ ॥ ೧೯ ॥

ಮುನಿಗಳಾತ್ಮದಿಕೊಳೆವಜೊಮ್ಮದ ವಿನಗದಿನುನೋಡೆಂಬವೊಲಾ ।
ದಿನಪಕಿರಣಗಳವಳಮೈಮೇಲೆಸೆಯಲಾಕ್ಷಣಕೆ ॥
ವನಿತೆಯೆದ್ದೆಲ್ಲವನುಕಾಣುತೆ । ಘನಫಕೀರನಕರುಣವಾಯ್ತೆನುತ ।
ಗೆನುತತೋರಿಸೆನೆನೆದರೆಲ್ಲರುಗುರುಪದಾಂಬುಜವ ॥ ೨೦ ॥
ತಂಗಿಬಾಬಾಮುಗಳೆಸಿಸಗಾ । ಮಂಗಳಾತ್ಮನುಶ್ರೀಫಕೀರನ ।
ಕಂಗೊಳಿಸಿಕಾಪಾಡಿದನುಸಿನಗಲ್ತೆಲೋಕದಲಿ ॥
ಮಂಗನುನುಜರುಭುವನವಹಿಮೋ । ತ್ತುಂಗಗುರುವನುಜರಿದುಕೆಡುವರು ।
ತಂಗಿನೀವಡಕೊಂಡಿಯೆಂದಳುಶಿವವಾಹಾಂಗನೆಯು ॥ ೨೧ ॥
ಕಂಡೆನೌಸಿನ್ನಿಂದೆವಂತವನು । ಕಂಡೆನೌಸಿನ್ನಿಂದೆಗುರುವನು ।
ಕಂಡೆನೌಜಗವಾದಿಕರ್ತನಮೂಲಪೀಠನನು ॥
ಕಂಡೆಲೀಲಾವಹಿಮೆಯನುಭೂ । ಮಂಡಲದೊಳತ್ಯಧಿಕವಂತವದು ।
ಕಂಡೆಬದುಕಿದನೆಲ್ಲನಿನ್ನಿಂದೆಂದಳಸ್ತ್ರೀಯು ॥ ೨೨ ॥
ತಿಳದಭಕ್ತರೆಕೇಳಿರಾಕೆಯು । ನಲಿದುಪತಿಯಾಜ್ಞೆಯೊಳಿನರ್ತಿಸು ।
ಕೊಳಹೊರಗುವೊಂದಾಗಿಸಪಾದವನುಪೂಜಿಸುತೆ ॥
ತಿಳಿದುಸಂಸಾರದಲಿಶಿರಿಯಿಸಿ ಫಲವನುರೆಪಡಕೊಂಡುಸದ್ಗತಿ ।
ಗೆಳಸಿದಳುತಾನತ್ರಲ ಲಿಸಿರತ್ರಪೇಳ್ವೆನನು ॥ ೨೩ ॥
ಗುರುಮಹಾರಾಜಾಧಿರಾಜನ । ಪರಮಕರ್ತನಸೂತ್ರದಿಂದಾ ।
ಗುರುವುಭಕ್ತರೊಳಾಡುತಿರುತಿರೆಸಹಜವಿನೋದದಲಿ ॥
ಧರೆಯೊಳಾಕಾಲಕ್ಕಗೊಂದಲ ವರೆನುಜಲನುಗ್ಗಾಯ್ತುಜನರ್ಕೈ ।
ಸಿರಿಯುವಿಗಹಾಳಾಯ್ತುಹಲಬುವದಾಯ್ತುನಾಡಕಟಾ ॥ ೨೪ ॥
ಹೇಳಲೇನಾಖೂಳಕುಪ್ಸರು । ದಾಳಿಗಾರರುಪುಂಡರೆಲ್ಲರು ।
ಕಾಳರಕ್ಕಸರಂತೆವರ್ಬಿದರವೈರಾಜ್ಯದಲಿ ॥
ಕಾಲಗತಿಯೆನೆಕೊಳೆಮುಸಲಿಗಯ । ಕೇಳುಗೆಲಸವುನಡೆಮದಕ್ಕಟ ।
ಗೋಳಿಡುತೆಮನೆಮೂರುಬಿಟ್ಟೆಓಡದರುನಾಲ್ದೆಸೆಗ ॥ ೨೫ ॥
ಪಾಳೆಗಾರರಹಾವಳಿಗೆಜನ ಜಾಲಗಲಿಬಿಲಿಯಾಯ್ತುಸಿರಿಗರ ।
ಭಾಳುಹಾಳಾದತ್ತುಬಿಲುಳಲಿತ್ತುಬಡಜನವು ॥

ಮೇಲೆಮೇಲಾಸುದ್ದಿಯೊದಗಿತೆ । ದಾಳಿಗಾರರಗಂಡನೆನಿಪದ ।
ಲೇಲಖಾನದಲೇಂಜಂಗನುಬಂದನಾಕ್ಷಣಕೆ ॥ ೩೬ ॥
ಖೂಳರಾಕೊಲೆಸುಲಿಗೆನಿಲ್ಲಿಸಿ ಬಾಳಬದುಕಿನಭೀತಿತಪ್ಪಿಸಿ ।
ಮೇಳವಿಸಿರಾಜ್ಯದಲಿಸುಖಶಾಂತಿಯನುಸ್ಥಿರಪಡಿಸಿ ॥
ಮೂಳರೆಲ್ಲರುಮುರಿಯೆಹಾವಳಿ ಕೇಳದೋಡೆಂಲೇಲಜಂಗದ ।
ಲೇಲಖಾಸವನೂರಸಂಸ್ಥಾನವನುಸ್ಥಾಪಿಸಿದ ॥ ೩೭ ॥
ದಿಲ್ಲಿಪಾಚ್ಛನಬೆಸುಗೆಯಿಂತಾ । ನಿಲ್ಲಿಗೈತಂದುರೆಜನರ್ಕಳಿ ।
ಗೆಲ್ಲರಿಗೆಬಿಡದಭಯವಿತ್ತನುಜಂಗಬಹದೂರ ॥
ಜಿಲ್ಲೆಸಾಸವನೂರಸಂಸ್ಥಿತಿ । ಯಲ್ಲಿಯಾಳ್ವನವಾಬರಿಗೆಲಾ ।
ಬಲ್ಲಿದನುಗಡಮೂಲಪುರುಷನುಬಹುದಯಾಳುಗಡಾ ॥ ೩೮ ॥
ಮುರಿದುಹೋಗಿರೆದಂಗೆಹಾವಳಿ । ನೆರೆನುಜನತಂತನ್ನಬಾಳ್ವೆಯೊ ।
ಳಿರುವರಾದರುಕೇಳರಿತ್ತಣಗುರುವಿಲಾಸವನು ॥
ಗುರುಫಕೀರನುಚನ್ನವೀರೇ । ಶ್ವರನುವಾಸೆ ?ದಲಿನಿಂತೇ ।
ನರಸುರರಿಗನ್ನವನುಕೊಡುವನುಬಹುನಿಧಾನದಲಿ ॥ ೩೯ ॥
ಗುರುಮಹಾಸನ್ನಿಧಿಯಸೇವಾ । ತುರಸುಚಿತ್ತನುಖಾನಗೌಡನ ।
ಪರಮವಂಶಜನಾರನೇತಲೆಯವನುಪುರದಧಿಪಾ ॥
ಧರೆಗೆಕೆಂಚನಗೌಡನೆನಿಸು । ತ್ತಿರಲುಧೈರ್ಯಂಡಜಿವಾಘನೆಂಬಾ ।
ಯರ್ರಕುಲದವರಪಟುಪರಾಕ್ರಮಶಾಲಿಯ್ಕೆಂದಾ ॥ ೪೦ ॥
ಗುರುವೆಪರಶಿವಮೂರ್ತಿಯೇನಿಜ ಚರಣಸುಸಿಜಭಕ್ತನಾನಿಹೆ ।
ನರಿಯಲೀದೇಶಾಯಿದುಮಾನುಂಮಿತ್ರರಾಗಿಹೆವು ॥
ಬರಲಿಮೂಣಲಿಕೀರ್ತಿತಮ್ಮದು ಬಿರುದುಹೊಗಳಿಸಿಸೇವೆಗೈವೆವು ।
ಧರೆಯಗಂಡರಗಂಡನಾನಿಹೆನೆಂದನಾವಾಘಾ ॥ ೪೧ ॥
ಗರವವಿನಿತೇಕಯ್ಯಭಕ್ತನೆ ಗರವದೆ ?ಳ್ಳಿತ್ತಬೇಡೆಲೊ ।
ಮರುಳೆನಮ್ಮವನಲ್ಲನಿಮ್ಮವನಲ್ಲನುದಿಸಾಚ್ಚಾ ॥
ಗುರುವಿನಾಟದಸೂತ್ರಮಾತ್ರದೊ । ಳಿರುವನೊಬ್ಬರಮೇಲೆಮತ್ತೊ ।
ಬ್ಬರದುಕೈಗಡವಾಘಸೀತಿಳಿಯೆಂದನಾಸ್ವಾಮಿ ॥ ೪೨ ॥

ವಾಘನಾಗುರುಪಾದಸೇವಕ । ನಾ ಶ್ರೀಗುರುಚನ್ನವೀರನು ।
ವಾಘನಲಿಹ ಪ್ರೇಮಿಯಾರ್ಗೆ ಬಿಡದೊಳೊಳಹೊರಗೆ ॥
ವಾಘನಿಗೆ ಕಡುವೈರಿಯಾದವ । ನಾಗ ಳ ರಜಪೂತದಳಪತಿ ।
ಶ್ರೀಗುರುವಿಗುರೆಹೇಳಿಕಳಿಸಿದನತುಳಕೋಪದಲಿ ॥ ೪೬ ॥
ಕಾಲನನುನೀವ್ ಕೊಂಕಬೇಡಿರಿ ನಾಳೆನೋಡುವೆಗುರುವನೀವೀ ।
ಕಾಲಕಾವಾಘನನುಹಾಕಿರಿಹೊರಗೆಬಿಡಿರೆಂದಾ ॥
ಕೇಳಶ್ರೀಗುರುವರಫಕೀರನು । ಖೂಳಕೇಳ್ ನೀಕೊಳೆ ಸರಿಗಡ ।
ಕಾಲಕಾಲಗೆನಿನ್ನಭಯವೇನೆಂದುಸೂಚಿಸಿದ ॥ ೪೭ ॥
ಹಿಡಿದುವಾಘನಕೊಲ್ವೆನವನಾ । ಕಡೆಗೆಗುರುವನುಜಡಿವೆನಲ್ಲದೆ ।
ಬಿಡೆನುತಾನೆಂದೆನುತಲಾರಜಪೂತಸರದಾರ ॥
ಮೃಡಫಕೀರನಮೇಲೆ ಕೋಪಿಸು । ತಡಬಡಿಸಿಶಿರಹಚ್ಚಿಗೈದಿನ ।
ನೊಡನೆವತನವನುಸುಟ್ಟನಾಗುರುಸಪಸಿಯುಲ್ಲಿರಲು ॥ ೪೮ ॥
ಅಂದುಮಠವನುಸುಟ್ಟುಬರುವುದ ದಿಂದೆಹೊರಟನುಕರ್ತನವಕ್ಕರೆ ।
ಯೊಂದಿಮುಡಿದನುಘೋರನರಕದಿಬಿದ್ದುಬಳಲಿದನು ॥
ಅಂದಿನಾವಾರ್ತೆಯನುಕೇಳ್ದು । ಬಂಧುರಾತ್ಮಾರಾಮಗುರುವೈ ।
ತಂದುನೀಚನಕೃತಿಗೆನಕ್ಕನುಕೇಳಿರೈಬಿಡದೆ ॥ ೪೯ ॥
ಬಿಡದೆತದ್ಗುರುಕರ್ತನಪ್ಪಣೆ । ವಡೆದುಮವಠನುಕಟ್ಟಿಸಿದನೈ ।
ಗಡಶಿಲಾಮಯಮಠವುಪುಟ್ಟಿತ ದಿವ್ಯರಚನೆಯಲಿ ॥
ಅಡರುವೆರಡಂತಸ್ತುಮೆರೆದರೆ । ಸಡಗರದಿಬಹುಭಸ್ತ್ರವಾಗಿರೆ ।
ಪೊಡವಿಯಲಿಗುರುಮಠವುರಂಜಿಸುದಾಯ್ತುಕಣ್ಮನಕೆ ॥ ೫೦ ॥
ತರತರದಭಿತ್ತಿಗಳವೈಸಿರಿ । ಪರಪರಿಯಕೋಣೆಗಳತನುಸಿರಿ ।
ಯುರುತರದಸಿಂಗರದಚಿತ್ರದಪಟಗಳೋಜೆಯಲಿ ॥
ಅರರೆನೋಲಣಕೆಳಗಣ್ಮೈಸಿರಿ । ಗುರುಪದಾಂಬುಜಭಕ್ತರೈಸಿರಿ ।
ವೆರೆದಶ್ರೀಮಠಮೆರೆವುತಿರುವದುಗುರು ಮಹತ್ವದಲಿ ॥ ೫೧ ॥
ವರಶಿವಪುರದಲ್ಲಿಶ್ರೀಗುರು । ವರನಪದಪದ್ಮದಲಿಶೋಭಿಪ ।
ಪರಮಭಕ್ತರಸೇವಕೇಳಿರಿಗುರುವಿಲಾಸವನು ॥

ಧರಣಿಯಲಿಶಿವಯೋಗದಲಿಗುರು । ನಿರತನಾಗಿಸಮಸ್ತಭಕ್ತರಿ ।
ಗರಹುತಿರುವನುಪರಮಮುಕ್ತಿಯಸಾಜನಾರ್ಗವನು ॥ ೪೯ ॥
ವರಶಿರಃಪುರವಾರ್ಯರೆನಿಸೀ । ವರಿಯಿರಾಧೋಂಡಜಿಯಬಂಟರ ।
ಭರವಭಂಜಿಸಿಲೋಕದಲಿಜಯಶಾಲಿಯೆನಿಸುತಲಿ ।
ಧರೆಗೆಸಾಧೆಯರಿ ನೂಗಲಿಚ್ಚಿಸಿ ಸಿರಿಯಸಂಪದವಡಿದುಗುರುಪದ ।
ಕರಗತೆಂಡನಸ್ವನ್ಯದೊಂದಿಗೆಬಲುಮದಾಂಧಕನು ॥ ೫೦ ॥
ಅವನಶೌರ್ಯವನವನಧೈರ್ಯವ । ನವನಶ್ರದ್ಧೆಯನವನಬುದ್ಧಿಯ ।
ನವನಸೇವೆಯನವನಭಾವವನೀಕ್ಷಿಸುತೆಗುರುವು ॥
ಅವನಕೋಪವನವನಸಾಪವ । ನವನದಾಶೆಯನವನವಾಶೆವ ।
ನವನೊಳಿರಮಂಕಂಡುಮೆಚ್ಚಿಯುಮೆಚ್ಚಿದಹನವಗೆ ॥ ೫೧ ॥
ಬಡಿದುಜನರನುಬಂಟರೆಲ್ಲರ । ಬಡಿದಭೂಪರಕುಲವನೆಲ್ಲವ ।
ಕಡಿದುಪಡೆವೆನುರಾಜಪಟ್ಟವನೆಂದುಧೋಂಡಜಿಯು ॥
ನಡೆದುಕೊಳ್ಳುತ್ತಿರಲುಶ್ರೀಗುರು । ಪ್ರೊಡನೆತಿಳಿದಾತಂಗೆನಗೆಯಲಿ ।
ನುಡಿದನೆಲೆಕಲಿತವಪರಾಕ್ರಮವೆನಗೆತೋರೆಂದಾ ॥ ೫೨ ॥
ಅಂದಮಾತನುಕೇಳ್ದುಧೋಂಡಜಿ ಯಂದನಾಗುರುಪದಕೆನಗೆಯಲಿ ।
ಚಂದವೇಗುರುತಾವುತವ ಗೀನುಡಿಯುರಂಜಕವೆ ॥
ಅಂಧವಾಗಿಹಮಠದೊಳಸೆವುದು । ವಂದಿಸುವಸದ್ಭಕ್ತಶರಣರ ।
ವೃಂದಕಾಶೀರ್ವಾದಕೊಡುವದುತಮ್ಮಕೃತಿಯೆಂದಾ ॥ ೫೩ ॥
ಛಲರೆಭಕ್ತನೆನಿನ್ನಮಾರ್ನುಡಿ । ಗಳಿಗೆಬೆಲೆಯಿಲ್ಲವೆಮುನೀಸೇ ।
ಕಲಿಕಸಾಕಲಿಯುಗಕೆನೀನೇಕಲಿಕಸಾಯೆನುತಾ ॥
ಸಲಿಗೆಸಲುವದೆನಿನಗೆನಿನ್ನಯ । ಕಲಿತನದೆಳಿಂದೆನಗೆಸಂಶಯ ।
ಕಲಿತುಕೊಂಡಿನೆತೋರಿಸೆನಗಿನ್ನೆಂದನಾಸ್ವಾಮಿ ॥ ೫೪ ॥
ಗುರುವಿಗೊದಗಿದಸಂಶಯವಪರಿ । ಹರಿಸದಿರುವೆನೆಚಿಂತೆಯೇತಕೆ ।
ಗುರುವೆಬನ್ನಿರಿಸಿದ್ಧರಾಗಿರೆಂದನಾವಾಘಾ ॥
ಗುರುವುನೊದ್ದನಿಳೆಗೆಭಕ್ತರ । ಕರುಣವೆಮ್ಮೊಳಗಿರುವುದದುನಿ ।
ಸ್ಫುರಣವಾದೊಡದಿಲ್ಲಸಂಶಯವೆಂದನಾಸ್ವಾಮಿ ॥ ೫೫ ॥

ತನುಮದನಭುಜಬಲದಬಗ್ಗನು । ಮನದಹಂಕಾರದಲಿ ಧೋಂಡಜಿ ।
ವಿನಮ್ರಿತ್ರಂತಾನಾಗಿನಿಂದನು ಸಮರಕಣಿಯಾಗಿ ॥
ಅನುಪಮನುಗುರುವರಫಕೀರನು ಚಿನುಮಯಾತ್ಮನುಸರ್ವಶಕ್ತನು ।
ಮನದಹವಣಿಕೆಯರಿದುಬಾರೆಲೊಬಾರೊನೋಡೆಂದಾ ॥ ೫೬ ॥
ಸರಸವೇಸಮ್ಮತವೆಸದ್ಗುರು । ವರನೆಬವರದಭರವುಭಕ್ತನ ।
ಬರವಬಯಸುವ ಚಿತವೇತಮಗೆಂದಧೋಂಡಜಿಯು ॥
ಸರಸಭಕ್ತನೆತಿಳಿದು ಕೋಗುರು ಗೆರಗುಕಲಿಗಳಗಂಡನೀನ್ಯೆ ।
ಬರಿದೆಬಣ್ಣಿಪುದೊಳತೆನಿನಗೀಗುರುವೃಸರಿಯುಹನೆ ॥ ೫೭ ॥
ಎಂದಗುರುವಿನುಡಿಗೆಧೋಂಡಜಿ । ಯೆಂದನ್ಯೆನಸುನಗುತೆತವನ್ಮೊಳ ।
ಗಿಂದುಕಲಿತನನೋಡಲಿಕ್ಕಾಂಸಿದ್ಧನಾಗಿರುವೆ ॥
ನಿಂಮನೋಡಲಿವಂಬಿಯೆಲ್ಲವು । ಕಂಮಕುಂದದೆನಿನಗೆಮೊದಲಾ ।
ನೆಂದಿಗುಂಗುರುವರಫಕೀರನುಸಿದ್ಧನಿ ನೆಂದಾ ॥ ೫೮ ॥
ಗುರುವಿನಂತೆಯೆನುಡಿದುಧೋಂಡಜಿ । ಯೊರೆಯಖಡ್ಗವತೆಗೆದುಪಿಡಿದಾ ।
ತುರಿಪತುರಗವನೇರಿಹಿಡಿದನುಡಾಲಡೌಲಿನಲಿ ॥
ಕರೆದನಕ್ಕಟಗುರುವನಾಗಳೆ । ಚರಣದನುವೂನವನುಸಲೆಪರಿ ।
ಹರಿಪೆನೆಂದೆನುತವನುಹುಟ್ಯಫಕೀರಗೆದುರಾದ ॥ ೫೯ ॥
ಹತ್ತಿದನುಪಟುಗತಿಯತೇಜಿಯು । ನೊತ್ತಿಖಡ್ಗವಪಿಡಿದುಡಾಲ್ಪಟೆ ।
ಯೆತ್ತಿಸ್ವಾಮಿಫಕೀರನ್ಯೆದಿದನವನಿಗೆದುರಾಗಿ ॥
ಮತ್ತನಜಮುದುತನ್ನಸೊಂಡಿಲ ವೆತ್ತಿಸಿಂಹನಕೆಣಕಿದಂತಿರೆ ।
ಕತ್ತಿಗ್ಯೆತಿರುಹುತ್ತೆಧೋಂಡಜಿಗುರುವನಂಜಿಸಿದ ॥ ೬೦ ॥
ಸುತ್ತುಮುತ್ತಲುಬಳಸಿಬಹುಜನ । ಚಿತ್ರವಿಟ್ಟರೆಗುರುವಿನಾಟ ।
ಕ್ಕೆತ್ತಕೇಸರಿಯೆತ್ತಕರಿಗಡಲೋಕದೊಳಗಿನ್ನು ॥
ಎತ್ತಭೇಗೆಯದೆತ್ತಕಾಳ್ಮರ । ವೆತ್ತಸುರಪತಿಯೆತ್ತಗಿರಿತಾ ।
ನೆತ್ತಭಾಸ್ಕರನೆತ್ತಕಳ್ತಲೆಯೆಂಬಪ್ರೋಲೆಸಿಸೆ ॥ ೬೧ ॥
ನೆರವಿಕಂಡುದೊ ಕಾಣದಿರ್ದುದೊ । ಸರಸಸಮರದಜಾಣ್ಮೆಯನುಗಡ ।
ಗುರುವಿನೆದುರಿಲಿಬಿದ್ದನಕಟಾಧೋಂಡಜೀವ್ರಾಫ ॥

ಅರರದೇಹದಿರುಧಿರಧಾರೆಯು । ಹರಿಯೆಕಂಡಾಸ್ವಾಮಿಕರುಣಿಸಿ ।
ಕರವಹಿಡಿದೆಬ್ಬಿಸುತೆನ್ನೈದಡವಿಡನುಭಕ್ತನನು ॥ ೬೨ ॥
ಗುರುವಿನಾಟವಕಂಡುಧೋಂಡಜಿ । ಗುರುಪದಾಬ್ಜಕ್ಕೆರಗಿತನ್ನೊಳು।
ಗುರುಮಹತ್ವವನಂಬಿಭಯದತಿಭಕ್ತಿಮಯನಾಗೆ ।
ಗುರುವುಕರುಣಿಸುತೆಲ್ಲಥಾಯವ । ನೊರಸಿನೆಟ್ಟಗೆವೂಡಿನುಡಿದನು ।
ಸರಕಲೀಂದ್ರನೆನಮ್ಮಕೂಡಿರುಮಠಕೆನಡೆಯೆಂದಾ ॥ ೬೩ ॥
ಗುರುವಿನಪ್ಪಣೆಯೊದೊಡೀಪರಿ । ಯಿರುವೆನ್ನೈಮಠಪಲ್ಲಿಕೋಟೆಯೊ ।
ಳಿರುವೆನೆಂದಾವಾಘಧೋಂಡಜಿಬಂದನೈಮಠಕೆ ॥
ಗುರುಕುಲೋತ್ತಮರೆಲ್ಲಕೇಳಿರಿ । ಗುರುಸಮರ್ಥಗೆಭಕ್ತರಲಿನಿಜ ।
ಕರುಣವೆನಿತೋಯೆಂದುನುಡಿಯುವದಾಯ್ತುಪುರಜನವು ॥ ೬೪ ॥
ಗುರುವುಧೋಂಡಜಿಯಲ್ಲಿಪ್ರೀತಿಯ । ನಿರಿಸೆವೂಠದಲಿನಿಂತನಾತನು ।
ಗುರುಸುಭಕ್ತರೆಮುಂದೆಕೇಳಿರಿಗುರುವಿಲಾಸವನು ॥
ಧೊರೆಗೆಧೋಂಡಜಿಗಾಗಳಾಶ್ರೀ । ಗುರುವಿನಿಂಕೆಳೆತನವುಕೂಡಿರೆ ।
ಮೆರೆವರೀರ್ವರುಸೈನ್ಯದೊಂದಿಗೆರಿಪುಭಯಂಕರರು ॥ ೬೫ ॥
ಗುರುವಿನೆಡೆಯಲಿಬಂಟರೀರ್ವರು । ಹರುಷದಲಿನಿಷ್ಠೆಯಲಿನಿಂತಾ ।
ಗುರುಫಕೀರನಮೂಲಪೀಠವಪೂಜಿಸುತ್ತಿಹರು ॥
ಗುರುಪದಾಜ್ಞಾಂಕಿತರುಲೌಕಿಕ । ದುರಿತದೂರರುವ್ರಾಣಿವೂತ್ರಕೆ ।
ಕರುಣಿಗಳುಸ್ಯೆಯೆನಿಸುತಿರುವರುಕೇಳಿರಿನ್ನಿತ್ತ ॥ ೬೬ ॥
ಗುರುಮಹತ್ವವತೋರಿಜಗದಲಿ । ಗುರುತುಕೊಟ್ಟವನಿವರಭೂಸುರ ।
ತರದಬಿರುದಾವಳಿಗಳಂಕ್ಯೆಕೊಂಡಮುದಿವಾಬ್ಬಾ ॥
ಧರಣಿಗುಪಕೃತಿಗೈಯಲೋಸುಗ । ಗುರುರಥೋತ್ಸವಜಾತ್ರೆಗೈಸುವ ।
ನರಿಯರಾಕಾಲದಲಿಪಾಚ್ಛನಗಾಧಲೀಲೆಯನು ॥ ೬೭ ॥
ಧರೆಗೆಮಹಿಮೆಯತೋರಿಭಕ್ತೋ । ತ್ಕರಮನಾಳ್ವಫಕೀರಸ್ವಾಮಿಯ ।
ಮೆರೆವಜಾತ್ರೆಯೊಳೆಸೆದುಸಾಗುವದಿವ್ಯತರರಥವು ॥
ನೆರವಿಗಚ್ಚರಿಯೊಗೆಸಾಗದೆ । ಕುರುಹಿನಾಟಕೆಸುಮ್ಮನಿರ್ದುದು ।
ಮೆರಗುವಟ್ಟುಡುಪರಿಕೆಕರ್ತನಲೀಲೆಯೇವೇಳ್ವೆ ॥ ೬೮ ॥

ಭಕ್ತಿಯುಳ್ಳಸಶಕ್ತರೆಲ್ಲರು । ಭಕ್ತರೈನೂರೆರಗಿಸ್ವಾಮಿಗೆ ।
ಶಕ್ತಿಯಿಂದೆಳೆದೆಳೆದುಸೈವೆರಗಾಗಿಸ್ತೈತಿರಲು ॥
ಮುಕ್ತಿದಾಯಕನಾದಕರ್ತನ । ಶಕ್ತಿಯುಳ್ಳರುರಥವುಮೂನವ ।
ಶಕ್ತಿಗೇನಡಿಯಿಡದೆಸಾಗದೆನಿಂತುದೆಡೆವಿಡಿದು ॥ ೬೯ ॥
ಬಿಟ್ಟುದೈವುರಗಾಳಿಯೊಮ್ಮೆಲೆ । ಹುಟ್ಟತೈಬಿರುಗಾಳಭಕ್ರನೆ ।
ಸುಟ್ಟುದುದುಕುಳಿತವರಸೊಂಟರಗಾಳಿನಾಲ್ದೆಸೆಗೆ ॥
ಕೆಟ್ಟುಗಲಿಬಿಲಿಯೂಯ್ತುಜನದ । ಕೈಕಟ್ಟಕಾಲ್ಸೆಗೆದತ್ತುಶ್ರೀರಥ ।
ವಷ್ಪರಲಿಕೆಡೆದತ್ತುಕಲೆಕೆಳಗಾಗಿಭೂಮಿಯಲಿ ॥ ೭೦ ॥
ಧರೆಯೊಳಾಡುತ್ತಿರುವಭಕ್ತರೆ । ಗುರುವಿನಾಟವನರಿಕುಕೊಳ್ಳಿರಿ ।
ಧರಣಿಯಲಿಂಥತಿರುಗಿಗರ್ರನೆಬಿದ್ದವೂತ್ರದಲಿ ॥
ಗುರುಫಕೀರನುಚನ್ನವೀರೇ । ಶ್ವರನುಕರ್ತನೊಳಾಡಿತಿಳಿದನು ।
ಪರಮಭಕ್ತರಿಗೊಲಿದುಬೇಳ್ದನುಕಾಲಸೂಚನೆಯೂ ॥ ೭೧ ॥
ಗುರುವುಹಮ್ಮಿಗಿಯಿಂದಭೂಪನ । ಕರಿಸಿಕೊಂಡನುಬಹಳಗುಪ್ತದೊ ।
ಳರುಪಿದನುಗಡಸೃಷ್ಟಿಕರ್ತನಕುರುಹಿನಂದವನು ॥
ಅರರೆಮುಂದಿನಗತಿಯನಾರಾ । ಜರವಿನಾಶವುವೃದ್ಧಿಸಂಗತಿ ।
ಯಿರವನರುಹಿದನುಗುರುಫಕೀರನುಭಕ್ತಕರುಣಾಳು ॥ ೭೨ ॥
ಪರಮಭಕ್ತನೆಭೂಪತಿಯೆಕೇ । ಳೆಸಾರುಷವ್ರೊಂದಕೆಪೇಶ್ವೆಯರುತ ।
ಮ್ಮೆರುತರದರಾಜ್ಯವನುಕಳೆದಪರಾಂಗ್ಲದಾಳ್ದಪರು ॥
ಗುರುವಿನಪ್ಪಣೆಯಾಯ್ತುಮುಂದಕೆ । ನರತನುವನಾಂಬಿಡುವೆನೆಂದಿಗೆ ।
ಶರನಿಶಾನಿಯುತಾನೆಸುಡುವದುನಿಮ್ಮಹಮ್ಮಿಗೆಯ ॥ ೭೩ ॥
ಶರನಿಶಾನಿಯುಸುಟ್ಟಮೇಲೊಂ । ದೊರುಷಕಾಜ್ಞೆಯುನಿನಗೆನಿಜವೆಂ ।
ದೊರೆವನಾಗುರುಭಕ್ತನಲಿಶಿವಸೂತ್ರವೆಂತಿಹುದೋ ॥
ಕುರುಹುದೋರದತೆರದಿಸಾಜವು । ಧರೆಯೊಳಾದುದುಸರ್ವವೆಂದೆನೆ ।
ಗುರುಕರುಣಾಗುರುನಾಥನಲ್ಲನುನಲ್ಲವೇಜಗಕೆ ॥ ೭೪ ॥
ಭೊರೆಯುವಾಘನುಕೂಡಿಕೊಂಡೇ । ವರಶಿರಃಪುರದಲ್ಲಿಕೋಟೆಯೊ ।
ಳಿರುವವರವರಾವಾರ್ತೆಪಬಿರ್ತುಪೇಶ್ವೆಯರಕಡೆಗೆ ॥

ಗುರುವಿನೋದವನರಿತಭಕ್ತರೆ । ಹರುಷದಿಂದಾಲಿಸಿರಿಸುಕಥಾಂ ।
ತರವನಾಪ್ರಭುದೇವರಾಟವ ತಿಳಿಯದೀಜನಕೆ ॥ ೭೫ ॥
ತಿಳಿದುವೇಶ್ಯೆಯುವರುಜಿಸಿರೆ । ಮುಳಿದುಪಟವರ್ಧನರುಬಂದರು ।
ದಳವೆರಸಿಮುತ್ತಿದರುಕೋಟೆಯಬಿಡದೆನಾಲ್ದೆಸೆಗೆ ॥
ಬಳಗೆಥೋಂಡಜಿಸ್ವಾಮಿಯಾಜ್ಞಾ । ಬಲದೊಳೆಸೆವುತ್ತೋರ್ವನಿರ್ದನು ।
ತಿಳಿಯದಾದುದುಜಗದಗುರುಲೀಲಾಚಮತ್ಕೃತಿಯು ॥ ೭೬ ॥
ನೆಗೆದುಕೋಟೆಯನೇರಿಕೋಪದಿ ಜಿಗಿದುಬಂಧಿಸಿಬಿಡದೆಲ್ಲರ ।
ನಗಲದೊಯ್ದುಮಿರಜಿಕೋಟೆಯೊಳಿಟ್ಟರಸಿಬಂದಸು ॥
ನಿಗಮಗೋಚರಗುರುವುಭಕ್ತರ । ನಗಲದಿರ್ದನುಮುಗುಳುನಗೆಯೊಗು ।
ಮಿಗೆಯಹರುಷದಿನಡಿನವರಗೆಚಿಂತೆಬಿಡಿರೆನುತಾ ॥ ೭೭ ॥
ಮಿರಜಿಕೋಟೆಯೊಳಿರುತಲಾಗುರು । ವರಫಕೀರನುಕಂಡುಕಾಣಿಸ ।
ದಿರುವನೈಕೆಲವರಿಗೆತೋರ್ದುದುಗುವನುತತ್‌ಕ್ಷಣಕೆ ॥
ಪುರದಕೇರಿಗಳಲ್ಲಿಜನರಿಗೆ । ದರುಶನಂಗೊಡುತಲ್ಲಿಸದ್ಗುರು
ವರನುಬೈಲಿಗೆಬೈಲೆನಿಸುವನಾ ನಡಿಗಡಿಗೆ ॥ ೭೮ ॥
ಕರೆವಗೋಕುಲಪೆರ್ಚಿದುದುತಾ । ತುರುಗಗಜಕುಲಪೆರ್ಚಿದುದಭೂ
ಸಿರಿಯುಪೆರ್ಚಿತುಪರಮಪಟವರ್ಧನರರಾಜ್ಯದಲಿ ॥
ಸಿರಿಯುಪೆರ್ಚಿತುಕಾ ಭ ರದ । ಪರಿ [illegible] ನೆರ್ಚಿತುಸೌಖ್ಯಹೆಚ್ಚಿತು ।
ಗುರುಕೃಪಾಫಲವೆಂದುನುಡಿಯುವವಾಯ್ತುನಾಡಜನಾ ॥ ೭೯ ॥
ಪಡೆಯುಪೆಂಪಿನಲಂಪುಪಡೆದುದು । ಪೊಡೆದುಪಗೆಗಳಪಡೆದಜಸದಿಂ ।
ದೊಡನೆಸದಪಿಂನಾಡುಜೇಂಗೊಡದಂತೆಸೊಗಯಿಸಿತು ॥
ಅಡಸಿದುದುಪ್ರಜೆಗಳಿಗೆಸೌಖ್ಯವು । ಕಡುಸೊಬಗಿನಲಿಮೆರೆದುದಾಪೊಳ ।
ಲೊಡೆಯರಾರೋಗ್ಯದಲಿಶೋಭಿಪಂದದರವಸಿಯಲಿ ॥ ೮೦ ॥
ನೃಪತಿನೋಡಿದನೊಂದುಕನಸಿನೊ । ಳಪರಿಮಿತಸುಪ್ರಭೆಯೊಳೆಸೆವುವ
ಸಪರಿವಾರದಶಕ್ತಿದೇವಿಯೊಳಿರುವಗುರುವರನ ॥
ಸಪನವರಿದೇಳ್ದೊಡನೆಗುಣಿತ । ನೃಪತಿತನ್ನೊಳುತಿಳಿದನಾಗುರು ।
ಕೃಪೆಯನಾಗುರುವರನಲೀಲಾನಿಜಮಹತ್ವವನು ॥ ೮೧ ॥

ಗುರುವಿನರ್ಗಳಲೀಲೆಯನುಶ್ರೀ । ಗುರುವಿನ ಪವಮಹಿಮೆಯನುಕಂ ।
ಡರಿದುಪಟವರ್ಧನರುಭಕ್ತಿಯನೊಂದಿಸಂಭ್ರಮದಿ ॥
ಸೆರೆಯೊಳಿರುವವರೆಲ್ಲರಂತೆಗೆ ದರವಿಸಿ ಗುರುದತ್ತನೆಂಗೇ
ಗುರುವರನುಬಹುತರದವಾನೆನ್ಸ್ಯೇತ್ಸವನೆಕರೆತಂದು ॥ ೮೨ ॥
ಅರಮನೆಯೊಳುತ್ಸವದೆಪೂಜಿಸಿ । ಗುರು ಪದಾಬ್ಜಕ್ಕಿತ್ತುಕಾಣ್ಕೆಯ ।
ನಿರದೆಪ್ಪಣೆಗೊಟ್ಟವರುತ್ಸವದೆಬಲಸಹಿತ ॥
ಮರಿಯಲಾಗಗುರುವನಿವಮ್ಕವ । ಗುರುಫಕೀರನ ತಿಳಿಯಿರೆಂದೇ ।
ಹರಸಿಹೊರಟನುಶ್ರೀಫಕೀರೇಶ್ವರನು ಮಠವೆಡೆಗೆ ॥ ೮೩ ॥
ವಿರಜಿಯುಲಿತದ್ಗುರುಫಕೀರೇ । ಶ್ವರನ ಶಿವಲೀಲೆಯನುಲೋಕ ।
ಕ್ಕಗುಹಿಲುಗುರುಕೀರ್ತಿಪಸರಿಸಿದತ್ತುಪ್ರೌಢಪಯಲಿ ॥
ಹರುಷದಿನಿಷ್ಠೆಯಲಿಧೆಂಡಜಿ ಚರಣಸೇವಾಸಕ್ತನಾಗಿರೆ ।
ಗುರುದಿಗಂಬರಸ್ವಾಮಿಭಿಜಯಂಗೈದನೈವ ಠಕೆ ॥ ೮೪ ॥
ಬರುವಬಡವರನೆತ್ತಿಕರುಣದೆ । ಸಿರಿಗರಂಬಿಡಜೊತ್ತಿಮೊಯದೆ ।
ಪರಮಭಕ್ತರನಗಲದಲೆದಾಸೋಗಸಾಗಿಸುತೆ ॥
ಗುರುಫಕೀರೇಶ್ವರನುಮಠದೊಳ । ಗಿತೆಜನೆನೆದಲ್ಲಿ ಬೆಳಗುತೆ ।
ಗುರ ವೃದ್ದೊಡ್ಡನೆನಿಸುತಾಡುವನಾದನಡಿಗಡಿಗೆ ॥ ೮೫ ॥
ಅರಿದಲಾಗುರುಲೀಲೆಕೇಳಿರಿ । ಮೆರೆವಬಂಕಾಪುರದಸೀಮೆಯೊ ।
ಳಿರುವಭೆಳವಲಕೊಪ್ಪದಲಿಲಂಡೆತ್ತಿನವರಸಿಪ ॥
ಸಿರಿಯುಮನೆತನದವರುಮಕ್ಕಳ । ಸಿರಿಯನಾಶಿಸಿಬಂದುಕರ್ತರಂ
ಗೆರಗಿಸ್ವಾಮಿಯಬೇಡಿಕೊಂಡರುಹಳವಿಸಯದಲಿ ॥ ೮೬ ॥
ಗುರ ಪೆಕರುಣಿಸುಕೊಡುಸುಪುತ್ರರ । ವರತಚೆಕ್ಕಟ್ಟಲನುಗನಕೆಡುವೆವು ।
ಚರಣದಾಶೀರ್ವಾದವಾಲಿಯೆಂದರಾಜನರು ।
ಗುರು ವರ್ಧನನಿಮಗೆಕೊಡುವ ನಮ್ಮಗದುಯೆಂದುಪೇಳ್ದ
ಗುರುಪ್ರಸಾದವನಿತ್ತುಕಳುಹಿದನಾಫಕೀರೆಶ ॥ ೮೭ ॥
ಅರಿಯಿರ್ಕೆಸ್ಸೀನೆಲ್ಲಭರು । ಕಾನೆಸಿತೆ ನುಗುರುವಿಗೆ
ಕರ್ಣ್ಯವಾಯ್ತುಜನಕೆಪರಸು ॥

ಇರದಲನುಕೂಲಿಸಿಯೆಸಂತತಿ । ಸಿಗಿಯುಬೆರ್ಚೆರೆವಚನದಂತಾ ।
ಪರಮಭಕ್ತರಾತಂದುನೀಡಿದರಾಫಕೀರನಿಗೆ ॥ ೮೮ ॥
ಧರೆಯೊಳಾಮರಿದೇವರಿಗೆಗುರು । ವರಕಟಾಕ್ಷವನಿರಿಸಿಕರೆದನು ।
ಪರಿಕಿಸಲುನೀಸಿದ್ಧರಾಮನುನಿನ್ನಪೆಸರೆಂದ ॥
ಪರಶಿವನತತ್ವಾಂಗದಂಗವ । ನರುಪಿಸರ್ವಂಬ್ರಹ್ಮವೆಂದೇ ।
ಗುರುಸ್ವಯಂಪ್ರಭೆಗೊಟ್ಟುಬೆಳಗುವನಾದನಾತನಲಿ ॥ ೮೯ ॥
ಎಲೆಪ್ರಭಕ್ತರೆಜನರೆನೀವ್ಸಲೆ । ತಿಳಿಯಿರೀನರಗುರಿಗಳಾಟದ ।
ಹೊಲಬದಲ್ಲವುಶಿವಗೆಸರಿಮಿಗಿಲಾದಲೀಲೆಯಿದು ॥
ಖಳರಖುಲ್ಲರಖಳರೆಲ್ಲರ । ತುಳಿವುತಾಡುತೆಭೂಮಿಭಾರವ ।
ನಿಳುಹುತಲಿಭಕ್ತರಿಗೆಸದ್ಗತಿಮುಕ್ತಿಕೊಂದಿಪುದು ॥ ೯೦ ॥
ಗುರುನಿರಂಜನಚನ್ನವೀರನು । ಮರಿಯೆನಿಸಿದಾಸಿದ್ಧರಾಮಗೆ ।
ಗುರುಪ್ರಸಾದವಕೊಡುನಿರಂಜನನಾಗುನೀನೆನಲು ॥
ಪರಮಗುರುವನುಕರ್ತನನುತಾ । ನೆರಗಿದಾಸೋಗದಲಿನಿಂದನು ।
ಧರೆಗೆಬಲುಕಿರಿದಾಗಿವರ್ತಿಪನಾದನಾರಾವೂ ॥ ೯೧ ॥
ನಾನುನೀನೆಂಬುಭಯಭೇದವ । ನಾನದಾಮರಿಸಿದ್ಧರಾಮನು ।
ನ್ಯೂನವಿಲ್ಲದೆಗುರುಪ್ರಸಾದವನೀವನೆಲ್ಲರಿಗೆ ॥
ಆನಿರಂಜನಗುರುಪ್ರಸಾದದೊ । ಳೇನುಪಾಕದಿಭೇದಗೈಯದೆ ।
ಸಾನುರಾಗದಿತೃಪ್ತಿಬಡಿಸುವನಾದನಡಿಗಡಿಗೆ ॥ ೯೨ ॥
ಪರಮಭಕ್ತರಕೇಳಿರಾಗುರು । ವರನುಭಕ್ತರನೆತ್ತಿಸಲಹು ।
ತ್ರಿರುವಸಮಯಕೆಕರ್ತನಾಜ್ಞಾಪಿಸಿ-ನಾಗುರುಗೆ ॥
ವರದಿಗಂಬರನಾಟವರಿದಾ । ಮರಿಗೆಸನ್ಮತಸಿದ್ಧರಾಮಗೆ ।
ಹರಸುತಾಶ್ರಮಕೊಟ್ಟನಾಗುರುಚನ್ನವೀರೇಶ ॥ ೯೩ ॥
ಮರಿಗೆಪಟ್ಟವನಿತ್ತುಸದ್ಗುರು । ವರನುಕರ್ತನಪಾದದಲಿಗುರಿ ।
ಯಿರಿಸಿದಿನವೂನವನುನೋಡುವನಾದನಾತ್ಮದಲಿ ॥
ಗುರುಮಹೋನ್ನತನಾಜ್ಞೆಯಿಂದಾ । ನರಶರೀರವನುಳಿದುಸ್ವಾಮಿಯು ।
ಪರಮಪರಶಿವಲಿಂಗದಲಿತಾಬೆರೆದನೈಬಳಿಕಾ ॥ ೯೪ ॥

ನೆರೆದಜಂಗುಳಿದೈವದಲಿಬಹು ಸರಸವಾದ್ಯಂಗಳಲಿಮಂಗಲ।
ಕರದಘೋಷಂಗಳಲಿಸ.ವಿಧಾನಂಗ.ಳೋಜೆಯಲಿ॥
ಗುರುಮಹೋತ್ಸವವೂಯ್ತುಸಾಂಬನು। ವರರಮೇಶವಿರಂಚಿಯೆಲ್ಲರು।
ನೆರೆದುನೋಡುವರಾವರಲ್ಲಮುನೀವಿಲಾಸವನು ॥ ೯೫ ॥
ಗುರುಮಹತ್ವದಸಾರವಿಂತಿದು। ಗುರುಮಹತ್ವಮನಂತಮಿಪ್ಪುದು।
ಗುರುಮಹತ್ವವನರಿದುಪೇಳುವರಾರುಲೋಕದಲಿ॥
ಗುರುಫಕೀರೇಶ್ವರನುಗಂಗಾ। ಧರನಮುಖದಿಂಪೇಳಿಸಿದನೀ॥
ಕರದಿಮುಗಿದುದುಸಂಧಿಯಿಪ್ಪತ್ತನೆಯದೆಂದೆನಿಸಿ ॥ ೪೪ ॥

॥ಇತಿ ಶ್ರೀ ಶಿವಪುರಸನ್ನುತ ಶರಣ್ಯಸಿಂಹಾಸನ ಶ್ರೀ ಭಗವಾನ್ವಿಭುವಾತ್ಮೀಯ। ಗಂಗನಿಂ ಪೇಳಿಸಿದ ಪೌರಾಣಾದೀಳ್ ಇಪ್ಪತ್ತನೆಯ ಸಂಧಿ ಸಮಾಪ್ತಮಿಂತು।
೧೩೮೬ ಪದ್ಯಂಗಳಿಗೆ ಮಂಗಲವಹಾಶಿವ ಶ್ರೀ ಶ್ರೀ ಶ್ರೀ ಶ್ರೀ

## ೨೧ನೇ ಸಂಧಿಯು.

### ೪ನೇಪಟ್ಟ—ಎರಡನೆಯ ಸಿದ್ಧರಾಮಸ್ವಾಮಿಗಳು.

ಸೂಚನೆ—
ಗುರುಮಹೋನ್ನತನಾದಕರ್ತನು। ಮೆರಿಯೆನಿಪಶ್ರೀಸಿದ್ಧರಾಮೇ।
ಶ್ವರನನಾಮದೊಳೆಸೆವನಾಡನುಮರಳಿಮರ್ತ್ಯದಲಿ ॥ ಪಲ್ಲ ॥
ಪರಮಗುರುವಿನಗುರುಫಕೀರನ। ವರಕರಾಂಭೋಜಾತಜಾತನು।
ಹರಿಗೆಸರಿಮಿಗಿಲೆನಿಸಿಲೀಲೆಯನಾಡಹತ್ತಿದನು॥
ಗುರುದಯಾನಿಧಿಸಿದ್ಧರಾಮೇ। ಶ್ವರನುಭಕ್ತರೊಳಾಡಿದಾಟವ।
ನರಿದುಪೇಳಲ್ಕಳವೆವಾಮರರರಿವರೇನದನು ॥ ೧ ॥
ಶಕ್ತಿದೇವಿಯೆತನಗೆತಾಯೆನೆ। ಭಕ್ತವತ್ಸಲನೆನಿಪಗುರುಸುವಿ।
ರಕ್ತನೀಲೋಕದಲಿಲೀಲಾಮೂರ್ತಿಯೆನಿಸುತಲಿ॥
ಮುಕ್ತಿಮಾರ್ಗವನರುಪುತಾಡುತೆ। ಭಕ್ತರಲಿಭೂಲೋಕಹಿತಕಾ।
ಸಕ್ತನಾಗಿಹನೇನುಹೇಳಲಿಗುರುವಿನುಪಕೃತಿಯ ॥ ೨ ॥

ಅತ್ತಸಿರಿಪುರದಲ್ಲಿನರಪತಿ । ದತ್ತಪುತ್ರನುಖಾನಗೌಡನು ।
ಸ್ತುತ್ಯಪೂರ್ವಜರಂತೆಸೇವಿಸುತಿಹನುಗುರುಪದವ ॥
ಮತ್ತೆದಾಸೋಗಕ್ಕೆಭಕ್ತಿನಿ । ವಿತ್ತನುತಿಸೌಲಭ್ಯನೆನೆಜನ ।
ದುತ್ತಮಸಹಾಯವನುಮಾಡಲ್ಕೆಂದುಮನನಂದಾ ॥ ೩ ॥
ಎತ್ತಿಗೊಂದಕ್ಕಿರಡುಸೇರಾ । ಳೆತ್ತುವದುಗಡರೈತಜನರಿಂ ।
ದೆತ್ತಿದಾಸೋಗಕ್ಕಸಲಿಸುವದೆಂದುನೇಮಿಸಿದ ॥
ಮತ್ತುಮೆಲ್ಲಾಗ್ರಾಮಗಳಿಗೊರೆ । ದೊತ್ತಿಕಬ್ಬಳಿಗೈದನೈಕಾ ।
ಳೆತ್ತಿಬಸವನ ... ॥ ೪ ॥
ವರ್ಷಕೊಂದಾವರ್ತಿಶ್ರೀಗುರು । ವರಫಕೀರನುಸ್ವಾಮಿ ದೇಶಾಂ ।
ತರದಿಸಂಚಾರವನುಮಾಡುವನೇಮನಂದದಲಿ ॥
ಬೆರದುಧರಿಯಿಸಿಸಿದ್ಧರಾಮೇ ಶ್ವರನ ಕರ್ತೃಗೆರಗುತುತ್ಸವ ।
ವೆರಸಿಹೊರಟನುತನ್ನಲೀಲಾನಂದಲಹರಿಯಲಿ ॥ ೫ ॥
ಎಲವೊಭಕ್ತರೆಕೇಳಿರೈಸಲೆ । ಚಲಿಸಿಸವನೂರೆಂಬ ಗ್ರಾಮಕೆ ।
ಒಲಿದುಭಕ್ತಿಯನೋಡಲೆಳಸಿದನಾಮಹಾತ್ಮಕನು ॥
ತಿಳಿದುಶೆಟ್ಟರುಧನಿಕರಾದಿ । ರ್ಮಲಿನಭಾವರುಭಕ್ತರೆಲ್ಲರು
ನಲಿದೆರಗುತಿದಿಗೊಂಡರಾಗುರುಸಿದ್ಧರಾಮನನು ॥ ೬ ॥
ಗುರುವಿಗಾಗ್ರಮೆನ್ನವಿಸಿದಶ್ರೀ ಕರನಬೀಡಾರದಲಿಶ್ರೀಗುರು ।
ವರನನಿಲಿಸಿದರಲ್ಲಿಸೇವಾಸೂತ್ರವಿರಿಸಿದರು ॥
ತರತರದಬಿನ್ನಾಮಕಾಣಿಕೆಯು । ಪರಿ ... ವೆಇಳ್ಳಿಕ್ಕಾಗಿನಡೆವಿತೆ ।
ಗುರುಮಹೋತ್ಸವವೆಸಗಿತೆಲ್ಲೆಡೆಯಲ್ಲಿಗ್ರಾಮದಲಿ ॥ ೭ ॥
ಗುರುಜಗದ್ಗುರುವರಫಕೀರನು । ಗುರುಕಣ್ಣಾಜನಕೆಂದುಸಾರು ।
ತ್ತಿರುವನಾಬಟ್ಟಂಗಿಗಳುಗುರುಪಾದಪದ್ಮದಲಿ ॥
ಗುರುಜಗದ್ಗುರುಸ್ವಾಮಿಯಿವನು । ಗುರುಕಣ್ಣಾಜನಕೆಂದುಸಾರು ।
ತ್ತಿರುವವಾಕಾಳಿಗಳುಬಿರುದಾವಳಿಯನುಗ್ಗಡಿಸಿ ॥ ೮ ॥
ಅವಧೂತಶಿವಮಹನೀಯನೆನಿಸಿಪರೆ । ಕ್ರಮಣಿಸನುದಭವಧರೆಗೆನುಹೋ ।
ತ್ಸವದ್ಧೊಸಗೆಸರಿಕಾಣಲಿಲ್ಲವುಗ್ಗಡನವಾಬನಿಗೆ ॥

ಇವರುಬಂದವರಾರುಪುರದೊಳ । ಗಿವರದುತ್ಸವದೇನುಲೋಕದೊ ।
ಳಿವರದಾವುದುಜಾತಿಯೆಂಬವಿಚಾರಕೊಳಗಾಗೆ ॥ ೯ ॥
ಇವರುವರದಫಕೀರಸ್ವಾಮಿ.ಗ । ಳಿವರುತಾವ್ ಶಿರಹಟ್ಟಿವುಠದವ ।
ರಿವರುಮಹಿಮಾಪುರುಷರೆಂದಾಪುರದರಾಜನಿಗೆ ॥
ಅವರಿವರುನೆರೆದವರುತತ್ಪುರ । ದವರ-ಪೇಳ್ದರುಕೇಳ್ದುಭೂಪತಿ ।
ಯಿವರದರ್ಶನಗೊಂಡರೆಲ್ಲವುತಿಳಿವುದೆಂದರಿದ ॥ ೧೦ ॥
ಧರಣಿಪಾಲದಿವಾಣರೊಂದಿಗೆ । ಕರಿಸಿಪ್ರಮುಖರಕೂಡಿಕೊಂಡಾ ।
ಗುರುವಿನಾಸ್ಥಾನಕ್ಕೆಬಂದನುಸಮಯಕನುಸರಿಸಿ ॥
ಗುರುವುತಾನವರವರಯೋಗ್ಯತೆ । ಯರಿದ-ಯೋಗ್ಯಾಸನದಿಕೂಡ್ರಿಸಿ ।
ಹರಸಿಪರಶಿವಸದರಿಗೆಸೆಯುವನಾದನಾಸ್ವಾಮಿ ॥ ೧೧ ॥
ಉನ್ನತಿಕೆಯನವಾಬನಾಗುರು । ಸನ್ನಿಧಿಗೆಸಂಭ್ರಮಿಸಿನುಡಿದನು ।
ಮಾನ್ಯರೇಕಿವಿಗೊಡಿರಿಕೇಳಿರಿಬಿಟ್ಟುಕುಲಭೇವ ॥
ಚನ್ನಸದ್ಗುರುತಮ್ಮಪಾದದೊ । ಳಿನ್ನಭಯದಯಪಾಲಿಸಿದರಾ ।
ನೆನ್ನಬಿನ್ನಹವರಿಕೆಗೈಯುವನೆಂದನಾನೃಪನು ॥ ೧೨ ॥
ಹಿರಿಯರಿಂತಿಳಕೊಂಡುನಡೆವುದು । ಕಿರಿಯರೆಲ್ಲರುಹಿರಿಯರೆನಿಪರು ।
ಗುರುಗಳಿಂತಿಳಕೊಂಡುನಡೆವುದುಲೋಕನೀತಿಕಣಾ ॥
ಅರಿಯದಿರೆಕೇಳ್ವುದಕೆಭಯವೇ । ನರಿತುದನುಹೇಳ್ವುದಕೆಭಯವೇ ।
ನರಸಕೇಳ್ಮೆಯಾವದೆಂದನುಗುರುಫಕೀರೇಶ ॥ ೧೩ ॥
ಗುರುವುತಾವುಫಕೀರರಾದೊಡೆ । ಹರಮತಕೆಗುರುವೆನಿಪುದಚ್ಚರಿ ।
ಸರಸವೇನಿದುಮುಸಲಮಾನರಿಗೆಂತುಸಲ್ಲುವದು ॥
ಗುರುವೆಲಿಂಗಾಂಗಿಗಳುತಾವಿರೆ । ಪರಮತಕೆಗುರುವೆನಿಪುದೇನಿದು ।
ಧರಣಿಯ-ಲಿಸಮ್ಮತವೆಶಿವಮತಕೆನ್ನುತಾಭೂಪ ॥ ೧೪ ॥
ಪರಮಲಿಂಗಾಂಗಿಗಳುತಾವ್ಸೈ । ಗುರುಗಳ್ಶೈವಮತಕೆನಿಜವಿದು ।
ಧರೆಗೆತಾವುಫಕೀರರೆನಿಸ-ವದೇನುಕಾರಣವು ॥
ಉರುತರದಶಿಲೆಮಾನವುಣಿಭಾ । ಸುರಕರದಪ್ರಾವರಣಹಸರಿವು ।
ಕರೆನಿಶಾನಿಯದೆಂತುಬಂಡವುಕತನವೇನಿದಕೆ ॥ ೧೫ ॥

ಗುರುವೆನವಿನ್ನೊಪುರಕೆತಾವ್‌ಕೃಪೆ । ಯಿರಿಸಬಂದಿರಿಲೇಸುಲೇಸಿದು ।
ಚರಣದಲಿಬಿನ್ನಹವುನನ್ನದುಸಲಿಸಬೇಕೆಂದಾ ॥
ಧರಣಿಯಲಿನೀವ್‌ಮುಸಲಮಾನರು ಸರಸಪೇನಾವ್‌ನಿಮ್ಮಮನೆಯಲಿ ।
ಬರಿದೆಸೇವಿಸಬಹುದೆಹೇಳೆಂತೆಂದನಾಸ್ವಾಮಿ ॥ ೧೬ ॥
ಗುರುವುನುಡಿದಾವಾತಿಗಾಧೊರೆ ಯಿಂದೆಮಾತಾಡಿದನುಗುರುವಿಗೆ ।
ಧರೆಯೊಳೆಮ್ಮಯಬಿರುದುಧರಿಯಿಸಿತಾವುಮೆರೆಯುವಿರಿ ॥
ವರಫಕೀರನುಮುಸಲಮಾನರಿ ಗಿರಲುತಾವುಫಕೀರನೆನಿಸುವ ।
ದರಿದುತಾವುಫಕೀರರಾದೊಡೆಬಿಡೆನುತನುಗೆಂದಾ ॥ ೧೭ ॥
ಧೊರೆಯಬಗೆಯನುತಿಳಿದುಯೋಗೀ । ಶ್ವರನುಸೈಸೈನೂಕ್ತಿಗೆ ಒಲಿವೆನು
ವರಫಕೀರನುನಾಂನಬಾಬನುಸೀನುಮಜಭಾಪು ॥
ಹರುಷದಿಂದಡಿಗೆಯನುಮಾಡಿಸು । ಗುರುವಿಗಿಲ್ಲಿಮೆಸಲಿಸುಹೋಗೆನ ।
ಲರಮನೆಗೆಪೊರಮಟ್ಟುಪೋದನವಾಬನಸುನಗುತ ॥ ೧೮ ॥
ಆನವಾಬಬಿರಂಜಿಮಾಂಸ । ಕ್ಕೇನುನ್ಯೂನತೆಯಿಲ್ಲದಾಗಿಸಿ ।
ಸಾನುರಾಗದೊಳಡಿಗೆಮಾಡಿಸಿತಂದನುತ್ಸವದೆ ॥
ಮೌನಸದ್ಗುರುಕರ್ತನೀನಭಿ । ಮಾನಿನಿನ್ನದುದಿನ್ನನೆಂದೇ ।
ಶ್ರೀನಿರಂಜನಸ್ವಾಮಿಸಭೆಯಲಿದೀನ್ಜಗಾಯಿಸುತೆ ॥ ೧೯ ॥
ಎನುತೆವಸ್ತ್ರವತೆಗೆಯೆಮಲ್ಲಿಗೆ । ನೆನೆಗಳಾಗಿಬಿರಂಜಿಯಲ್ಲವ ।
ದನಿತುಮಾಂಸವುರಕ್ತಪುಷ್ಪಗಳಾಗಿಕಂಗೊಳಿಸೆ ॥
ಮನದೊಳಚ್ಚರಿವಟ್ಟುಭೂಪನು । ಜನಿತಭೀತಿಯೊಳಾಳ್ದುತತ್‌ಕ್ಷಣ ।
ವಿನಮಿತಂತಾನಾದನಾಗುರುನಾಥನಂಘ್ರಿಯಲಿ ॥ ೨೦ ॥
ಗುರುಫಕೀರೇಶ್ವರನಮಹಿಮಾ । ಭರತಲೀಲೆಯನರಿಯದಾನಿರೆ ।
ಗುರುಪದಾಬ್ಜದ್ರೋಹವೊದಗಿದುದಕಟತನಗೆನುತ ॥
ಮರುಳವಿಡಿದವನಾಗಿಧೊರೆಮೈ । ಮರೆಯೆತತ್‌ಕ್ಷಣದಲ್ಲಿಸ್ವಾಮಿಯು
ಕರುಣಿಸಿದನೆಬ್ಬಿಸಿದನೆಚ್ಚರಗೊಟ್ಟನೇವೇಳ್ವೆ ॥ ೨೧ ॥
ಗುರುಫಕೀರೇಶ್ವರನಕರ್ತನ । ಬರುದಿಗಾಸವನೂರಭೂಪತಿ ।
ಹರುಷದಿಂದೊಡಬಟ್ಟುಮಿಗೆಪೊಡಮಟ್ಟನಂಘ್ರಿಯಲಿ ॥

ಅರಮನೆಗೆಸಂಭ್ರಮದಸಡಗರ । ವೆರಸುತುತ್ಸವದಿಂದಲಾಗುರು ।
ವರನಬಿಜಯಂಗೈಸಿತೋರ್ದನುರಾಣಿವಾಸವನು ॥ ೨೨ ॥
ಗುರುಮಹಾತ್ಮರುಹಾವುತಮಗಾವ್ । ಪರಿಕಿಸಿದೆವಜ್ಞಾನವೂತ್ರದೊ ।
ಳರಿಯದಾದುದುತಪ್ಪುಸಿಡಿಯದೆಕ್ಷಮಿಸಿರೆಮಗಿನ್ನು ॥
ಧರೆಯೊಳಾನುಂರಾಣಿಯುಂಮೇ । ಣಿರುವಪ್ರಜೆಗಳುಮೆಲ್ಲರುಂಶ್ರೀ ।
ಗುರುವೆನಿಜದರ್ಶನದಿಧನ್ಯರುಧನ್ಯರಾವೆಂದಾ ॥ ೨೩ ॥
ಧೊರೆಯೆನಿನ್ನಯಮನದಪೊಲ್ಲನ । ವಿರುವದದರೊಳಗೇನುಸೋಜಿಗ ।
ಗುರುವುರಕ್ಷಿಪುವೇನುತವಗುಣಕೊಲೆಯದಿರಬಹುದೆ ॥
ಗುರುದಿಗಂಬರನಲ್ಲನುಪ್ರಭು । ವರಫಕೀರೇಶ್ವರನುಕುಲಛಲ ।
ವೆರದವರಕಡೆಗಲ್ಲತಿಳಿಯೈಯೆಂದನಾಸ್ವಾಮಿ ॥ ೨೪ ॥
ಸೈಜಗದ್ಗುರುಸ್ವಾಮಿಸ್ಸೈತಾ । ವೀಜಗಕೆಸರ್ವರಿಗೆಶ್ರೀಗುರು ।
ರಾಜಸ್ಸೈಸೈಶ್ರೀಫಕೀರೇಶ್ವರನುಸ್ಸೈಯೆನುತ ॥
ರಾಜನಾಗರುವಾದದಲಿತಾ । ನೋಜೆಯಿಂಕಾಣಿಕೆಯನಿತ್ತನು ।
ಭೂಜನರನೀವ್‌ಕೇಳಿಹಿಡಿಯಿರಿಭಕ್ತಿಮಾರ್ಗವನು ॥ ೨೫ ॥
ಗುರುವಿನಡಿದಾವರೆಗೆಪೊದರು । ತ್ತರಸನತಿಭಕ್ತಿಯಲಿಕೈಮುಗಿ ।
ದೆರಗಿದನುಬಹುವಿಧದಕಾಣಿಕೆಗೊಟ್ಟನೇನೆಂಬೆ ॥
ಉರುತರದಜಯಭೇರಿಯನುಗುರು । ವರನಪಾದಕ್ಕೊಪ್ಪಿಸಿದನಾ ।
ಧೊರೆಯುಪಾಹಿತ್ರಾಹಿಶಂಭುಫಕೀರನೂಮೆನುತಾ ॥ ೨೬ ॥
ಸಾರಭಕ್ತಿಶ್ರೇಯದಲಿಧೊರೆ । ಧೀರಸದ್ಗುರುರಾಮನಾಚರ ।
ಣಾರವಿಂದಕ್ಕೆರಗಿಕಾಣ್ಕೆಯನಿತ್ತನೀತೆರದಿ ॥
ಮೋರಚೇಲನುಕಡುನಗಾರಿಯ । ನೋರಣಿಸಿದಾಮುತ್ತುಮಾಣಿಕ ।
ಹೇರಳದ್ರವ್ಯವನುಶಾಲುಗಳಿತ್ತನೇವೇಳ್ವೆ ॥ ೨೭ ॥
ಪರಮಭಕ್ತಿಗನಿಷ್ಠೆಗಲ್ಲದೆ । ಗುರುಫಕೀರನುಹುಟ್ಟುಜಂಗನು ।
ನರರೊಳಾರಿಗುವಶಕಾದೊಡಮೊಲೆವನವನಲ್ಲ ॥
ಅರರದೇವರದೇವನಲ್ಲವು । ಗುರುಮಹೋನ್ನತನೆಮ್ಮಕರ್ತನು ।
ಧರೆಗೆಭಕ್ತ್ಯರ್ಥದಲಿಬಂದವನೆಂದನಾಸ್ವಾಮಿ ॥ ೨೮ ॥

ಸಿರಿಗರೆಲ್ಲರು ಕೇಳಿರೈನೀವ್ । ಗುರುವಪ್ರಾರ್ಥಿಸಿರಾಣಿವಾಸದೊಾ ।
ಳಿರುವಪೆಣ್ಮಣಿಗಳಿಗೆಬಿಡದಲೆಹರಕೆಕೊಡಿಸಿದನು ॥
ಕೊರತೆಯಿಲ್ಲವೆರಾಜನುನ್ನಣೆ । ವೆರಿಸಿಗುರುವಿನಬಿರುದುಹೊಗಳಿಸಿ ।
ಗುರುವಿನಾನಂದದಲಿವೈಮರೆದಿರ್ದನಾಭೂಪ ॥ ೨೯ ॥
ತನ್ನಸವನೂರಲ್ಲಿಮಠವನ । ಭಿನ್ನಭಾವದಿಕಟ್ಟಿಸಿದನಾ ।
ತನ್ನಹೊಲವನುಮಠಕೆನೀಡಿದನತುಳಭಕ್ತಿಯಲಿ ॥
ತನ್ನಲೀಲಾಮಹಿಮೆಯಲಿಸಂ । ಪನ್ನನಾದಾಗುರುವಿಗೀಜಗ ।
ಕನ್ಯರೆಂಬುವದುಂಟೆತಳಿಯಿರಿಭಕ್ತರೆಂಬವರು ॥ ೩೦ ॥
ಬಳಿಕಪುರವಾಸಿಗಳುನಾನಾ । ಕುಲದವರುಗುರುವರನಪಾದ ।
ಕ್ಕಲಸದಲೆಬಂದೆರಗಿಸಲಿಸಿದರಾತ್ಮಭಕ್ತಿಯನು ॥
ನಲಿದು ಸದ್ಗುರುಸ್ವಾಮಿಯೆಲ್ಲರಿ । ಗೊಲೆವುತಾಶೀರ್ವದಿಸುತಂದದಿ ।
ನೆಲಪೊಭಕ್ತರೆನಮಗೆಮಠಕಸ್ಪಣೆಯಕೊಡಿರೆಂದ ॥ ೩೧ ॥
ಗುರುವಿನಾನಂದವನುತಿಳಿದಾ । ಪುರದಭೂಪನುಭಕ್ತರೆಲ್ಲರು ।
ಹರುಷದತಿಶಯಭಕ್ತಿಯುತ್ಸವಮಾಡಲಾಗುರುವು ॥
ಗುರುದಿಗಂಬರಕೇಳಿಯಲಿಕಡು । ಬಿರುದುಗಳಬಟ್ಟಂಗಿಗಳನಿ ।
ರ್ಭರದವಾದ್ಯೋತ್ಸವದೆಸವನೂರಿಂದೆಹೊರಹೊರಟಾ ॥ ೩೨ ॥
ಪರಮಮಹಿಮಾಮೂರ್ತಿಜಗದಲಿ । ಹರಿಗೆಸರಿಮಿಗಿಲೆನಿಸುತಾಡುತೆ ।
ಭರದಿಸಂಚರಿಸುತ್ತೆಪಾವನಗೈದುಭಕ್ತರಲಿ ॥
ಧರಣಿದೇವಿಗೆಮೋದಬಡಿಸುವ । ವರಶಿರಃಪುರದೆಡೆಗೆಹೊರಟನು ।
ಪರಿಜನೋತ್ಸವಸಹಿತಬಿಜಯಂಗೈದನೈಮಠಕೆ ॥ ೩೩ ॥
ಪುರದಜನವತಿಹರುಷದಲಿನಿ । ರ್ಭರದಮಂಗಲವಾದ್ಯದಲಿಬಂ ।
ದೆರಗಿದರುಗುರುಚರಣಕಮಲದಸನ್ನಿಧಾನದಲಿ ॥
ಹರಸಿದನುಗುರುರಾಯನವರಿಗೆ । ಕುಂಗಳಂದದಿಬಾಳಬೇಡಿರಿ ।
ಗುರುಸುಸೇವೆಯಮಾಡೆಸದ್ಗತಿಮುಂದೆನಿಮಗೆಂದ ॥ ೩೪ ॥
ಹಿಂದಿನಲಿಬಂದೆಸೆವಭಕ್ತರೆ । ಗುರುಫಕೀರನಲೀಲೆಕೇಳಿರಿ ।
ಗುರುಮಹಿಮೆಮಿಗೆಬೂದಿಮುಚ್ಚಿದಕೆಂಡಮೇಘಾಗ್ನಿ ॥

ಸ್ಮರಿಸುವವರಿಗೆಗುರುಸದಾಶಿವ । ದುರುಳರಿಗೆಕಲ್ಪಾಂತಭೈರವ ।
ಧರೆಯನಕ್ಕರದಿಂರೆಬದುಕಿರಿಬಾಗಿಬಲುಜೋಕೆ ॥ ೩೫ ॥
ವಿತತದಾಸೋಗದಲಿಭಕ್ತ । ಪ್ರತತಿಯಲಿಘನಸಾಧುಗಳಸಂ ।
ತತಿಗಳಲಿಸಮದೃಷ್ಟಿಯಿಟ್ಟುಪಚರಿಸುತಂದದಲಿ ॥
ಅತಿದರಿದ್ರರಜಾಲದಲಿಸಂ । ತತಸಪಕ್ಷನುಹತವಿಮೋಹನು ।
ಕ್ಷಿತಿಗೆಥಳಥಳಿಸುತ್ತಲಿರುವನುಸಿದ್ಧರಾಮೇಶ ॥ ೩೬ ॥
ಕೇಳಿರೈಜನರೆಲ್ಲಕರ್ತನ । ಲೀಲೆಯನುಮುಂದಿನ್ನುಗುರುಪದ ।
ಲೋಲರಾಸುಗ್ನಳ್ಳಿಮಠದವರಾತ್ಮಜರನೆಳಸಿ ॥
ಕಾಲಕಾಲಕೆಕರ್ತನಿಗೆದಯ । ಪಾಲಿಸೈಮಕ್ಕಳನುನಮಗೆಂ ।
ದೋಲಗಿಸಲಾರಂಭಿಸಿದರಾಸ್ವಾಮಿಯಂಘ್ರಿಯಲಿ ॥ ೩೭ ॥
ಪತ್ತೆಶ್ರೀಕರಸಿದ್ಧರಾಮಗೆ । ಚಿತ್ತಶುದ್ಧರುಮೊದಲುಹುಟ್ಟಿದ ।
ಗಿತ್ತಪೆತ್ತವರತಕಂದುವಿಗೆಮೈಯಿಕ್ಕಿಪ್ರಾರ್ಥಿಸಲು ॥
ಉತ್ತಮರುಸೀರ್ಯನಿಮ್ಮಗರ್ಭದೊ । ಳುತ್ತಮನುಗುರುಪುತ್ರನುದಯಿಪ ।
ನಿತ್ತನೀಡಿರಿಮಠಕನೀವೆಂದನುಕರುಣಾಸ್ವಾಮಿ ॥ ೩೮ ॥
ಗುರುವುಕೊಟ್ಟಪ್ರಸಾದವನುಸ್ವೀ । ಕರಿಸಿವಂದಿಸಿಸೋದರವರೊಂ ।
ದೊರುಷದಲಿಗುರುಕುವರನುದಯಂಗೊಂಡನವರೊಳಗೆ ॥
ಗುರುಫಕೀರೇಶ್ವರನಕರುಣದಿ । ಧರೆಯೊಳವರಿಗೆಮಕ್ಕಳೈಸಿರಿ ।
ನೆರೆಯುದೊಡ್ಡವನಾದನಾಗುರುಬಾಲಸುಂದರನು ॥ ೩೯ ॥
ಮೆರೆವಗುರುಕುವರನನುಹಿರಿಯರು । ಹರುಷದಲಿಕರತಂದುಮಠಕಾ ।
ಗುರುಪದಕ್ಕಿರಿಸಿದರುಸ್ವಾಮಿಯುನೋಡಿಮೈದಡವಿ ॥
ಗುರುಫಕೀರೇಶ್ವರನಪಟ್ಟದ । ಮರಿಯುನೀನೇಮುಂದೆಲೋಕದೊ ।
ಳುರುಜಗದ್ಗುರುವೆನಿಸುಜಯಭೇರಿಯನುಹೊಡಿಸೆಂದಾ ॥ ೪೦ ॥
ಹರಗೆಶಿಶುರೂಪಾಗಿಕರ್ತಗೆ । ಚರಣಕಮಲಭೃಂಗನಾಗಿಯು ।
ಗುರುಸುದಾಸೋಗದಲಿತಾನಿಜದಾಸನಾಗಿರುತೆ ॥
ಅರರೆಶಮೆದಮೆಗಳಲಿಸುಸ್ಥಿರ । ಚರಿತನಾಗಿಯುಪಾದಸೇವೆಯೊ ।
ಳಿರುವಮರಿಯನುನೋಡಿನಲಿದಾಡುವನುಪ್ರಭುರಾಯ ॥ ೪೧ ॥

ಗುರುದಿಗಂಬರಪಾಲ್ಕನಾಜ್ಞೆಗೆ । ವರಫಕೀರನು ತನ್ನ ಮರಿದೇ ।
ವರನುಬೋಧಿಸಿಕೆಟ್ಟನಾಶ್ರಮುದೆಲ್ಲನ್ಯೆಸಿರಿಯು ॥
ಕರೆಸಿಪ್ರಮುಖರಗೆಲ್ಲರನು ತಾ । ನರುಪಿ ಪಟ್ಟವ ಕಟ್ಟಿದನು ಗಡ ॥
ಗುರುವೆನಿಸಿ ಶಿವಯೋಗಿಯೆನಿಸೆ ನುಶಿವನ ಸದರನಲಿ ॥ ೪೨ ॥
ಗುರುವಿನುತ್ಸವ ಮೂರ್ತಿಯುತ್ತಮವಲಿ । ವರಶಿರಃಪುರದೆಲ್ಲ ಕಡೆಯಲಿ ।
ಹರುಷದಿಂ ಗುರುಸೇವೆಗೈದರು ಸರ್ವಕುಲದವರು ॥
ಸುರರು ಸಿದ್ಧರು ಸಾಧ್ಯರಾಕಿಂ । ನರರು ಕಿಂಪುರುಷರ್ಕಳಾವ್ಯರು ।
ಗುರುವೆನಿಸೀಗ ಕಿಯೊಂದು ವಂದನೆಗೈದರಂಭ್ರದಲಿ ॥ ೪೩ ॥
ಪರಮಶಿವಯೋಗೀಶನಾಶಂ । ಕರನ ಪಟ್ಟಕೆ ಕಾಳಿತಬಳಿಕಾ ।
ಗುರುನಿರಂಜನಸಿದ್ಧರಾಮನು ಕರ್ತನಂಘ್ರಿಯನು ॥
ಸ್ಮರಿಸಿ ಶಿವಸಾಯುಜ್ಯ ಹೊಂದಿದ । ನರರೆಘ ರಕ್ಕೈಲಾಸನಲಿ ಗುರು ।
ವರನಿಗುತ್ಸವ ಮೂರ್ತಿಪೂಮಳೆಯಾಯ್ತು ಗಗನದಲಿ ॥ ೪೪ ॥
ಗುರುಮಹತ್ವದ ಸಾರವಿಂತಿದು । ಗುರುಮಹತ್ವ ಮನಂತಮಿಪ್ಪುದು ।
ಗುರುಮಹತ್ವವನರಿದು ಪೇಳುವರಾರು ಲೋಕದಲಿ ॥
ಗುರುಫಕೀರೇಶ್ವರನು ಗಂಗಾ । ಧರನ ಮುಖದಿಂ ಪೇಳಿಸಿದನೀ ॥
ತೆರದಿ ಮುಗಿದುದು ಸಂಧಿಯಿಪ್ಪತ್ತೊಂದನೆಯದೆನಿಸಿ ॥ ೪೫ ॥

॥ಇತಿಶ್ರೀ ಶಿರಃಪುರಸನ್ಮಠಶೂನ್ಯಸಿಂಹಾಸನ ಶ್ರೀಭಗವಾನ್‌ವಿಭುವಾತ್ಮೀಯ। ಗಂಗನಿಂ ಪೇಳಿಸಿದ ಪೌರಾಣದೋಳ್ ಇಪ್ಪತ್ತೊಂದನೆಯ ಸಂಧಿಸಮಾಪ್ತ ಮಿಂತು ॥೪೫॥ ಪದ್ಯಂಗಳಿಗೆ ಮಂಗಲಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ



## ೨೨ನೇ ಸಂಧಿಯು

### ೫ನೇ ಪಟ್ಟ— ಎರಡನೆಯ ಶಿವಜೋಗಿಸ್ವಾಮಿಗಳು.

ಸೂಚನೆ—

ಪರಮಸದ್ಗುರುದತ್ತಕರ್ತನು । ಮೆರೆಯೆ ಸಿಸಿರಾಜಿಸ ಶಿವಯೋಗೀ ।
ಶ್ವರನನಾಮದೊಳೆಸೆವನಾದನು ಭಕ್ತಭೂಪರಲಿ ॥ ಪಲ್ಲ ॥

ಪರಮಗುರುಕರಕಮಲಸಂಭವ । ನರಿಯಲಾ ಶಿವಯೋಗಿಸ್ವಾಮಿಯು ।
ಕರುಣಿನಿಜಗುಣಿಯೆನಿಸುತೊಪ್ಪುವನಾದನೀಜಗಕೆ ॥
ಹರನಪಟ್ಟದಯೋಗಿಸ್ವಾಮಿಯು । ನರರೊಳೀಲೋಕದಲಿ ಬೆಳಗಿದ ।
ಪರಿಯ ಪೇಳಲ್ಕಳವೆ ಪಾಮರರರವರೇನದನು ॥ ೧ ॥

ಗುರುವಿನಾಜ್ಞಾಸೂತ್ರದಂದದೊ । ಳಿರುತಲಾ ಶಿವಯೋಗಿಸ್ವಾಮಿಯು ।
ಮರವಿಜನಕೆಟ್ಟರಿಕೆಗೊಡುತಾಡುವನು ಭಕ್ತರಲಿ ॥
ಹರಗೆ ಸರ್ವೇಶ್ವರಗೆ ಗಂಗಾ । ಧರಗೆ ಶಶಿಶೇಖರಗೆ ಕರ್ತಗೆ ।
ಪರಮಕಿಂಕರನಾಗಿ ಬೆಳಗುವನಾರನೊಳ ಹೊರಗೆ ॥ ೨ ॥

ಹರನನೊಳಕೊಂಡಾತ್ಮದಲಿ ಸದ್ಗುರುವಿನಾಕಡುಬಿರುದುತೊಟ್ಟಾ ।
ಗುರುಫಕೀರನು ನಿತ್ಯದ ಸೋಗದಲಿ ನಲಿಯುತಲಿ ॥
ಧರೆಗೆ ಪಾವನಕರನು ಲೋಕದಿ । ಪರಮವಿನಯಾನ್ವಿತನು ನಿತ್ಯದಿ ।
ಬರುವಭಕ್ತರಿಗೆಲ್ಲ ಸುರಮಣಿಯೆನಿಸುವವನಾವಾ ॥ ೩ ॥

ಒಳಹೊರಗೆ ತಾನಾಗಿ ಬ್ರಹ್ಮೋ । ಜ್ವಲಿತ ಪರದೇವಿಯನು ಶಕ್ತಿಯು ।
ನೆಳಿಸಿವರಶಿಶುವಾಗಿ ಭಕ್ತರಬಂಧು ನಿಜವೆನಿಸಿ ॥
ಕಳೆದಳಿದು ಮದದಾಣ್ಮನೆಸೆಸುತೆ । ಪೊಳೆವ ನಿಮ್ಮ ವಾಡುಗಳನಾಗಿಸು ।
ತಿಳೆಗೆ ಶೋಭಿಸುತಲಿ ಪದುಮರ್ಕೀರ್ತಿಯುದ್ದೆಸೆಗೆ ॥ ೪ ॥

ಕೇಳಿ ಧಾರಕಪುರದಸನಾಸ್ಪದ । ಶಾಲಿವಾಹನನಾಮನಾಮಂ ।
ಶಾಳಿಮೇಳಿಗೆ ಸುಪ್ರಸಿದ್ಧವು ನಿಮಗೆ ಜಗಕೆಲ್ಲ ॥
ಹೇಳಲೇನಾವಂಶಜನು ಭೂ । ಪಾಲಕನು ಶ್ರೀಕೃಷ್ಣರಾಜನು
ಲೋಲನೈಗುರುಲಿಂಗಜಂಗಮಪಾದಪ್ರಸೇವೆಯಲಿ ॥ ೫ ॥

ಆಮಹಾಪ್ರಶ್ಯಾತ್ಮರಾಜನು । ಸೋಮಶೇಖರಸಮಗೆಗುರುವರ ।
ಗೀಮಹೀತಳದಲ್ಲಿಶೋಧಿಪನಾದನನಿತರಲಿ ॥
ಈಮಹಾಪ್ರೌಢರೂಪಗುರುವಿನ । ದಾಮಹತ್ವಾತಿಶಯಲೀಲಾ ।
ರಾಮಣೀಯಕವಾರ್ತೆಕಿವಿದೆರೆಗಾಯ್ತುಬಹುಮುಖದೆ ॥ ೬ ॥
ಹಾಮಹಾಗುರುದೇವಬದುಕಿದೆ । ನೀಮಹಿಯೊಳಾನೆಂದುಕಾಣುವೆ ।
ನೀಮರಿವೆಸುಲಿಸಿಲ್ಕಿಕಟ್ಟೆನುಕಟ್ಟೆನೆಂದೆನುತ ॥
ಆಮಹಾತ್ಮನುಜಗದಭಕ್ತ । ಪ್ರೇಮಿಯೆಂಬಾಶ್ರುತಿಗಳೆಸೆದವ ।
ವಾಮಹಾತ್ಮನಪಾದದರುಶನವಾಗಬೇಕೆಂದ ॥ ೭ ॥
ಗುರುಮಹಾತ್ಮನಪಾದವೇಸಿಜ । ಪುರಕೆಬಿಜಯಂಗೈಸವಂತಾ ।
ತುರದಿಸನ್ನಿಧಿಗೈದೆಸಂಧಾನವನ ನಡೆಸುವದು ॥
ಅರವಿನುರುಸಂಧಾನಿಗುರುಗಡ । ಗುರುಕೃಪೆಯುತನಗಾಗದಿರದೆನು ।
ತೊರೆದುಚಿಂತಿಪನಾದನಾಶ್ರೀಕೃಷ್ಣರಾಜೇಂದ್ರ ॥ ೮ ॥
ವರಸಭಾಸ್ಥಾನದಲಿಶಂಕರ । ಪರಕವೀಂದ್ರರುಪಂಡಿತರುಶ್ರೀ ।
ಹರಿಯಕೀರ್ತನೆಗೈವರರಸನಬಿರುದುಹೊಗಳುವರು ॥
ಮೆರೆವಚರಮೂರ್ತಿಗಳುಸನ್ನುತ । ಚರಿತರಾಸಾಧುಗಳುನೆರೆದಿರೆ ।
ಗುರುಫಕೀರನಲೀಲೆದೆಗೆದಾಭೂಪನಿಂತೆಂದ ॥ ೯ ॥
ಆಮದನರಿಪುಸಾಂಬಸದ್ಗುರು । ಭೂಮಿಯುಲಿನಿಜಸುಗುಣಭಕ್ತ ।
ಪ್ರೇಮಿಯೆಂದೇಸಿಗಮಶ್ರುತಿಗಳುಸಾರುತಿಹವಿನ್ನು ॥
ಆಮಹಾತ್ಮನಪಾದವೇಸಿಜ । ಸೀಮೆಗೀಗ್ರಾಮಕ್ಕೆಬರ್ಪುದು ।
ಶ್ರೀಪ್ರೌಢೋನ್ನತಪೂಜೆಗಿರುನೀನೆಂದುದಾಸಭೆಯು ॥ ೧೦ ॥
ಎಂದಮಾತಿಗರಾಜನೊಪ್ಪಿ । ತ್ತಂದುಶ್ರೀಗುರುಲಿಂಗಜಂಗಮ ।
ಕಂದದಲಿಪೂಜಿಸುತೆಭಕ್ತ್ಯಾನಂದಮಯನಾಗಿ ॥
ಎಂದಿಗಪ್ಪುದೊಗುರುಕೃಪೆಯುತನ । ಗೆಂದುಚಿಂತಿಸಿಬಿಸ್ಮಪತ್ರವ ।
ನಂದಿಗಾಗುರುಸನ್ನಿಧಾನಕೆಕಳಿಸುವವನಾದಾ ॥ ೧೧ ॥
ಬಿನ್ನವತ್ತಲೆಗೊಂಡುಗುಣಸಂ । ಪನ್ನರಾರ್ಯರುಬಂದುಶಿವಲೀ ।
ಲೋನ್ನತೆಗೆಶಿರಬಾಗುತಿತ್ತರುರಾಜಲಿಖಿತವನು ॥

ಉನ್ನತೋನ್ನತಮಹಿಮನವರಿಗೆ । ಮನ್ನಿಸಿದನುಪಚಾರಗೈಸಿದ ।
ನನ್ನೆಗಂನೃಪಪತ್ರಪ್ರೋಕ್ಕಣಿಸಿಕ್ಕುಸನ್ನಿಧಿಗೆ ॥ ೧೨ ॥
ಕೆಲವುಭಕ್ತಾದಿಗಳಕರೆಯಿಸಿ । ಹಲವುಯೋಜನೆಗಳನುನಡೆಯಿಸಿ ।
ಕಲೆಗಳಾಣ್ಮನಮೂಲಕರ್ತನನುಜ್ಞೆಯುಂಡದಲಿ ॥
ಇಳೆಯೊಳಾಂಸಂಚಾರವೊಡಟವೆ । ನೆಲವ್ರೊತಿಳಿಯಿರಿಯೆಂದುಸ್ವಾಮಿಯು ।
ನಲಿವುತಾಶೀರ್ವಾದಪತ್ರವನಾಗಿಸಿದನೊಡನೆ ॥ ೧೩ ॥
ಕಳಿಸಿದನುಪೇಳ್ದುರೆಯನುಗುರು । ಸಲವಿನಲಿಮಿಗೆಪರಿಕೆಗೈದಾ ।
ಲಲಿತಸದ್ಗುರುಮೂರ್ತಿಜಾನಿಪನಾದನೆಲ್ಲಮಗೆ ॥
ಭಲರೆಭಕ್ತರೆಕೇಳಿರಾಗುರು । ವೆಳಸಿಚಿಂತಿಪವರನರೇಂದ್ರನು ।
ಹೊಲಬರಿದುಪೂಜಿಸಿದನಾಗುರುರಾಯನಶ್ವವನು ॥ ೧೪ ॥
ಆಗುರುವಿನುರುಗದ್ದುಗೆಗೆಶಿವ । ಜೋಗಿಸ್ವಾಮಿಯುಹೊರಗೊಳಗೆತಾ ।
ನಾಗಿರಂಜಿಸೆಕರ್ತನಪ್ಪಣೆಯೂಯ್ದುಗದ್ದುಗೆಯೂ ॥
ನೀಗುರುವುಸಾಕಾರಚಿತ್ಸುಖ । ನಾಗುನಿತ್ಯಾನಂದಪೂರ್ಣನು ।
ಮೂಗಿಪರತರದಾತಪಸ್ಸಾಮ್ರಾಜ್ಯಾಧಿಪತಿಯು ॥ ೧೫ ॥
ಆಗುಮನುಮುನಿಹೃತ್ಸರೋವರ । ರಾಗರಂಜಿತರಾಜಹಂಸನು ।
ಮೂಗೆಲವ್ರೊಹೊರಡೆಂದುಗರ್ಜಿಸಿನುಡಿದುದಶರೀರ ॥
ಆಗುರುವಿನೀಯಾಜ್ಞೆಗಾಶಿವ । ಯೋಗಿಸದ್ಗುರುದೀಕ್ಷಗಾಯಿಪ ।
ನಾಗಿಬಂದೆಲ್ಲರಿಗೆಸೂಚಿಸಿದನುಪ್ರಯಾಣವನು ॥ ೧೬ ॥
ಗುರುವಿನೆಡೆಯಲಿಸೇವೆಗೈವರೆ । ಹರುಷದಿಂದಲೆಕೇಳಿರೈಗುರು ।
ವರನಲೀಲಾಮೃತಕೆಸರಿಮಿಗಿಲಿಲ್ಲಲೋಕದಲಿ ॥
ಪರಮಗುರುವೇಶ್ರೀಫಕೀರೇ । ಶ್ವರನೆಗತಿಯೆಂದಿರುವಸೇವಕ ।
ರಿರದೆಸಿದ್ಧತೆಗೈದುವಿಜ್ಞಾಪಿಸಿದರೆಲ್ಲವನು ॥ ೧೭ ॥
ಬಿರುದುಗಳನೊಕ್ಕಣಿಸುತಿರಲನು । ಚರರುಕಾಳಿಗಳೊದರುತಿರಲ ।
ಬ್ಬರಿಸುತಿರೆಜಯಭೇರಿಗಳುಭೋರೆಂದುಮುಂಗಡಿಗೆ ॥
ವರದಿಗಂಬರಪಾಚ್ಛನುತ್ಸವ । ಭರದೆಗುರುಶಿವಯೋಗಿಸ್ವಾಮಿಯು ।
ಹೊರಟನಾಮೈಸೂರರಾಜನಭಕ್ತಿಗೆಸುಗವು ॥ ೧೮ ॥

ಪರಮಚರಮೂರ್ತಿಗಳುಯೋಗೀ । ಶ್ವರರುಘನಪಂಡಿತರುಶಿವಶಂ ।
ಕರಮತೋನ್ನತಸುನಿಗಮಾಗಮಶಾಸ್ತ್ರಪಾರಗರು ॥
ಅರಕಿಮರಿದೇವರ್ಕಳುತ್ಕಟ । ಶರಣಸಂತರುಸಾಧುಗಳುಸಲೆ ।
ನೆರೆಯೆಕೆಲೆಬಲಕಿರಲುಭಗವಾನೆನುತವಂದಿಗಳು ॥ ೧೯ ॥
ಕರಿತುರಗಕುಲದೋಜೆಯಲಿಸಿಂ । ಗರದನಟನೀಮೇಳದಲಿಬಹು ।
ತರದಮಂಗಲವಾದ್ಯದಲಿಹೊರಹೊರಟನಾಸ್ವಾಮಿ ॥
ಸಿರಿಯುಪೇಳ್ವರೆವರಶಿರಃಪುರ । ಗುರುಮಹತ್ವದಪರಿಯುಪೇಳ್ವರೆ ।
ಧರಣಿಯಲಿಶ್ರೀಹಾಹರಾದ್ಯರತೇಜಕುರೆಮಿಗಿಲು ॥ ೨೦ ॥
ಶಾಂತಸದ್ಗುರುಸ್ವಾಮಿಚರಿಸು । ತ್ತಂತುಮಿಂತುಂಲೋಕಭಕ್ತಿಗೆ ।
ಸಂತವಿಸಿಮಿಗೆಬಿಡದಲಾಶೀರ್ವಾದಗೈಯುತಲಿ ॥
ಕಂತುಹರಸಮನೆನಿಸುತಂಭ । ಕ್ತಾಂತರಂಗವನರಿದುಹರಸುತೆ ।
ಸಂತಸದಿತಲ್ಪಿದನುಗಡಶ್ರೀರಂಗಪಟ್ಟಣಕೆ ॥ ೨೧ ॥
ಚನ್ನಸದ್ಗುರುಭಕ್ತಜನನೀ । ವಿನ್ನುಕೇಳಿರಿಗುರುಮಹಾತ್ಮಕ ।
ನನ್ನಿಮಂತ್ರಾಕ್ಷತೆಯಫಲವನುಕೊಟ್ಟುಬೆಸಸಿರಲು ॥
ಸನ್ನಿಧಿಯಸರ್ವಾಧಿಕಾರಿಯು । ಚನ್ನ ಶ್ರೀಮರಿದೇವರೆಲ್ಲರು ।
ಚನ್ನವಾಗಿಯೆತಲುಪಿದರುಮೈಸೂರನೃಪನೆಡೆಗೆ ॥ ೨೨ ॥
ಮನದೊಳಚ್ಚಿಸಿದಂತೆಶ್ರೀಗುರು । ತನಗದೊಳೆದೈತಂದುದಕೆಬಹು ।
ಘನತೆಯಲಿಫಲಮಂತ್ರದಕ್ಷತೆಯಿತ್ತುದಕೆಧೊರೆಯು ॥
ಅನುಪಮದಗುರುಕರುಣವೆಂದೇ । ನೆನೆದುಸ್ವೀಕರಿಸಿದನುಕೇಳಿರಿ ।
ಜನರೆವಿನಮಿತನಾಗಿಸನ್ಮಾನಿಸಿದನುಳಿದರಿಗೆ ॥ ೨೩ ॥
ಪುರಜನೋತ್ಸವತೋರಣಂಗಳು । ನೆರೆಯೆಬಿರುದಿನಕಾಳಿಗಳುದನಿ ।
ಗರೆಯೆನಿಸ್ಸಾಳಗಳಧ್ವನಿಗಳುಪಸರಿಸಿರೆಮೇಣು ॥
ಅರರೆಬಟ್ಟಂಗಿಗಳಘೋಷವು । ಪರಿಯೆಪರಜನಸಹಿತಭೂಪನು ।
ಗುರುವಿನಂಘ್ರಿಯಕಾಣಲೆದ್ದನುಬಹಳಸಂಭ್ರಮದೆ ॥ ೨೪ ॥
ಗುರುವೆಪಾಹಿತ್ರಾಹಿಯೆನುತಾ । ಪರಮಭಕ್ತನುಕೃಷ್ಣರಾಜನು ।
ಹೊರಟುಮೈಸೂರಿಂದಬಂದನುಭಕ್ತಿಯುತ್ಸವದೆ ॥

ಗುರುನಿರಂಜನಮೂರ್ತಿಸ್ವಾಮಿಯು । ಚರಣಸನ್ನಿಧಿಗಾಂಬೆನೆಂದುರೆ ।
ಹರುಷಪುಳಕಿತನಾದನಾನರನಾಥನಡಿಗಡಿಗೆ ॥ ೨೫ ॥
ಸರಸವಿದ್ವಜ್ಜನರಕುಲದಲಿ । ಪರಮದೇಶಿಕರಾಳಿಯುಲಿಬಹು ।
ಸರಸಗಾಯಕಜಾಲದಲಿಸ್ಮೃತಿಕಥನರೋಘದಲಿ ॥
ಹರಸುಕವಿಸಂದೋಹದಲಿತರ । ತರಡವಾಙ್ಮಪ್ರಸರದಲಿನೃಪ ।
ವರನುಬಂಧನುಶ್ರೀಘಕೀರನವಾದಪರುಶನಕೆ ॥ ೨೬ ॥
ದೇವಕಾರುಣ್ಯಾಂಭುನಿಧಿಗುರು । ದೇವಸುಜನಜನೈಕವತ್ಸಲ ।
ದೇವಸರ್ವಾಂತರ್ಯಸರ್ವಾತೀತಸರ್ವೇಶ ॥
ದೇವಚಿನ್ಮಯುಸುಜನರಕ್ಷಕ । ದೇವಸುಜನವಿರೋಧಿಮರ್ದನ ।
ದೇವಶಂಕರವಾಹಿಯೆನುತೆರಗಿದನುನೃಪವರನು ॥ ೨೭ ॥
ತುರಗಗಳುಹೋಂಕರಿಸುತಿರೆಚ । ಪ್ಪರಿಸುತಿರೆರಾವುತರುಕರಿಗಳು ।
ಕರಗಳೆತ್ತುತೆಕುಣಿಯುತಿರೆನಡೆಸುತಿರೆಮಾವುತರು ॥
ಪುರದಜನರುರೆನೋಡಲಾತುರ । ವೆರಸಿಬರುತಿರೆನಮಿಸುತಿರೆನಿ ।
ರ್ಭರದೊಳುತ್ಸವದಿಂದೆಶಾಂಕರೆತಂದನಲ್ಲಮುನ ॥ ೨೮ ॥
ಕಳಸಕನ್ನಡಿತಳಿಗೆಗಳಕರ । ತಳದೊಳೊಪ್ಪರೆಮೆರೆವವೆಣ್ಣುಗಳ ।
ಬೆಳಗಿನಲಿಬಹುವಾದ್ಯದಲಿಘೊಸಮೇಳದಾಟದಲಿ ॥
ನಲಿವಶೆಟ್ಟರಸಾವುಕಾರರ । ಲಲಿತಚರಮೂರ್ತಿಗಳಗುರುಗಳ ।
ಬಳಗದಲಿಕರತಂದನಾಗುರುವರನನವನೀಶ ॥ ೨೯ ॥
ಅಂದಿವಾಶ್ರೀರಂಗಪಟ್ಟಣ । ದಿಂದೆಪರಮಾತ್ಮಂಗೆಗುರುವಿಗೆ ।
ಸಂದಣಿಸಿದನ್ಯೋನ್ಯದುತ್ಸವದಿಂದೆಕರೆತಂದು ॥
ಕುಂದುಕೊರತೆಗಳೇನುತೋರದ । ಬಂಧುರೋನ್ನತಮಂದಿರದಿಮುದ ।
ದಿಂದಿಳಿಸಿದನುಶಂಭುಸಂಭ್ರಮದೇಳ್ಗೆಯೋಜೆಯಲಿ ॥ ೩೦ ॥
ಪುರವನೆಲ್ಲೆಡೆಯಲ್ಲಿಸಲೆಸಿಂ । ಗರಿಸಿಪುರದಧಿದೈವನಿಕರಕೆ ।
ಹರುಷಗೊಳಿಸಿದನವನಿಪನುಸನ್ನುತವಿಧಾನದಲಿ ॥
ಗುರುವಿನೆಡೆಯಲಿಸರ್ವಸಿದ್ಧತೆ । ಯಿರಿಸಿಪ್ರತಿನಿತ್ಯದಲಿತಾಪಗ ।
ಲಿರುಳುಸ್ವಾಮಿಯುಸೇವೆಗಾಜ್ಞಾಪಿಸಿದನಾಪ್ತರಿಗೆ ॥ ೩೧ ॥

ಮೆರೆವನಂಜನಗೂಡಿಗಾಗುರು । ವರನುದಯುವ ಇಡಿಸಲುಧರಣಿಪ ।
ನಿರದೆಮಂಡಳಿಸಹಿತಸೇವೆಯನೆಸಗಿದನುಬಳಿಕ ॥
ಗುರುವೆಸರ್ವವುನಿನ್ನದೆಂಬತಿ । ಹರುಷದಳಿಸಿದ್ಧತೆಯನಾಗಿಸಿ ।
ಗುರುಪದವನರಮನೆಗೆತಾಕರತರಲಿಕನುವಾದ ॥ ೩೨ ॥
ಸರಸವೀಣಾನಾದದಲಿತಂ । ಬುರಿಯಮಂಜುಳನಾದದಲಿನಿ ।
ರ್ಝರದೆಪ್ರತಿದನಿಗೊಡುವವಾದ್ಯೋತ್ಕರದರಭಸದಲಿ ॥
ಮೆರೆವವೇಶ್ಯಾಸ್ತ್ರೀಯುಗಾಯನ । ಭರದೊಳುತ್ಸವದಿಂದಲಾನೃಪ ॥
ನರಮನೆಗೆಕರತಂದನಾಶಿವಜೋಗಿಸ್ವಾಮಿಯನು ॥ ೩೩ ॥
ಬಂದಿಹರುಪದವಾಕರುನಡೆ । ತಂದಿಹರುನವನರ್ತಕಿಯರೈ ।
ತಂದಿಹರುತರತರದದೇಶದರಸಿಕಗಾಯಕರು ॥
ಬಂದಿಹರುವಿಧವಿಧದೆಕೀರ್ತಿಪ । ವಂದಿಗಳುನವರಸದಕವಿಗಳು ।
ಹೊಂದಿಹರುಗುರುಸೇವೆಯಲಿನರನಾಥನಾಜ್ಞೆಯಲಿ ॥ ೩೪ ॥
ಉರುಗರಾಜಂಗರಿದಲಾಗುರು । ಸಿರಿಯಪೇಳ್ವಡೆಪೊಸತುಸದ್ಗುರು ।
ವರಮಹೋತ್ಸವವೂಯ್ತುಮೈಸೂರಲ್ಲಿಭೂಪನಲಿ ॥
ಹರಿಯಲೀಲೆಯೊಹರನಮಹಿಮೆಯೊ । ಪರತರಪರಬೊಮ್ಮತೇಜವೊ ।
ಧರೆಯೊಳಿಂದೆನೆಸದರಿಗೆಸೆದನುಗುರುಫಕೀರೇಶ ॥ ೩೫ ॥
ಅರಮನೆಯೊಳೆಸೆದತ್ತುಪೂಜೆಯು । ವರವಿಧಾನದೆರಾಜನುಖದಿಂ ।
ಪರರೆಶ್ರೀಗುರುಲಿಂಗಜಂಗಮಪೊಲೆದುನಲಿದಾಡೆ ॥
ಸುರರುಪೂಮಳೆಗರೆಯೆಬಸವಾ । ದ್ಯರುಕರಂಕಣಿದಾಡೆಹರಹರ ।
ರಿರದೆವಿಧಿಯೊಂದಾಗುತುಘೆಜಯವೆಂದರಂಬರದಿ ॥ ೩೬ ॥
ಪರಮಮಂಗಲವಾದ್ಯರಭಸಕೆ । ನರಸುರೆ ೀರಗರೆಲ್ಲಹರ್ಷಿಸ ।
ಲರರೆಬಹುಚರಮೂರ್ತಿಗಳಸಂದಣಿಯಶೋಭೆಯಲಿ ॥
ಗುರುವೆಶಂಭುವೆಪಾದಗತಿಯೆನು । ತೆರಗುತಾನಂದದಲಿನರಪತಿ ।
ಯುರತರದಮಣಿಮಂಗಳಾರತಿಯೆತ್ತಿಬೆಳಗಿದನು ॥ ೩೭ ॥
ಈತನೇಭಕ್ತೈಕಬಾಂಧವ । ಈತನೇಶರಣೈಕಪಾಲಕ ।
ಸೀತನೇಬಸವೇಶಶ್ರೀಭಗವಂತಪರಶಿವನು ॥

ಈತನೇಪರವಸ್ತುಶ್ರೀಗುರು । ಭೂತಳಾಗ್ರದಿನಿಜಫಕೀರನು ।
ಭೂತದಯನೆಂದೆರಗಿದುದುಭೂಪತಿಯಬಳಗವದು ॥ ೩೮ ॥
ಹರಗೆಶಂಭುಗೆಶಿವಗೆಜಗದೀ । ಶ್ವರಗೆಸಾಂಬಗೆವೃಡಗೆಪರಮೇ ।
ಶ್ವರಗೆಜಗದಾತ್ಮಂಗೆತ್ರ್ಯಂಬಕಗಾಮಹೇಶನಿಗೆ ॥
ವರಮುಕುಂದಪ್ರಿಯಗೆಸರ್ವಾ । ಭರಣಗಾಕರ್ತಂಗೆಸದ್ಗುರು ।
ವರಫಕೀರೇಶಂಗೆಬೆಳಗಿದರೆಲ್ಲರಾರತಿಯ ॥ ೩೯ ॥
ದೇವಜಯಜಯಜಗದದೇವರ । ದೇವಜಯಜಯಸರ್ವಶರಣರ ।
ದೇವಜಯಜಯಸಕಲಮುನಿಗಳದೇವಜಯಜಯವು ॥
ದೇವಜಯಜಯಸುಜನಭಕ್ತರ । ದೇವಜಯಜಯಭುವನಗುರುಜನ ।
ದೇವಜಯಜಯವೆಂದುಬೆಳಗಿದರೆಲ್ಲರಾರತಿಯಾ ॥ ೪೦ ॥
ಧರೆಗೆಬಲುಮಿಗಿಲೆನಿಪಕಂಠಾ । ಭರಣರುದ್ರಾಕ್ಷಿಗಳಕನಕಾ ।
ವರಣದಾಟೋಪಣವುಮೂವತ್ತೆರಡುಮಣಿಸಹಿತ ॥
ನೆರೆಕಲಾಬತ್ತಂಖಮೂರ್ಚೇ । ಲೆರಡುಚಾಮರವೆರಡುಬೆಳ್ಳಿಯ ।
ತರತರದತಾರಖಸಿಗೆಲಸದಕುರ್ಚಿಗಳನಿನ್ನು ॥ ೪೧ ॥
ತುರಗಗಳನಿತ್ತವಕೆವೈಗಾ । ಭರಣಕೊಟ್ಟನುಮೇಣುಮೇಲೆನೆ ।
ಕರಿಯನಿತ್ತನುಮತ್ತೆಕೊಟ್ಟನುಕರಿಗೆವೈಸಿರಿಗೆ ॥
ತರಸಿಸಾವಿರದೆರಡುಸೂರ್ಸರಿ । ಯಿರುವರೂಪ್ಯದನಾಣ್ಯಕೊಟ್ಟನು ।
ಪರಮಗುರುಸನ್ನಿಧಿಗೆಕಾಣ್ಕೆಯನಿತ್ತನಾಭೂಪ ॥ ೪೨ ॥
ಐದುನೂರ್ರೂಪಾಯಿಬಾಳುವ । ದಾದದಿಂಬೊಂದುರುಟುಸಣ್ಣವು ।
ಮಾದದಿಂಬೆರಡುಸುಮನೋವರಗೊಂಡುಶೀಘ್ರದಲಿ ॥
ಆದಿವಾನರಬಾಬುರಾಯರ । ಸಾಧುಶೀಲಾತ್ಮಕರಕಡೆಯಿಂ ।
ದೈದೆತರಿಸುತೆಸಲಿಸಿದನುಗುರುಪಾದಕಾನೃಪನು ॥ ೪೩ ॥
ಗುರುಚರಣಸನ್ನಿಧಿಯಸೇವಾ । ಭರದೊಳಿಹಸರ್ವಾಧಿಕಾರಿಗು ।
ಮರಿದುಮನದಣಿಸಿದನುಸರ್ವರಿಗುಂನಿಧಾನದಲಿ ॥
ಪರಮವಸ್ತ್ರಾಭರಣನಾಣ್ಯೋ । ತ್ಕರವನಿತ್ತನು ಭೂಪನೆಲ್ಲರಿ ।
ಗಿರದೆಸಲ್ಲಲಿನಿಮಗೆಗುರುವಿನದೆಂದುಮನ್ನಿಸಿದಾ ॥ ೪೪ ॥

ಪುರದಿಕಟ್ಟಿಸಿಮಠವನೀವೆನು । ಬರಲಿಮುರಿದೀವರ್ಕಳಿಲ್ಲಿಗೆ ।
ಚರಣಸನ್ನಿಧಿಯಾಜ್ಞೆಯನುನಿಜಶಿರದೊಳಾಂತಿಹೆನು ॥
ವರುಷಕೊಂದಕ್ಕೆಣಿಸಿಸಲಿಪ । ನ್ನೆರಡುನೂರ್ರೂಪಾಯಿಗಳನತಿ ।
ಹರುಷದಿಂದಲೆತಪ್ಪದೀವೆನುಭಕ್ತಿನೀತಿಯಲಿ ॥ ೪೫ ॥
ಗುರುವೆಬುದ್ಧಿಯೆಸನ್ನಿಧಾನದೊ । ಳಿರುವಪ್ರಮುಖರಕಳಿಸಿಬಿಡದಲೆ ।
ವರುಷಕೊಂದಾವರ್ತಿಸಾವಿರದೆರಡುನೂರೆಣಿಸಿ ॥
ಇರುವರೂಪಾಯಿಗಳನಿಲ್ಲಿಂ । ದಿರದೆತರಿಯಿಸಿಕೊಳ್ಳಭಕ್ತಿ ।
ಸ್ಫುರಣನೈಮಿತ್ಯದಲಿವಟ್ಟಲಿನೃಡನಸನ್ನಿಧಿಗೆ ॥ ೪೬ ॥
ಗುರುವೆಶಂಭುವೆಪಾದನಿಜಕೃಪೆ । ಯಿರಲಿನಿಜಸಂಸ್ಥಾನವೆಂದೀ ।
ಚರಣದಾಶೀರ್ವಾದದುದಯವುರವಿಯಪ್ರೋಲಿರಲಿ ॥
ಮರವಿಮನೆಯುಲಿಮರೆದೊಡಾಂಗಡ । ಗುರುಕಟಾಕ್ಷವದಿರಲಿಯೆಂದೀ ।
ಕರಮುಗಿದುಶಿರಬಾಗಿಪ್ರಾರ್ಥನೆಗೈದನಾನೃಪನು ॥ ೪೭ ॥
ಗುರುವೆಸ್ವಾಮಿಯೆಬುದ್ಧಿಯೇನಿಜ । ಕರುಣವಿದಿಸೈಜಗದೊಳಿಂದಿಗು ।
ಹೊರಗೊಳಗೆನನಗೆನ್ನವಂಶೋದ್ಭವರಿಗಲಡಲೆ ॥
ಪರಮಕಾಲಜ್ಞಾನದಂತಿರೆ । ಮರವೆಮುಸುಕುವದಿಲ್ಲಕಡೆಯಲಿ ।
ಗುರುವೆನಿನ್ನದುಸರ್ವವೆಂದೆರಗಿದನುನರನಾಥ ॥ ೪೮ ॥
ಧೊರೆಯೆಕೇಳ್ನಿನ್ನಂತೆಸರ್ವರಿ । ಗರವುಬೆಳಗುವದುಂಟೆಭಕ್ತಿ ।
ಸ್ಫುರಣಮುಣ್ಮುವದುಂಟೆಕಾಣುವದುಂಟೆಕೈಲಾಸ ॥
ಗುರುಕಟಾಕ್ಷದಫಲವುನಿನಗಿದು । ಗುರುಫಕೀರಸುಕುಶಲಶಂಕರ ।
ಮರುಳಭಕ್ತಿಗೆನಿನ್ನಬಲಿಯೊಳಗಾದನವನೆಂದ ॥ ೪೯ ॥
ಧರೆಯೊಳಿಂದಿಗುಮೆಮ್ಮವಂಶಜ । ರರಸರೆಲ್ಲರುನಿಂತುವರ್ತಿಸಿ ।
ಗುರುಪದದಕೃಪೆಗೊಂಡುಸುಖಿಸಲಿಶೋಭಿಸಲಿಮುಂದೆ ॥
ದುರಿತಕರ್ಮವುಪೆರ್ಚಿವಾಸನೆ । ಸರಿದುಕಂಪಡಗುವದುಕಾಲದ ।
ಕುರುಹುಕಾಲಜ್ಞಾನಮುಂದಿಹುದೆಂದನಾಭೂಪ ॥ ೫೦ ॥
ಧೊರೆಗಳೊಳುಮೈಸೂರಧೊರೆಯೇ । ಧೊರೆಕಣಾಪುಣ್ಯಾತ್ಮನರವಿಸ ।
ಧೊರೆಕಣಾಭಕ್ತೈಕಕುಲಮಣಿಯೆನ್ನುತಲಿಜನವು ॥

ಗುರುಗಳೊಳುಶಿರಹಸ್ತ್ಯಗುರುವೇ । ಗುರುಕಣ್ಣಾಪರಮಾತ್ಮಶಂಕರ ।
ಗುರುಕಣ್ಣಾಭಕ್ತ್ಯೈಕಬಾಂಧವನೆಂದುದೇನೆಂಬೆ ॥ ೫೧ ॥
ಧೀರಗುರುಜನವಿರತನುಜಿತ । ಮಾರಶಿವಗುಣಹಾರಮಹಿಮಾ ।
ಧಾರಹಸ್ತ್ಯಫಕೀರಪರಶಿವಪಾಲಿಸೆಮಗೆನುತ ॥
ಭೂರಿಸಿಂಗಾರದಲಿಲೆಕ್ಕಿಸದ ನಾಯಕ ಶ್ರೀಗುರುವಿನಂಘ್ರಿಗೆ ।
ಸಾರಿಶಿರವನುಚಾಚಿಸಲಿಸಿದಭಾತ್ಮಭಕ್ತಿಯನು ॥ ೫೨ ॥
ನುಡಿಯಜಾಣ್ಮೆಯಜೇಟದಾಟದ । ನಡಿಯುಮುರಕದಜಡೆವಜಘನದ ।
ಕುಡತೆಗಂಗಳಕಾಯಕಾಂತಿಯುಕರಿಣಕುಚಯುಗದ ॥
ಮುಡಿಯಸೊಬಗಿನಸಣ್ಣನಡುವಿನ । ಬೆಡಗಿನಭಿನವರಸದಭಾವದ ।
ಶಡಕಿನಾವೇಶ್ಯೆಯರುಬಾಗಿದರಾನಿರಂಜನಗೆ ॥ ೫೩ ॥
ರಾಯರನುಮೆಚ್ಚಿಸುವಸನ್ಮುನಿ । ರಾಯರಂವಂದಿಸುವಸದ್ಗುರು ।
ರಾಯನಂಭಜನಾನುಭಾವವನಾಂತುನಲಿಯಿಸುವ ॥
ಭೂಮಿಯುಲಿಸುತಪುಷ್ಪಚಾಪಶ । ರಾಯುಧನಮುಂಗಡಿಯಸೇನಾ ।
ನಾಯಕಿಯರೆನೆವೇಶ್ಯೆಯರುಗುರುಪಾದಕೆರಗಿದರು ॥ ೫೪ ॥
ಏಸುನೆರೆದುದೊಜಗದಜನಕುಲ । ವೇಸುಸಾಷ್ಟಾಂಗಾಭಿವಂದನೆ ।
ಯೇಸುಕಾಣಿಕೆಯೇಸುಹೊಗಳಿಕೆಗುರುವಿನಂಘ್ರಿಯಲಿ ॥
ಐಸಲೇಪರಶಿವನಲೀಲೆಯು । ದೈಸೆಪೇಳಲಿಕಳವೆಕವಿಗಳಿ ।
ಗೋಸರಿಸದಲ್ಲಮನುನಡಿಸುವನಲ್ತೆಲೀಲೆಯನು ॥ ೫೫ ॥
ಅರಸಗಾಶೀರ್ವದಿಸಿಸದ್ಗುರು । ವರನುಹೊರಟನುರಾಜಸಭೆಯುವ ।
ರೆರಗಿಸಂಭ್ರಮಗೊಂಡುನುತಿಸಿದರಾಮಹಾತ್ಮನನು ॥
ಅರಸನಪ್ಪಣೆಯಂತೆಪಥವಿದಿ । ಮರದೆಪ್ರಜೆಗಳುರಾಜಕೀಯರು ।
ಮೆರಗುತಂಸೇವಿಸುತಗುರುಕೃಪೆಪಡೆದರಡಿಗಡಿಗೆ ॥ ೫೬ ॥
ರಾಜನನುಮತಿವೆರಸಿಶ್ರೀಗುರು । ರಾಜಮಹಿಮಾವಿನುತಪಾದವಿ ।
ರಾಜಿತಂಶಿವಯೋಗಿಸ್ವಾಮಿಯುಹೊರಟನಲ್ಲಿಂದ ॥
ರಾಜನಾಜ್ಞಾಸೂತ್ರವರ್ತಿಗ । ಳಾಜನರ್ಕಳುರಾಜಪುರುಷರು ।
ಸಾಜದಲಿಗುರುಸೇವೆಗೈದರುಗಡಪ್ರಯಾಣದಲಿ ॥ ೫೭ ॥

ಹಾದಿಹಾದಿಗೆನಿಂತುಭಕ್ತ್ಯಾ । ಮೋದದಿಂಸೇವಿಸಿದಬಹುಜನ ।
ಕಾದಯಾಂಬುಧಿಗುರುವುಕರುಣಿಸಿಹರಿಸುತಂಡದಲಿ ॥
ಸಾಧುಗಳಿಗಾನಂದಬಡೆಯಿಸು । ತಾದಿಗಂಬರನೊಳಗೆಸೂಚಿಸೆ ।
ಪಾದಪರಿಜನಸಹಿತಬಿಜಯಂಗೈದನೈಮಠಕೆ ॥ ೫೮ ॥
ಅರಸನಪ್ಪಣೆಯಿಂದಸನ್ನಿಧಿ । ಗಿರದೆಬಂದಾರಾಜಕೀಯರಿ ।
ಗಿರಿಸಿಕೊಂಡಾಗುರುವುಸತ್ಕರಿಸಿದನುಬಹುವಿಧದೆ ॥
ಅರಸಗಾಶೀರ್ವಾದಪತ್ರವ । ನೊರೆದುಕೊಟ್ಟಾಜನಕೆಕಳುಹಿಸ ।
ಲರಿದುಭೂಪತಿಶಿರದೊಳಾಂತನುಗುರುಸುಲಿಖಿತವನು ॥ ೫೯ ॥
ಗುರುಕಟಾಕ್ಷವನಿಚ್ಛಿಸುವಭ । ಕ್ತರೆಸುರಾಗದೊಳಿನ್ನುಕೇಳಿರಿ ।
ಗುರುಫಕೀರನುಬರಲುವೈಸೂರಿಂದೆನಿಜಮಠಕೆ ॥
ಗುರುವೆಶಂಭುವೆಶಿವನೆಸದ್ಗುರು । ವರನೆಮೋಕ್ಷಪ್ರದನೆನಿನ್ನಯ ।
ಚರಣವೇಗತಿಯೆಂದುನೆನೆಯುವನಾದನಾನೃಪನು ॥ ೬೦ ॥
ವರಶಿರಃಪುರದಲ್ಲಿಶ್ರೀಗುರು । ವರಫಕೀರನುರಾಜಭಕ್ತಿಗೆ ।
ಪರಮಹರ್ಷಿತನಾಗಿಹರಸುವನಾದನೊಳಹೊರಗೆ ॥
ಗುರುಫಕೀರನಪಾದಪದ್ಮವ । ನಿರಿಸಿಹೃತ್ಕಮಲದಲಿರಾಜನು ।
ಸ್ಮರಿಸಿಪೂಜಿಸುತಿರುತೆಕಾಣುವನಾದನೊಳಹೊರಗೆ ॥ ೬೧ ॥
ಹರಿವಮನಕುರೆತುಚ್ಛಗೈವನು । ಸ್ಮರಿಸುವನುಬಸವಾದ್ಯರನುತಾ ।
ನರವಿನಿಂದಾಧೊರೆಯುಸನ್ಮುಬುದ್ಧಿಯುಳಿವರ್ತಿಪನು ॥
ಧರೆಯೊಳೀಪತಿತಂಗೆಭಕ್ತಗೆ । ಮರೆಯುದಲೆಬಿಡದೆತ್ತಿಕೊಳ್ಳೆಂ ।
ಮರೆಯಹೊಕ್ಕಿಹೆನೆಂದುಮೊರೆಯಿಡುತಿಹನುಮ್ಮಡನೆಡೆಗೆ ॥ ೬೨ ॥
ನರಜನಕೆನರರಂತನಡೆವನು । ಶರಣರಂನಲಿನಲಿದುನೆನೆವನು ।
ಗುರುಫಕೀರೇಶ್ವರನಪ್ರಾರ್ಥಿಸುತಿಹನುತನ್ನೊಳಗೆ ॥
ಧರೆಯೊಳಾನಿಂತೇಕೆಬಂದೆನೊ । ಹರಹರಾಪ್ರಾಕ್ಕರ್ಮವೆಂದಾ ।
ನರಶರೀರೇಂದ್ರಿಯಗುಣಂಗಳಗೊಪ್ಪದಿಹನವನು ॥ ೬೩ ॥
ನೀಡುವನುಗುರುಪದಕೆಮನವನು । ಪಾಡುವನುನುಡಿನುಡಿಗೆಗುರುವನು ।
ನೋಡುವನುತನ್ನೊಳಗೆತಾನಾರೆಂದುಬೆಳಗಿನಲಿ ॥

ಕೂಡುವನುಗುರುವರನಚಿತ್ಸುಖ । ಬೇಡುವನುರಾಜೇಂದ್ರನಾತಗೆ ।
ನೋಡಿನಲಿನಲಿದಾಡಿವ್ಮೈದೋರುವನುಪ್ರಭುದಾಯ ॥ ೬೪ ॥
ಇತ್ತಕೇಳರಿಭಕ್ತರೆಲ್ಲರು । ಮೃತ್ಯುಹರಶಿವಜೋಗಿಸ್ವಾಮಿಯು ।
ಚಿತ್ತದಲಿಪ್ರಭುದೇವರಸೆಯುಲುತಿಳಸುಲೀಲೆಯನು ॥
ಸತ್ಯಭಕ್ತರಿಗೆಲ್ಲವರುಹಿಸಿ । ಮತ್ತೆಪ್ರಭುಸೇವೆಯಲಿಲಕ್ಷವ ।
ನೊತ್ತಿನಡಿಸಿದನೆಲ್ಲಮುಂದಣಕಾರ್ಯಭಾಗವನು ॥ ೬೫ ॥
ರೈತರಿಗೆಬಿಗಿಮಾಡಿಧಾನ್ಯವು । ನೀತಿಯಿಂಬರುವಂತೆಮಾಡಿದ ।
ನಾತೆರದಿಕಮಠವನುಬಲಿಸಿಸುಧಾರಿಸಿದನೆಲ್ಲ ॥
ಭೂತಳಾಗ್ರದೊಳಿರುವಗುರುಮಠ । ಕಾತುಕೊಂಡಿರ್ಪೆಲ್ಲರಿಗೆಬೋ ।
ಧಾತಿಶಯದಲಿತಿದ್ದುತ್ತಾಡುವನಾದನಾಸ್ವಾಮಿ ॥ ೬೬ ॥
ಅರಿಯಿರಾಶಿವಜೋಗಿಸ್ವಾಮಿಯು । ಪರಮಗುರುಸಂಸ್ಥಾನದಲಿಪೊಂ ।
ದಿರುವಹೊಲಗಳನೆಲ್ಲಬೆಸಸುತೆಸಲೆಸುಧಾರಿಸಿದ ॥
ಇರದಲಾದಾಸೋಗದಲಿಸ । ಚ್ಚರಿತಸೇವಕಜನರನಿಟ್ಟರೆ ।
ನಿರತನಾದನುಪರಮಶಿವಯೋಗದಲಿಸಾಜದಲಿ ॥ ೬೭ ॥
ಗುರುಮಠದಸಂಪದವವರ್ಧಿಸಿ । ಗುರುವಿನುತ್ಸವವನ್ನುಹೆಚ್ಚಿಸಿ ।
ಗುರುವಿನಾದಾಸೋಗವನುಮೇಲೆನಿಸಿಭಕ್ತರಿಗೆ ॥
ಅರವದಾಗಿಸಿರಾಜಕೀಯುರಿ । ಗಿರದೆಸಂತಸಬಡಿಸಿಕರ್ತನ ।
ಚರಣಕಮಲಧ್ಯಾನಪರವಶನಾಗಹತ್ತಿದನು ॥ ೬೮ ॥
ಕೇಳರಾಕೆಬ್ಬಾಳಗೌಡರ । ಮೂಲಮನೆತನದಲ್ಲಿಪ್ರಭುವಿನ ।
ಲೀಲೆತೋರಿತುಕುವರನುದ್ಭವಿಸಿದನುಸುಂದರನು ॥
ಬಾಲಕೇಳಿಯನಾಡುತಾತನು । ಬಾಲಚಂದ್ರಂಬೋಲುಬೆಳೆದನು ।
ಹೇಳಲೇನಾಗುರುಫಕೀರನಗಾಥಮಹಿಮೆಯನು ॥ ೬೯ ॥
ಆಡುವಾಹರನಂಶಿಕಗೆನಲಿ । ದಾಡಿಕರೆಯಿಸಿಕೊಂಡುಸ್ವಾಮಿಯು ।
ನೋಡಿಬಾಬಾಚನ್ನವೀರನೆಮುರಿಯೆಬಾರೆಂದಾ ॥
ರೂಢಿಯಲಿಮುದಿವಾಚ್ಛನಿಂಗಿತ । ವಾಡಿತಾನುಪದೇಶಕೊಟ್ಟನು ।
ನೋಡಿರಾಗುರುಶಿಷ್ಯಸೂತ್ರದಕೇಳಿಯೆಂತಿಹುದು ॥ ೭೦ ॥

ಪರಮಗುರುವಾಜೋಗಿಸ್ವಾಮಿಯು । ಕರೆಸಿದನುಸದ್ಭಕ್ತವೂಹೇ ।
ಶ್ವರರನೆಲ್ಲರಿಗರುಹಿದನು-ಮಿಗೆಮುಂದಣಾಜ್ಜುಗವ ॥
ಭರದಿವುರಿಗಾಚನ್ನವೀರೇ । ಶ್ವರನಿಗಾಶ್ರಮುಕೊಟ್ಟನಾಗುರು ।
ವರನುಶಿವಸಾಯುಜ್ಯಸಾರ್ದಡಗಿದನುಲೋಕದಲಿ ॥ ೭೧ ॥
ಹರುಷವೆಗ್ಗಳಿಸಿತ್ತುಸುರರಿಗೆ । ನರಜನಕೆಬಹುದುಃಖವೊದುದು ।
ನೆರೆದುದುಘೆಯೆಂದೆನುತಪ್ರಮಥಸ್ತೋಮವೂಗಸಕೆ ॥
ಭರದೆಪೂಮಳೆಯೊಯ್ತುಮೂಯದಿ ಪರಮಕರ್ತನುಕಾಂದಬಾರೆಂ ।
ದಿರಿಸಿಕೊಂಡನುತನ್ನೊಳಾಗುರುಸೂತ್ರಕೇನೆಂಬೆ ॥ ೭೨ ॥
ಮರಿಯೆನಿಪಶ್ರೀಚನ್ನವೀರೇ । ಶ್ವರನಿಗಾದುದುಪಟ್ಟದುತ್ಸವ ।
ವರಿತುಕೊಳ್ಳಿರಿಗುರುಸದಾಶಿವನುರುವಿಲಾಸವನು ॥
ಧರೆಗೆಹುಟ್ಟಫಕೀರನೆನಿಸುತೆ । ಪರಮಜಂಗಮಚನ್ನವೀರೇ ।
ಶ್ವರನುಭಕ್ತೌಘದಲಿಶೋಭಿಪನಾದನನುದಿನವು ॥ ೭೩ ॥
ಗುರುಮಹತ್ವದಸಾರವಿಂತಿದು । ಗುರುಮಹತ್ವಮನಂತಮಿರ್ಪುದು ।
ಗುರುಮಹತ್ವವನರಿದುಪೇಳುವರಾರುಲೋಕದಲಿ ॥
ಗುರುಫಕೀರೇಶ್ವರನುಗಂಗಾ । ಧರನಮುಖದಿಂಪೇಳಿಸಿದನೀ ॥
ತೆರದಿಮುಗಿದುದುಸಂಧಿಯಿಪ್ಪತ್ತೆರಡನೆಯದೆನಿಸಿ ॥ ೭೪ ॥

॥ಇತಿಶ್ರೀ ಶಿರಃಪುರಸನ್ಮಠಶೂನ್ಯಸಿಂಹಾಸನ ಶ್ರೀಭಗವಾನ್‌ವಿಭುವಾತ್ಮೀಯ । ಗಂಗನಿಂ ಪೇಳಿಸಿದ ಪೌರಾಣದೊಳ್ ಇಪ್ಪತ್ತೆರಡನೆಯ ಸಂಧಿಸಮಾಪ್ತ ಮಿಂತು ೧೫೦೫ ಪದ್ಯಂಗಳಿಗೆ ಮಂಗಲಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ



## ೨೩ನೇ ಸಂಧಿಯು.

### ೬ನೇಪಟ್ಟ—ಎರಡನೆಯ ಚೆನ್ನವೀರಸ್ವಾಮಿಗಳು.

ಸೂಚನೆ—

ಗುರುಪುರಾತನಪುರುಷಕರ್ತನು । ಮರಿಯೆನಿಪಶ್ರೀಚೆನ್ನವೀರೇ ।
ಶ್ವರನನಾಮದಿಮತ್ತಲೀಲಾಮೂರ್ತಿಯೆನಿಸಿದನು ॥ಪಲ್ಲ॥
ಗುರುವಶ್ರೀಗುರುಪರಮಪಾವನ । ಕರಸರೋರುಹಜಾತನದ್ಭುತ ।
ತರದಲೀಸುಸ್ವಾಮಿಯೆನಿಸುವನಾದನೀಜಗಕೆ ॥
ನರಸುರೋರಗಲೋಕಮಹಿಮೂ । ಪುರುಷನೆನಿಸುವಚೆನ್ನವೀರೇ ।
ಶ್ವರನುಪಾಲಿಕೆಕರುಣದಿಂದಲೆತನ್ನಭಕ್ತರನು ॥ ೧ ॥
ಗುರುನಿರಂಜನಚೆನ್ನವೀರೇ ಶ್ವರನಮಹಿಮೂಲೀಲೆಯನುನೀ ।
ವರಿತುಕೊಳ್ಳಿರಿಮುಂದೆಬನ್ನಿರಿಭಕ್ತರೆಂಬವರು ॥
ಗುರುವಿನಪ್ಪಣೆಯಂತೆಸ್ವಾಮಿಯು । ಪರಮದಾಸೋಗಡಲಿನಿಂತಾ ।
ದರಿಸಿಜಂಗುಳಿದೈವಕೆಲ್ಲಕೆತೃಪ್ತಿಬಡಿಸುವನು ॥ ೨ ॥
ಇರುತಿರಲ್‌ಗುರುರಾಯನೀಪರಿ । ಧರಣಿಯಲಿನಿರ್ಮಾಯನಾಟದೊ ।
ಳರರೆಕಲಿಯುಗದಲ್ಲಿಕೌತುಕಮಾಯ್ತುಕೆಲವರಿಗೆ ॥
ಗುರುವಿನಡಿದಾವರೆಯಭಕ್ತಿ । ಸ್ಫುರಣಳೈಸಿತುಮೂಲವಾಙ್ಛನ ।
ಕುರುಹಿನಾಟವ್ರೂತಿಳಿಯದಾದುದುಮರ್ತ್ಯದೀಜನಕೆ ॥ ೩ ॥
ಪಗಲಿರುಳುಲೋಕದಲಿಬೆಳಗು । ತ್ರಗಲದಿರ್ಪನುಶಂಭುಕರ್ತನು ।
ಜಗದಜಂಜಡಮಲಿನಮನಕವನಗಸನೆನಿಸುವನು ॥
ಹೊಗರಿಡುವನಿಂದೊಕ್ತಿಶಿಲೆವಿಡಿ । ದೊಗೆದುಮಡಿನೂಡುವನುಮನವನು ।
ಸುಗುಣಿಗಳೆದಿಟ್ಟೆಸಿರಿದೇಹದೊಳಿರ್ಪದುಮ್ಮನವ ॥ ೪ ॥
ಸುತರತಪ್ಪಿಗೆತಪ್ಪದಲೆಮುಳಿ । ಯುತಲಿದಂಡಿಸಿಬುದ್ಧಿಗೊಡುವಾ ।
ಪಿತನವ್ರೋಲ್ಗುರುರಾಯಕರ್ತಸುಮಧ್ಯಲೋಕದಲಿ ॥
ಶ್ರುತಿಗೆಸೇರದಮೂರ್ಖಮನುಜರೊ । ಳತಿಮಹತ್ವದೆಜಡೆದುಸಲೆಸ ।
ನ್ಮತಿಯನೀವುತ್ತಿಹನುಭಕ್ತರೆಕೇಳಿರೀಕಥೆಯ ॥ ೫ ॥

ಗುರುವಿನಲಿಸ್ತ್ರೀವಿಷಯವೊಂದಿಸಿ । ಸರಸನುಡಿದರುಬಿರುಸುನುಡಿದರು ।
ಜರಿದುಬಿಟ್ಟರುವಂಠಕೆಬರುವವುದುರಭಿಮಾನಿಗಳು ॥
ಎರಗಿಗದ್ದುಗೆಗೈದೆಪೋಽಪರು । ಹೊರಹೊರಗೆತಿರುಗಾಡಿನಡೆವರು ।
ಗುರುಗೆಸದರಿಗೆಮುಂದೆಹಾಯುರುಮರವಿಮಾನವರು ॥ ೬ ॥
ಬರುವರತಿಗುಪ್ತದಲಿಗದ್ದುಗೆ । ಗುರುಪ್ರದಕ್ಷಣೆಮಾಡಿಪ್ರಾರ್ಥಿಪ ।
ರರರೆಪರಶಿವನೀನೆರಕ್ಷಿಪುದೆಂದುನಮಿಸುವರು ॥
ಗುರುವಿಗೆರಗದೆಸದರಿಗೆರಗದೆ । ಗುರುವೆಸ್ವಾಮಿಯೆರಕ್ಷಿಸೆನ್ನದೆ ।
ಕರುಣವಿರಲೆನ್ನದಲೆಜರಿವವರಾದರೇವೇಳ್ವೆ ॥ ೭ ॥
ಗುರುನಿರಂಜನಭಕ್ತರೇನೀ । ವರಿತುಕೊಳ್ಳಿರಿಮುಂದಿನಾಟವ ।
ನರಿದುನಡೆಯುವದೆಲ್ಲಭಕ್ತರುಜೋಕೆಬಲುಜೋಕೆ ॥
ಜರಿವಭಕ್ತರಿಗೆಲ್ಲಸದ್ಗುರು । ವರಸುಮುನಿಯುವನಾದನಾಕ್ಷಣ ।
ಕರರೆಕರ್ತನುಸೆಳೆದನಾಪುರುಷತ್ವವೆಂಬುದನು ॥ ೮ ॥
ಗುರುವಿನೆಡೆಯುಲಿಸೇವೆಗೈವರೆ । ಗುರುಕಥಾಮೃತಸಾರಕೇಳಿರಿ ।
ನರರವರಪುರುಷತ್ವವಳಿಯಲ್ಕಂಜುತಾಜನರು ॥
ಸೊರಗಿದರುಮರುಗಿದರುಬಾಳ್ವೆಯು । ಭರವುಕುಗ್ಗಿತುಗುರುವುಮುನಿದೀ ।
ಪರಿಯೊಳೆಮಗವನಿಂತುಮಾಡಿದನೆಂದುತಿಳಿದವರು ॥ ೯ ॥
ತರುಣಿಯರಿಗುರೆನಾಚಿನುಡಿಸರು । ನೆರವಿಯುಲಿಮುಖದೋರಿಸರುನಿಜ ।
ಸಿರಿಯುಹೊಲಮನೆಚಿಂತೆಮಾಡರುಕುದಿವುತಾತ್ಮದಲಿ ॥
ಗುರುವಿನಿಂದೀಹಾಡುನಮಗಾ । ಗುರುವಿನಿಂದಲೆಪಡೆಯಬೇಕೆಂ ।
ದರಿತುಸದರಿಗೆಬರುವರಾಜರುಹೇಳಲೇನದನು ॥ ೧೦ ॥
ಗುರುವೆಸ್ವಾಮಿಯೆಬುದ್ಧಿಯೇನಾ । ವರಿಯದಲೆಪಳಿಗೈದುಕೆಟ್ಟೆವು ।
ಪರಿಕಿಸಲ್ಪುರುಷತ್ವವಿಲ್ಲಾಯ್ತೆಮಗೆಮಧ್ಯದಲಿ ॥
ಇರುವದೆಲ್ಲವುವಾದದಾಟವು । ಬರಿಯಭ್ರಾಂತಿಯುನಮ್ಮದೆಂಬುದು ।
ಕರುಣಿಸಿರಿಪುರುಷತ್ವವೆಮಗೆಂದೆರಗಿದರುಬಿಡದೆ ॥ ೧೧ ॥
ಮತಿವಿಹೀನರುನಾವುಪಾದವೆ । ಗತಿಯುನಮಗುದ್ಧಾರಮಾಡಿರಿ ।
ಪತಿತಪಾವನಮೂರ್ತಿಕರುಣಿಸಿರೆಂದುಮೊರೆಯಿಡಲು ॥

ಮತವುಸಮ್ಮತವೆನಿಸಿಸಾಗಲಿ । ರಥವುಸಾಗಲಿನಿಮ್ಮಬಾಳ್ವೆಯು ।
ಕಥೆಯುಸಾಗಲಿಗುರುಪುರಾಣದೊಳೆಂದನಾಸ್ವಾಮಿ ॥ ೧೨ ॥
ಕರೆದುಮುಂದಕ್ಕವರನಾಗುರು । ವರನುಸ್ವಾಮಿಯುಹರಸಿಫಲವನು ।
ಕರುಣದಿಂದಲೆಕೊಟ್ಟುಕರ್ತಗೆನುಡಿದನೀಹವಣು ॥
ಗುರುಮಹಾಪ್ರಭುವ-ರವಿಮನುಜರೊ । ಳಿರಿಸುಕೃಪೆಸಂಸಾರಸಾಗಿಸು ।
ಕರುಣಿಸರ್ವಾಂತರ್ಯನಿನ್ನವೆಬೇಟಮೂಟಗಳು ॥ ೧೩ ॥
ಧರೆಯುಮೇಲಣಮನ-ಜರೆಲ್ಲ-। ಗುರುಫಕೀರನನಂಬಿಸ-ಖಿಸಿರಿ ।
ನರನುತಾನಲ್ಲವನುಜಗದಾಸೂತ್ರಧಾರಕನು ॥
ಇರುವೆಮೊದಲಾದಖಿಳಜೀವರ । ಹೊರಗೊಳಗೆತಾನಿರುವನಾತನು ।
ಕರುಣಬಂದೆಡೆಗೊಲೆವನುಳಿದರನೆಲ್ಲರನುಬಿಡುವ ॥ ೧೪ ॥
ಹರಿಮಹತ್ವವುಶಿವಮಹತ್ವವು । ಗುರುವ-ಹತ್ವವುಸಾಧುಯೋಗೀ ।
ಶ್ವರಮಹತ್ವವದೇನೊತೋರಲಿಯೆಂಬರ್ಕೆಲರು ॥
ಜರಿಯೆಸೇವಿಸೆಮುದದೆಮೋದದೆ । ಗುರುಮಹತ್ವವುತೋರ್ಕುವ-ಲ್ಲದೆ ।
ಬರಿದೆದೊರೆದಪುದೇನುಫಲವದುಶ್ರಮುದಪರಿಯಹುದು ॥ ೧೫ ॥
ಪರಶಿವನನಿರುಪಮುದಪಟ್ಟದ । ಸಿರಿಯೊಳೆಸೆವಾಚನ್ನವೀರೇ ।
ಶ್ವರನಸಲ್ಲೀಲೆಯನುಕೇಳರಿನೆನಪಿನಲ್ಲಿಡಿರಿ ॥
ಗುರುವಿನಂದದಿತನ್ನಮಠದೈ । ಸಿರಿಯಕಾರ್ಯಂಗಳನೆನಡೆಯಿಸು ।
ತಿರುವನೈಬೇಸಾಯದಲಿಬಹುಪ್ರೇಮಿಯೊಗಿಹನು ॥ ೧೬ ॥
ಕಡುನಗಾರಿಯತಾಣದಲಿತಂ । ಪಿಡಿದುನಿಯುಮಿತಕಾಲಕಾಗುವ ।
ಮೃಡನಸ್ವಾಮಿಯದಿವ್ಯಚೌಘಡವಾದ್ಯದಬ್ಬರವು ॥
ಪೊಡವಿಯಲಿಸೊಂಪಿಂಪುಕಂಪೆನ । ಲೊಡನೆಮಠದವರೆಲ್ಲಸಮ್ಮುದ ।
ವಡೆದುಕರ್ತಂಗೆರಗಿಸ್ವಾಮಿಗೆವಂದಿಸುತ್ತಿಹರು ॥ ೧೭ ॥
ಕೇಳರಾಗುರುಚನ್ನವೀರನ । ಲೀಲೆಯನುನಿಮಗೊರೆವೆನೈಸಲೆ ।
ಭಾಳನೇತ್ರನಶರಣಮಾಹೇಶ್ವರರನೃಪವರರ ॥
ಮೇಳವಿಸಿದನ್ಯೋನ್ಯಲೀಲಾ । ಜಾಲದಿಂಗಿತವರಿದುಕರ್ತನ ।
ಲೀಲೆಗತಿಹರುಷದಲಿಪಕಪಕನಗುವನಾಸ್ವಾಮಿ ॥ ೧೮ ॥

ಸಾಧುಗಳಸೇವೆಯಲಿಸೇರಿದ । ಸಾಧುಭಕ್ತರೆಕೇಳಿರೆಲ್ಲರು ।
ಮೇದಿನಿಯೊಳಾಮೂಲಕರ್ತನಮಹಿತಮಹಿಮೆಯನು ॥
ವೇದಪಠಿಪಗೆವಾದಿಪಗೆತ । ರ್ಕಾದಿವಿಷಯಂಗಳಲಿನಲಿವಗೆ ।
ಗಾಢಬಿದ್ದವಗೇನುಕರುಣಿಸನಯ್ಯಗುರುರಾಯ ॥ ೧೯ ॥
ವರದಿಗಂಬರದತ್ತಲೀಲಾ । ಭರದಸದ್ಗುರುಚೆನ್ನವೀರೇ ।
ಶ್ವರನುಭಕ್ತರೊಳಾಡುತಂದಾಸೋಗನಡಿಸುತಲಿ ॥
ಸ್ಥಿರಸುಖದಶಿವಪುರದಮಾರ್ಗವ । ನರಪುತಂಶಿವಸದರಿಗೆಸೆಯು ।
ತ್ತಿರಲುವಾಚ್ಛನಮಹಿಮೆಕೇಳಿರಿಸಾಧುಯೋಗಿಗಳು ॥ ೨೦ ॥
ಕುಷ್ಟಮೂಗಿರೆಪೂರ್ವನೋರ್ವನು । ಕಷ್ಟಬಡುತಲಿತನ್ನಮನದಲಿ ।
ಭ್ರಷ್ಟದೈವಕೆನೊಂದುಮುಂದಿದಕೇನುತೋಡೆನುತ ॥
ಸೃಷ್ಟಿಯಲ್ಲಿಫಕೀರಸ್ವಾಮಿಯು । ಶಿಷ್ಟಪಾಲಕನೆನಿಸಿಮಹಿಮೋ ।
ತ್ಕೃಷ್ಟನಾಗಿಹನಾತನೇಗುರುಶ್ರೇಷ್ಠನೆಂದರಿದ ॥ ೨೧ ॥
ಅರಿದುತನ್ನಯಮನದಿತಾನಿ । ರ್ಧರಿಸಿವರದಫಕೀರಸ್ವಾಮಿಯ ।
ಚರಣಕಮಲವನಂಬಿಭಕ್ತಿಯಭಾವಮಂಬಲಿದು ॥
ಇರುಳೊಳಾರಿಗುತಿಳಿಯದಂತಿರೆ । ನಿರುತವೈತಂದೆರಗಿಶ್ರೀಗುರು ।
ವರನೆಕರ್ತನೆನೀನುನನಗುದ್ಧಾರಮಾಡೆನುವಾ ॥ ೨೨ ॥
ಶ್ರೀದಸದ್ಗುರುಪಾದಪದ್ಮಾ । ಮೋದಭಕ್ತ್ಯಾಚಾರಯುತನಾ ।
ಸ್ವಾದಸೇವಾಸಕ್ತಮಧುಪಪ್ರಖ್ಯನಾದ್ವಿಜನ ॥
ಸಾದರಸ್ತುತಿಘೋಷಮಾನಿಜ । ಪಾದದಲಿಬಿಡದಡಿಸೆಪ್ರತಿನಿಶೆ ।
ಗಾಢದಯಾಂಬುಧಿಕರ್ತಪರಕಿಪನಾದನಾತನಸು ॥ ೨೩ ॥
ಇಂತುಭಕ್ತಿಯನಾಂತುಪ್ರತಿದಿನ । ದಂತ್ಯದಲಿಮಠಕೆಯ್ದಿತಾನೇ ।
ಕಾಂತದಲಿಮೊರೆಯಿಡುತಲಳುತಿರೆಭೂಸುರಾರ್ಭಕನು ॥
ಸಂತವಿಟ್ಟುದುಬಿಸಿಲುಮೇಘಾ । ಕ್ರಾಂತಮೆಸಿಸಿತುಗಗನವೆಲ್ಲವ ।
ದಂತುಮಿಂತುಂಸುರಿಯಲಾರಂಭಿಸಿತುಪೇರ್ಮಳೆಯು ॥ ೨೪ ॥
ಥಳಥಳಿಸೆಮಿಂಚುಗಳುದೆಸೆಯಲಿ । ಬಳಿಸೆಸಿಡಿಲುಗಳೆಲ್ಲಕಡೆಯಲಿ ।
ತಿಳಿಯದಂತಿರೆಹಾದಿಯೊಂದಿರುಳಲ್ಲಿಮಳೆಯೊಳಗೆ ॥

ಬಲಿದಭಕ್ತಿಯಬ್ರಾಹ್ಮಣನುತಾ । ತೊಳಲುತೊಯ್ಯನೆಚಿಂತೆಯನುಮಿಗೆ ।
ತಳೆದುಗುರುಧ್ಯಾನದಲಿಹಳ್ಳದವರೆಗೆನಡೆತಂದಾ ॥ ೨೫ ॥
ತಡೆದ.ದಕ್ಕಟಹಳ್ಳವಿಂದಿಗೆ । ಬಿಡದೆನಡೆಸುವವ್ರತಕೆವಿಘ್ನವು ।
ನಡುವೆಬಂದಿಹುದಕಟಗುರುಬಲವಿಲ್ಲತನಗೆನುತೆ ॥
ಮಿಡುಕಿದನುಮೊರೆಯಿಟ್ಟುಕರ್ತನ । ಕಡೆಗೆಕಾಯುವನೊಪ್ಪಿಸುವೆನೆನ ।
ಗೊಡೆಯನೀನೇಯೆಂದುಹೊರಳಾಡಿದನುಹಾರುವನು ॥ ೨೬ ॥
ನಡುವೆಹಳ್ಳದತೊಡರುಕಡೆಯಿತೆ । ಹಿಡಿದವ್ರತವಿದುಕೆಡುವದಾಯಿತೆ ।
ಮೃಡನಕೃಪೆಯದುತೋರದಾಯಿತೆವಿಧಿಯೆಹಾಯೆನುತಾ ॥
ದೃಢಸಭಕ್ತಿಯನಾಂತದ್ವಿಜನೀ । ಕಡೆಗನಿಂತತಿದುಃಖದಿಂದಾ ।
ಕಡೆಗೆಮಠದೆಡೆಗೆರಗಿಧ್ಯಾಸಿಪನಾದನನಿತರಲಿ ॥ ೨೭ ॥
ಗುರುಫಕೀರೇಶ್ವರನಭಕ್ತರೆ । ಗುರುವಿನಾಟವಕೇಳಿರೈನೀವ್ ।
ಮರಗುತಿರುನಾದ್ವಿಜನನಿಷ್ಠೆಗೆಕರ್ತಮರಿಯಾಗಿ ॥
ಹರಿಯುಹಳ್ಳದಕಡೆಗೆಕೊರಗುವ ಮರಳೆನೀನಾರಯ್ಯನಿಶೆಯಲಿ ।
ಹೆರವನುಸೀಹಲುಬಿಹೆದರಿಕಬಹುದೆಬಾರೆಂದಾ ॥ ೨೮ ॥
ದುರಿತಕರ್ಮದಫಲವುಣಾಸಿರೆ । ಗುರುವದೆಂತೊಲೆದಪನುಲೋಕದೊ ।
ಳಿರುವದೇನೀದೇಹಮುಳಿಯುವದಲ್ತೆಸಾಕಿದುವೆ ॥
ಹರಿವಭಾಗೀರಥಿಗೆಶಿವನಿಗೆ । ಹರುಷದಿಂದರ್ಪಿಸಿದುದಾದೊಡೆ ।
ಪರಮಮುಕ್ತಿಯುಮುಂದೆತನಗಹುದೆಂದನಾವಿಪ್ರಾ ॥ ೨೯ ॥
ಗುರುತದಿಲ್ಲವೆಮಠಕೆಮರಿಯೂ ಗಿರುವೆನೆಲ್ಲರಿಗರುವೆನೈನೀ ।
ಮರಣಬಯಸುವದುಂಟೆಭಕ್ತರುಬಾರೊಬಾರೆನುತ ॥
ಗುರುಸಮರ್ಥನುಕರ್ತನಾತಂ । ಗಿರದೆಹಂದಿಳಿಸಿದನುಮಠದೆಡೆ ।
ಗರರೆನೋಡಿರಿಗುರುದಯಾನಿಧಿಯೆಂಬುದೇಂಪುಸಿಯೆ ॥ ೩೦ ॥
ಭರದೆಬಂದಿರಿಹಳ್ಳದೊಳಗಿಂ । ದಿರದೆಕಡೆಹಾಯ್ಸಿದರಿನನಗಿ ।
ಲ್ಲಿ ಸಿದಿರಿಮರಿದೇವರೇತಾವಲ್ಲವೇಯೆನುತಾ ॥
ಎರಗಿದ್ವಿಜನಾತೋರಗದ್ದುಗೆ । ಗಿರುವಮರಿದೇವಗೆ ಕೇಳಲ್ ।
ಮರಿಗಳೆಂದರುಸಾಕುಬಿಡುಬಿಡುಚೇಷ್ಟೆಸಾಕಿರಲಿ ॥ ೩೧ ॥

ಪಾರದಾಡುದುನಿನ್ನಪುಣ್ಯವು । ಮಾರಹರಶಿವಕೃಪೆಯದಲ್ಲದೆ ।
ಮೀರಿದಾಸೆಳವಿನಲಿತಾಪ್ಪರಾಗುವವರಾರು ॥
ಮೇರೆದಪ್ಪೀಹರಿವಹಳ್ಳದೊ । ಳಾರಲ್ಯೆನಿನಗೆತ್ತಿತಂದರು ।
ಸಾರಿಹೇಳೆಂತೆಂದರಾಮುರದೇವರಂತನಿಗೆ ॥ ೩೨ ॥
ಹೇಳಿದನುತಾಂವ್ರತವಹಿಡಿದುದ । ಹೇಳಿದನುಬಲುಹಳ್ಳಬಂದುದ ।
ಹೇಳಿದನುಕರ್ತಂಗೆವಿಂಗೆಮೊರೆಯಿಟ್ಟುದೆಲ್ಲವನು ॥
ಹೇಳಿದನುಮುಂದಾದಕರ್ತನ । ಲೀಲೆಯನುಸೀವ್‌ಕೇಳಿರೆಲ್ಲರು ।
ಮೂಳಹೊಲಿಯರಿಗೇನುಹೇಳಿದರೇನುಫಲವಹುದು ॥ ೩೩ ॥
ಹಾರಿಬಂದನುಹಳ್ಳದಾಚೆಗೆ । ನೀರಮೇಲ್ಕರತಂವನೀಚೆಗೆ ।
ಸಾರಿಹೇಳುವದೇನುತೊಯ್ದಿಲ್ಲೆನ್ನಕಾಲುಗಳು ॥
ವೀರಧೀರಫಕೀರಲೀಲೆಯು ಧಾರುಣಿಯೆಳಗತ್ಯಧಿಕವಿದುಕ ।
ಣ್ಣಾರೆಕಂಡೆನುಕಂಡೆನೆಂದೆರಗಿದನುಭೂಸುರನು ॥ ೩೪ ॥
ಕೇಳಶ್ರೀಮುರಿದೇವರಾಗಳೆ । ಹೇಳದರುಗುರುವೆರಗೆವಾಚ್ಛನ ।
ಲೀಲೆಯೆಂದಾಗುರುಫಕೀರನುತಾನುತಾನಾಗಿ ॥
ಹೇಳಬೇಡನ್ಯರಿಗೆಕರ್ತನ । ಲೀಲೆಯಿದುಗಡನಿನ್ನಕುಷ್ಟವು ।
ಹೇಳಕೇಳದಲೋಡಿಹೋಗುವದೆಂದನಾಸ್ವಾಮಿ ॥ ೩೫ ॥
ಆಳುಹೋಳುಗಳೆಲ್ಲಮಲಗಿವೆ । ಕಾಳುಬಿದ್ದದೆರಾತ್ರಿಯಾಗಿದೆ ।
ಬಾಳಹಳ್ಳವುಮೇರೆದಪ್ಪಿದೆಹೋಗುವಂತಿಲ್ಲಾ ॥
ಬಾಲಮೂಡುಫಳಾರವನುನೀ । ನೇಳುಬೇಗೆಂದೆನುತಸ್ವಾಮಿಯು ।
ಹೇಳವಣ್ಣಳನಿತ್ತುಬಿಜಯಂಗೈದನುಮಠದೊಳಗೆ ॥ ೩೬ ॥
ಮಲಗಿದನುಮಠದಲ್ಲಿಭೂಸುರ । ತಿಲಕನಾತಗೆನಿದ್ದೆಹತ್ತಿರೆ ।
ಹೊಳೆದನೈಕನಸಿನಲಿಪಾಚ್ಛನುದತ್ತರೂಪದಲಿ ॥
ತಿಳಿದುನಿದ್ರೆಯನೆದ್ದುಬ್ರಾಹ್ಮಣ । ನೊಳಗೆನೆನೆದನುಗುರುಫಕೀರನ ।
ತಿಳಿದುಕೊಳ್ಳೆಂಭಕ್ತಿಗೊಲೆವಾಗುರುವಿಲಾಸವನು ॥ ೩೭ ॥
ಹರುಷಗೊಂಡಾದ್ವಿಜನುಶ್ರೀಗುರು । ವರನಸನ್ನಿಧಿಗೆರಗಿದೀವದ ।
ಸಂಸದಲಿನೋಡಿದನುಮೈಕಾಲ್‌ಕೈಗಳಂದವನು ॥

ಅರರೆಕುಷ್ಟದಕಾಯವದುವಿ । ಸ್ಫುರಿತಕನಕದಕಾಂತಿಗೊಂಡಿರೆ ।
ಹರುಷದತಿಭರದಿಂದಕುಣಿದಾಡಿದನುಭೂಸುರನು ॥ ೩೮ ॥
ವರಶಿರಃಪುರದಾರ್ಯರೇನಿವು । ಗೊರೆವುದೇನಿಹುದಿನ್ನುನೀವಾ ।
ಗುರುಮಹಾತ್ಮನಸೇವೆಯಲಿನಿತ್ಯದಲಿನಲಿಯುವಿರಿ ॥
ವರದಿಗಂಬರದತ್ತವಿಶ್ವಂ । ಭರನುಸದ್ಗುರುಭಕ್ತಿಗೋಸುಗ ।
ಮಿರುತೆತೋರ್ದಡಗುವನುತಿಳಿಯಿರಿಭಕ್ತರೆಂಬುವರೆ ॥ ೩೯ ॥
ಲೀಲೆಯೊಡುತೆಭಕ್ತರಲಿಶಿವ । ಲೀಲೆದೋರುತೆಸುಜನರನುಮಿಗೆ ।
ಪಾಲಿಸುತೆಸನ್ನಿಧಿಯಶರಣಾಗತರನಗಲದಲೆ ॥
ಮೂಲಕರ್ತನಪಾದಸೇವಾ । ಲೋಲನಾಗಿರುತಿರಲುಸ್ವಾಮಿಯು ।
ಕೇಳಿರೈಮುಂದಾದಸಂಗತಿಸಾರಸಾಧ್ಯಂತಾ ॥ ೪೦ ॥
ಬರೆಸಮೀಪಿಸಿಗುರುರಥೋತ್ಸವ । ಪರಮಕಾರ್ಯವುಸ್ವಾಮಿದೇಶಾಂ ।
ತರದಿಭಿಕ್ಷಾಟನೆಗೆಸಿದ್ಧತೆಗೈದನಂದದಲಿ ॥
ವರಫಕೀರನಪಾಚ್ಛನಪ್ಪಣೆ । ಪೆರೆದುಸದ್ಗುರುಚೆನ್ನವೀರನು ।
ಹೊರಟನೈಮಠಬಿಟ್ಟುಬಿರುದಾವಳಿಯವಿಭವದಲಿ ॥ ೪೧ ॥
ಗುರುವಿಗರಪದೆಗ್ರಾಮಪಂಚರು । ನೆರೆದುಸಮ್ಮತಿಗೊಡಲುಸಾಂಗಲಿ ।
ಯೆರೆಯರಪ್ಪಣೆಯಿಂದೆಬಂದಿಹಕಾರಭಾರಿಗಳು ॥
ಪರಿಶೆಗಾಣೆಯಪಟ್ಟಿಯನುನಿ ರ್ಧರಿಸಿಕಟ್ಟಳೆಗೈದರೈಜನ ।
ವರಿತುಸೋಜಿಗವಟ್ಟುನೆನೆದುದುಕರ್ತನಂಘ್ರಿಯನು ॥ ೪೨ ॥
ಊರಹಿರಿಯರುಕೂಡಿಸಾರಾ । ಸಾರವರಿಯದೆನಡಿಸಿದಾಟಕೆ ।
ಚಾರುಚರಿತನುಚೆನ್ನವೀರನುಕರ್ತನೊಳಗಾಗಿ ॥
ಪಾರಮಾರ್ಥಾನಂದದಲಿಸುವಿ । ಚಾರದಲಿನಿಜಸೌಖ್ಯಬಡುತಿಹ ।
ಧೀರಭಕ್ತರಿಗರುಹಿದನುಲೌಕಿಕದಸಂಗತಿಯೂ ॥ ೪೩ ॥
ಎಲ್ಲಭಕ್ತರಭಕ್ತಿಯನುತಾ । ನಲ್ಲಿತಾಕೈಕೊಳುತೆಭಕ್ತರಿ ।
ಗೆಲ್ಲಹರಸುತೆಪೊಳಲುಪಳ್ಳಿಗಳಲ್ಲಿಕೃಪೆಯಿಡುತೆ ॥
ಖುಲ್ಲರಾಟಕ್ಕೊಪ್ಪದಾಗುರು । ವಲ್ಲಿಗಲ್ಲಿಗೆಶಿಷ್ಯರಿಂಜಗ ।
ದಲ್ಲಿಸಂಚರಿಸುತ್ತೆಕಳಸಕೆಬಂದನಾಸ್ವಾಮಿ ॥ ೪೪ ॥

ಗುರುವರನಕರೆತರಲಿಕೆಂದಿನ । ಪರಿಯೊಳಾಶಿರಹಟ್ಟಿಗ್ರಾಮದ ।
ಹಿರಿಯರಲ್ಲಿಗೆಹೋಗಿಸ್ವಾಮಿಗೆಬಾಗಿಬೆಸಗೊಳಲು ॥
ಗುರುರಥೋತ್ಸವಕಾರ್ಯವೇನದು । ಸರಸವೆನಿಸದುಸಾಕುಸಾಕೀ ।
ವರುಷವೀತಕ್ಕೆಂದನ್ನೆನಸುನಗುತೆಗುರುರಾಯ ॥ ೪೫ ॥
ಗುರುರಥೋತ್ಸವಬಿಡಲದಾಗದು । ಗುರುವೆಪಾದಕೆಚಿಂತೆಯೇತರ ।
ದಿರುವೆಪಾವ್‌ಗಡಬುದ್ಧಿ ಬಿಜಯಂಗೈವುದೆಂದೆನಲು ॥
ಪರಮಕರ್ತನಪಾದಸನ್ನಿಧಿ । ಸ್ಮರಿಸಿದೀನೆನ್ನುತ್ತೆಸದ್ಗುರು ।
ವರನುವೈರಾಗ್ಯದಲಿಹೊರಟನುಬಿಟ್ಟುಕಳಸವನು ॥ ೪೬ ॥
ಗುರುಫಕೀರನುಮುಂದಿನಾಟಕೆ । ಹರುಷಗೊಂಡೊಳಗಂತುನಿಜಪರಿ ।
ಚರರುಸೇವಿಸುತಿರಲುಬ್ರಹ್ಮಾನಂದಲಹರಿಯಲಿ ॥
ಚರಿಸುತಧ್ವದಗ್ರಾಮಭಕ್ತರ । ಪರಿಯನರಿವುತೆಬಿರುದುಹೊಗಳು ।
ತ್ತಿರಲುವಂದಿವ್ರಜವುಬಿಜಯಂಗೈದನೈಮಠಕೆ ॥ ೪೭ ॥
ವರುಷದಂದದಿವರ್ತಕರುಗಡ । ಗುರುಗಳೆನಿಪರುಸ್ವಾಮಿಯೆಂಬರು ।
ಗುರುರಥೋತ್ಸವಕೆಂದುಕೂಡಿದರೆಲ್ಲಯೋಗಿಗಳು ॥
ನೆರೆದರಾಸಾಧುಗಳುಸಂತರು । ಪರಮಚರಮೂರ್ತಿಗಳುದೇಶಾಂ ।
ತರದಿಮಠದಲಿಬಂದುನೆಲಸಿದರೆಲ್ಲರೆಡೆಬಿಡಿದು ॥ ೪೮ ॥
ಉರಗರಾಜನುತೆನ್ನಬಳಗವ । ನಿರಿಸಿಕೊಂಡಾರಥದಿಮಿಗೆಭೋ ।
ರ್ಗರೆವನೋಯೆಂಬಂತೆಭೋರ್ಗರೆದತ್ತುಶ್ರೀರಥವು ॥
ಪರಮಭಕ್ತರುಶರಣರಾಗುರು । ವರನತಂತ್ರಕ್ಯಾತ್ಮದಲಿಬಹು ।
ತರದಸ್ಮೃತಿತತಿಯಿಂದೆಸ್ತುತಿಸಿದರಾಪರಾತ್ಪರನ ॥ ೪೯ ॥
ನೆರೆದುಪ್ರಮುಖರುರಾಜಕೀಯರು । ಚರಣಸನ್ನಿಧಿಗೆರಗಿಪ್ರಾರ್ಥಿಸು ।
ತಿರುವರೆಲ್ಲರಮೂತುವಿಾರದೆಸ್ವಾಮಿಸದ್ಗುರುವು ॥
ಹೊರಟುರಥದೆಡೆಗೈದಿಬಲುಬೇ । ಸರಿಸಿಗಾಲಿಗೆತೆಂಗಿಲಿಟ್ಟನು ।
ಗುರುಸಮರ್ಥನಲೀಲೆಕೇಳಿರಿಸಕಲಕುಲದವರು ॥ ೫೦ ॥
ವರುಷದಂತಿರೆಹುಣ್ಣಿವೆಗೆಶ್ರೀ । ಗುರುರಥವುಬಲುಸೊಬಗಿಸಿಂದಲಿ ।
ನರರಕಣ್ಮನಕೆಸೆವುತ್ತೈದಿತುಶಾಂತವೆಂದನಿಸಿ ॥

ತಿರುಗಿರಥವಾಕಾಲರುದ್ರನ । ಪರಿಯಪ್ರೋಲಾವೇಶದಿಂದಲಿ ।
ಭರದಿತನ್ನೆಡೆಗೈದಿನಿಂದುದುಕರ್ತನಾಜ್ಞೆಯಲಿ ॥ ೫೧ ॥
ಮುನಿಕುಲೋತ್ಕಟಗುರುವುಸಿಂಹಾ । ಸನದೊಳೆಸೆದಿರೆಶಿವನಗೌಡನು ।
ನೆನವುತಿರೆಕರ್ತರನುಭಕ್ತರುಸೇವಿಸುತ್ತಿರಲು ॥
ಅನುಚರರುಗುರುಪಾದದಲಿನಿಜ । ಮನವನಿಟ್ಟರೆವಂದಿಗಳುಬಿಡ ।
ದನುನಯದೊಳುಗ್ಗಡಿಸುತಿದ್ದರುಬಿರುದುಗುರುವರನಾ ॥ ೫೨ ॥
ಬಿಡದೆಜನರಿಂದಾಣೆಪಟ್ಟಯು । ನೆಡೆವಿಡಿದುತಕೊಳ್ಳುತಿರಲಡಿ ।
ಗಡಿಗೆನಡೆದವುಜಗಳಗಳವವಿಚಾರವರ್ಗದಲಿ ॥
ಮೃಡನಮಂತ್ರಪ್ರೊವಿಷ್ಣುತಂತ್ರವ್ರೊ । ಕಡೆಗದೋರ್ವಳುನ್ಯಾಯತಂದಳು ।
ಕಡುಹಿನಿಂದೆನಗೆಳೆದುಕೆಡವಿದರೆಂದುದೂರಿದಳು ॥ ೫೩ ॥
ಅನಿತರೊಳ್ಶ್ರೀಶೈವಸಂಭವೆ । ವನಿತೆಯೋರ್ವಳುಮಠವಹೊಕ್ಕಳು ।
ಘನರವದೆರೋದಿಸುತೆನಿಂದಳುಸ್ವಾಮಿಯೆದುರಿನಲಿ ॥
ತನಗೆತಗಲಿದವಕ್ಕಟಾದು । ಜನರಕಡೆಯಿಂಬಾಧೆಗಳುಗಡ ।
ಚಿನುಮಯಾತ್ಮನೆಗುರುವೆಸಲಹೆಂದಿಟ್ಟಳ್ಮೊರೆಯಾ ॥ ೫೪ ॥
ಶ್ರವಣವೂದುದುಸ್ತ್ರೀಯಬಳಲಿಕೆ । ಯವಳವೊರೆಯನುಕೇಳ್ದುಶ್ರೀಗುರು ।
ವವಳಿಗಭಯವನೀಯೆಪುರದಧಿಕಾರಿಗಳುಮುನಿದು ॥
ಭುವನವಲ್ಲಭನಾದಕರ್ತನ । ಹವಣವರಿಯದೆಕಾರ್ಯಮದದಲಿ ।
ಕವಿದುಹೊಕ್ಕರುಮಠವನುರೆಭಯಗೊಂಡುದಾಜಾತ್ರೆ ॥ ೫೫ ॥
ರಾಜಕೀಯರುಮಠವಹೊಗಲಾ । ರಾಜರಾಜೇಶ್ವರಿಯುಕರ್ತನು ।
ಸಾಜಸೂತ್ರದೊಳೆಳೆದುಕೊಂಡರುತಮ್ಮಮೂರ್ತಿಯನು ॥
ರಾಜಕೀಯರುಸಾಂಬಮಾಯೂ । ವ್ಯಾಜದಲಿಹೊರಹೊರಟುಹೋದರು ।
ವೌಜದಾಯಿತುಕಪಟನಾಟಕನಾಟಕೇನೆಂಬೆ ॥ ೫೬ ॥
ಓಡಿಹೋದರುಬಾಹ್ಯಭಕ್ತರು । ನೋಡಿನಡೆದರುಬಲವಿಹೀನರು ।
ಬೇಡಿಕೊಂಡರುಪಾಷ್ಟಸಂಘ್ರಿಗೆಸಾಧುಸಜ್ಜನರು ॥
ರೂಢಿಯಲಿಸದ್ಭಕ್ತರೆಲ್ಲರು । ಕೂಡಿನುಡಿದರುಯುಗದಕೃತಿಕೊಂ ।
ಡಾಡಿದರುಗಡಕಾಲಮಹಿಮೆಯದೆಂದರೇನೆಳ್ವೆ ॥ ೫೭ ॥

ರಾಜಕೀಯರುಮರಳಿಬಂದರು । ಸಾಜತಪ್ಪನುಹೊರಿಸಿಹಿಡಿದರು ।
ವಾಜದೊಯ್ದು ರುಶಿವನಗೌಡನಹೇಳಲೇನದನು ॥
ಈಜನಕೆಬಹುಚಿಂತೆಯಾದ । ತ್ಮೋಜೆಗೆಟ್ಟುಗುಮಠದಸಂಸ್ಥಿತಿ ।
ಈಜಗದೊಳನ್ಯಾಯವೆಂದುದುಸಕಲಜನಕುಲವು ॥ ೫೮ ॥
ಅಂದುಕರ್ತನಗದ್ದುಗೆಗೆಸಾ । ರ್ತಂದುಸ್ವಾಮಿಯುಮೌನಮಂತ್ರವ ।
ನಂದುವಿನಮಿತನಾಗಿಪ್ರಾರ್ಥನೆಗೈದನೇನೇನೋ ॥
ಕಂದುಗೊರಲಾಜ್ಞೆಯಲಿಸಮ್ಮುದ । ಹೊಂದಿತದ್ಗುರುಸ್ವಾಮಿಸದರಿಗೆ ।
ಬಂದೆಸೆವುತಾನಂದಬಡಿಸಿದನಾತ್ಮಭಕ್ತರನು ॥ ೫೯ ॥
ನ್ಯಾಯನಡೆದುದುಕೆಲವುಕಾಲವು । ರಾಯರೆಲ್ಲರುಕೂಡಿಸಕಲೋ ।
ಪಾಯದಲಿನಡೆನೋಡಿಬಿಟ್ಟರುಶಿವನಗೌಡನನು ॥
ನ್ಯಾಯತೀರ್ಗಡೆಯಾಯ್ತುಶ್ರೀಗುರು । ರಾಯನಾಕಡೆಗಿಲ್ಲನೇನೆಂ ।
ದಾಯಿತಾಗುರುಸ್ವಾಮಿಯೆಸೆದನುತನ್ನಸದರಿನಲಿ ॥ ೬೦ ॥
ವರತಪಸ್ಸಾಮ್ರಾಜ್ಯಶಿವಸುಖ । ವೆರೆದುಸದ್ಗುರುಸ್ವಾಮಿಭಕ್ತಿಗೆ ।
ಕರುಣಿಸುತೆದಾಸೋಗದಲಿತಾನಿರತನಾಗಿರಲು ॥
ಗುರುರಥೋತ್ಸವದಿವಸಪೊದಗಿರೆ । ಪರಮಕರ್ತಂಗೆರಗಿಹೊರಟನು ।
ಬಿರುದುಗಳವಾದ್ಯಗಳಜಯಜಯಘೋಷದೇಳ್ಗೆಯಲಿ ॥ ೬೧ ॥
ಬಿಡೆವುಬಿಡೆವಣೆಪಟ್ಟಿಯನುಹಳೆ । ನಡತೆಯಂತೀಗುರುರಥೋತ್ಸವ ।
ನಡಿಸುವೆವುರಥವೆಳೆದುಸಾಂಗೋಪಾಂಗವೆನಿಸುವೆವು ॥
ಹಿಡಿದಛಲವಿದುನಮ್ಮದೈಸೈ । ಪೊಡವಿದೇವರಜಾತ್ರೆಗೆಲ್ಲೆಡೆ ।
ನಡೆದುದೀತಲೆಪಟ್ಟಿಯೆಂದುದುಪ್ರಮುಖಮಂಡಳಿಯು ॥ ೬೨ ॥
ಪರಿಶೆಗೊದಗಿರೆಪಟ್ಟಿಚಿಂತಾ । ಭರಿತರಾಗಿರೆಭಕ್ತರೆಲ್ಲರು ।
ಗುರುದಿಗಂಬರನುಠವಬಿಟ್ಟನೊಯೆಸ್ಮುತಿರಜನರು ॥
ಮರವಿಗೆಚ್ಚರಕೊಟ್ಟುಶರಣರ । ಕುರುಹುತೋರಿಸಿಸಾರಿಪಟ್ಟಿಯ ।
ನಿರದೆಬಿಡಿಸುವೆನೆಂದುಛಲದಲಿನುಡಿದನಾಸ್ವಾಮಿ ॥ ೬೩ ॥
ಹರನರಥವಿದುಸಾಗಬಾರದು । ಗುರುರಥೋತ್ಸವವೆನಿಸಬಾರದು ।
ನರರಸಾಹಸನಡೆಯಬಾರದುನೋಡುಪ್ರಭುರಾಯಾ ॥

ಕುರುಹುತೋರಿಸಿಬಿಡಿಸಿಪಟ್ಟಿಯ । ಬಿರುದುಹೊಗಳಿಸಿದೀನದೀನೆನೆ ।
ಮೆರಿಸುನಿನ್ನನಿಶಾನಿಯೆಂದನುಗುರುಫಕೀರೇಶಾ ॥ ೬೪ ॥
ನರರಿಗೆಚ್ಚರಗೊಡುತಲಿರುವದು । ನರರಬಲಿಯಲಿಪಾರುಗೈವುದು ।
ಶರಣರಂಬಿಡದೆತ್ತಿಕೊಂಬುದುನನ್ನಗುರುದೇವಾ ॥
ದುರಿತಕಲಿಯುಗವಾದೊಡಂಶ್ರೀ । ಗುರುವುದೊಡ್ಡವನೆಂದುಹೊಗಳುವ ।
ಬಿರುದುನಿನ್ನದುಸತ್ಯವೆನಿಸೈಯೆಂದನಾಸ್ವಾಮಿ ॥ ೬೫ ॥
ಎನುತಲೀಪರಿತಾನೆತನ್ನೊಳ । ಗನುನಯದೆಸಂಚಾರವಮುಗಿಯಿಸಿ ।
ಚಿನುಮಯಾತ್ಮನುಮಠಕೆದಯವಾಡಿದನುಶೀಘ್ರದಲಿ ॥
ಜನವುಪರಿತಂದತ್ತುಮಠಕಾ । ತನಿಗೆಶಿರಬಾಗಿತ್ತುಬುದ್ಧಿಯೆ ।
ಚಿನುಮಯನೆನಿನ್ನಾಟತಿಳಿಯದೆನುತ್ತೆವಂದಿಸಿತು ॥ ೬೬ ॥
ಗುರುವಿನಲಿಭಯಭಕ್ತಿವಹಿಸಿದ । ಪುರುಷರೇನೀವಿನ್ನುಕೇಳಿರಿ ।
ಗುರುಫಕೀರನುಭಲವನಾಂತನುಕರ್ತನೊಳಗಾಗಿ ॥
ಪರಿಕಿಸಲ್ಕಾರಳೆದರೇನದು । ಗುರುರಥವುತಾಂಮಿಸುಗಬಾರದು ।
ಶರಣರಾಟದಗುರುತುಗಂಟನ್ನೆಂದನಾಸ್ವಾಮಿ ॥ ೬೭ ॥
ಕುರುಹುಕಾಣಲಿಶ್ರೀಫಕೀರೇ । ಶ್ವರನಪೊಸಪಾವಾಡುತೋರಲಿ ।
ನರರಚಲ್ಲಾಟಗಳುತಗ್ಗಲಿಬೊಗ್ಗಿಜನಬರಲಿ ॥
ಹರಿವುದೆಂದಿಗೆಪಟ್ಟಿಯಂದಿಗೆ । ಗುರುವಿನಾಜ್ಞೆಗೆರಥವುಸಾಗಲಿ ।
ಗುರುಫಕೀರನಬಿರುದುನೋಡಲಿಯೆಂದನಾಸ್ವಾಮಿ ॥ ೬೮ ॥
ಆಗಿಹೋದರುಹಿಂದೆದೊಡ್ಡವ । ರಾಗುರಾತ್ಮಟವುಹಿಮೆದೋರುವ ।
ರೀಗಳಾರುಂಟೆಂದುನುಡಿವರುಮರವಿಮೂನವರು ॥
ಭೋಗಿಭೂಷಣನೆಂದಿಗಾದೊಡ । ಮೊಗಳುಂಬಿಡದಿರ್ಪನೆಂಬುದು ।
ಶ್ರೀಗುರುವೆನೀತೋರಿಸೀಜಗಕೆಂದನಾಸ್ವಾಮಿ ॥ ೬೯ ॥
ಇಲ್ಲಿನಿಲ್ಲಲಿಲಕ್ಷ್ಮಿತಾನವ । ಳಿಲ್ಲಿಸೊಗಸಲಿಶಕ್ತಿಯೆನಿಸುವ ।
ಳಿಲ್ಲಿನೆಲಸಲಿವಾಣಿಸಾಗದೆರಥವುಸೈತಿರಲಿ ॥
ಎಲ್ಲಪರಿಶೆಯುಬರಲಿಸಾಸಿಗ । ರೆಲ್ಲರೆಳೆದೇಪರಿಕೆಗೈಯಲಿ ।
ಬಲ್ಲಿದನುಗುರುವೆನಿಸಿಬೆಳಗಲಿಯೆಂದನಾಸ್ವಾಮಿ ॥ ೭೦ ॥

ಎಲ್ಲಭಕ್ತರುಬರಲಿನಿನ್ನೆಡೆ । ಗೆಲ್ಲರುಂಸೇವಿಸಲಿನಿಜಕೃಪೆ ।
ಗೆಲ್ಲರುಂಸತ್ಪಾತ್ರರಾಗಲಿಕರ್ತಮುದಿಪಾಚ್ಛಾ ॥
ಖುಲ್ಲರೆದೆಗಂಬೆಸೆದುತೋರುವ । ದೆಲ್ಲನಿನ್ನದುನನ್ನದೆನ್ನುವ ।
ದಿಲ್ಲನೀಕಡೆಹಾಯಿಸೈನನಗೆಂದನಾಸ್ವಾಮಿ ॥ ೭೧ ॥
ನಿನ್ನಮಠವಿದುನಿನ್ನಸೊಬಗಿದು । ನಿನ್ನಧ್ವಜವಿದುನಿನ್ನಬಿರುದಿದು ।
ನಿನ್ನಸೂತ್ರದಬೊಂಬೆಯಾನೀಸರ್ವಪ್ರಾಣಿಗಳು ॥
ಇನ್ನಿಹೆಯುಪಟ್ಟಯುನುಸಲಿಬಿಡು । ವನ್ನಿಗಂರಥವಿಸುಕಬಾರದು ।
ನಿನ್ನಬಿರುದನುಕಾಯ್ದುಕೋನೀನೆಂದನಾಸ್ವಾಮಿ ॥ ೭೨ ॥
ತಾನೆತನ್ನೊಳಗಾಗಿಪರಶಿವ । ಸ್ವಾನುಭಾವದಾಜ್ಞಾನಸದರಿಗೆ ।
ಮೌನನಾಗಿರೆಸ್ವಾಮಿತತ್ಕ್ಷಣಕಲ್ಲಮುಪ್ರಭುವು ॥
ಏನಿದೇನೈನೆನಹುನೆರೆನಿನ । ಗಾನಿಹೆನುಸರ್ವಕ್ಕುಮಲ್ಲಮ ।
ತಾನಿಹನುತಿಳಿಯೆಂದುಕಣ್ಮರೆಯೊದನಾಕರ್ತಾ ॥ ೭೩ ॥
ಹೇಳುತಡಗಿದಕರ್ತನಾಟಕೆ । ಲೋಲಸದ್ಗುರುಸ್ವಾಮಿತನ್ನೊಳ ।
ಲೀಲೆಗಂಡಾನಂದದಲಿತಾನೆಂದನಾಪ್ತರಲಿ ॥
ಮೂಲಪಾಚ್ಛನನಂತಮಹಿಮೂ । ಜಾಲನಸ್ಥತಲೀಲೆಯಾತನ ।
ಲೀಲೆಯೇಂಬಣ್ಣಿಸಲಿಭಕ್ತರೆನೋಡಿರನ್ನೆಂದಾ ॥ ೭೪ ॥
ಆರದೇನುಗುಮಾನಶರಣರಿ । ಗಾರದೇನುಮುಲಾಜವಲ್ಲಮ ।
ಮೂರಹರಸದ್ಗುರುವಿಗೇಂಗೈಯ್ಯುವರುಲೌಕಿಕರು ॥
ಮೂರಹರನಾವಿಷ್ಣುಮಾಯೂ । ಕಾರಪುರುಷನಮೌಜಿನಾಟಕೆ ।
ಧಾರುಣೀಜನರೇನುಮಾಡುವರೆಂದನಾಸ್ವಾಮಿ ॥ ೭೫ ॥
ನರಗುರಿಗಳೆನಿಸದಲೆಜಗದೀ । ಶ್ವರನಗುರುವನುನಂಬಿನಡೆವರೆ ।
ಪರಮಭಕ್ತರೆನೀವುಕೇಳಿರಿಗುರುಚರಿತ್ರವನು ॥
ಗುರುಫಕೀರನುಗುಪ್ತಭಕ್ತರಿ । ಗರುಹುತೀಬಗೆಹರುಷಬಡೆಯಿಸಿ ।
ಮೆರೆವನಾದನುಸದರಿನೊಳುಸಾಹೇಬನೆಂದೆನಿಸಿ ॥ ೭೬ ॥
ಪರಮಪದ್ಧತಿಯಂತೆಪ್ರಮುಖರು । ಭರದಿಮಠಕೈತಂದುಸ್ವಾಮಿಯ ।
ಚರಣಕಮಲಂಗಳಗೆವಿನಮಿತರಾಗಿಬಿನ್ನೈಸಿ ॥

ಗುರುವೆಬುದ್ಧಿಯೆತಮ್ಮಪಾದಕೆ । ಹೊರತರಾವೇನಿಲ್ಲಪಾದವು ।
ಬರಲಿಸಾಗಲಿರಥವುಕರುಣಿಸಿರೆಂದರೇವೇಳ್ವೆ ॥ ೭೭ ॥
ಗುರುವುರಥವುಗದ್ದುಗೆಗಳೆಲ್ಲವು । ಪರಮಶೋಭಾಭರಿತವಾಗಿವೆ ।
ಪರಿಶೆನೆರೆದಿದೆಪಟ್ಟನಡೆದದೆತಲೆಗದೊಂದಣೆಯು ॥
ಗುರುರಥವುಸಿಂಗರಿಸಿನಿಂತಿದೆ । ಸ್ಮರಿಸುತಿದೆಜನವಾದಿಕರ್ತರಂ।
ಗೆರಗಿಭೋರ್ಗರೆವಹಿಪನಂತೆಸೆದಿರ್ದನಾಸ್ವಾಮಿ ॥ ೭೮ ॥
ಅವರಿಗವರಂತೆನಿಸಿಶ್ರೀಗುರು । ಭವಹರನಭಕ್ತೈಕನಿಜಬಂ ।
ಧುವಿನಕಡೆಗುರಿಯಿಟ್ಟುನಡೆದನುಮೌನಮುದ್ರೆಯಲಿ ॥
ಅವರಿವರುಪೇಳ್ದಂತೆತಾನೆಂ । ದವನುಸುಮ್ಮನೆನಿಂತುಕೊಂಡನು ।
ಶಿವನರಥವಲ್ಲಾಡದಿರ್ದುದುಕರ್ತನಾಜ್ಞೆಯಲಿ ॥ ೭೯ ॥
ಎಳೆಯಹತ್ತಿತುಮಂದಿಬಲ್ಲಿದ ರೆಳೆದುದಣಿದರುರಥವುತಾಂಸಂ ।
ಚಲಿತವೆನಿಸದೆಸ್ಥಾಯಿನಿಸಿತ್ತುಮುಮಿಸುಗದಲೆ ॥
ನಲಿದರಮರರುಗಗನದಲಿಚ । ಪ್ಪಳೆಯಬಡಿದರುನಂದಿಕೇಶನ ।
ಬಳಗದವರಂಬರದಿಸಂಭ್ರಮಗೊಂಡರಡಿಗಡಿಗೆ ॥ ೮೦ ॥
ನೂನವೀಕ್ಷಿತರಥವುತಾನನು । ಮೂನವೇನಿದರಲ್ಲಿಮಹಿಮೆಯ ।
ದೇನದೈರಥಸಾಗದೆಂಬುದುಬಹುವಿಚಿತ್ರವಿದು ॥
ಆನಿಸಿರಿತೊಲೆಸೊನ್ನೆಗಳನನು । ಮೂನವೇಕೀಗಾಲಿದೂಡಿರಿ ।
ತ್ರಾಣಿಕರುಹಿಡಿದೆಳೆಯಿರೆಂದರುಪೇಳ್ವಿಚಾರಕರು ॥ ೮೧ ॥
ಬಿಡದೆನಡೆದದೆಸನ್ನೆಯಬ್ಬರ । ಕಡುಹುದೋರುತ್ತೆಳೆವಲಾರ್ಭಟೆ ।
ಯೆಡೆಯಕಡುಗಾಲಿಗಳಿಗೆದೆಯಿಂದೂಡುವವರೊನಪು ॥
ಶಡಕುಭಡಕಿನಮೊತ್ತುನಡೆದವೆ । ಪ್ಪುಡಮಹಾತ್ಮನರಥವುಸಾಗದ ।
ಲೆಡೆವಿಡಿದುನಿಂತಲ್ಲಿಹಿಂತಿರದೆಜಗ್ಗಿಸುವದೇನೈ ॥ ೮೨ ॥
ಸ್ಥಾನಿಕರುಘನರಾಜಕೀಯರು । ಮೂನಿಘಾಪಂಜೊಂದಿಗುರುರಥ ।
ಕಾನಿರೆಲ್ಲರುಕೂಡಿಜಗ್ಗಿರೊಯೆಂದುಗದ್ದರಿಸೆ ॥
ಏನುಮಾಡಿದಡೇನುರಥವದು । ತಾನುಸಾಗದುಪಾಯವನುನೆರೆ ।
ಕಾಣವೆಂದೆನುತಿರ್ದರೈಬಲ್ಲಿದರುಬಳಲಳಿದು ॥ ೮೩ ॥

ಹೂಣರೊಡ್ಡರಕರಸಿಪೇಳ್ದರು । ಹೂಣಿತಿಯನುರೆಕೊಟ್ಟರವರಿಗೆ ।
ಹೂಣಿಗರುನೀವೆಳೆದುರಥಸಾಗಿಸಿರಿಬಿಡದೆನಲು ॥
ಆನಿಧಾನದೊಳೊಡ್ಡರೆಲ್ಲರು । ಹೂಣೆಗೊಂಡೆತ್ತೈಸೆಕೌತುಕ ।
ವೇನುಹೇಳಲಿರಥವುತಾನಿಂತಲ್ಲಿನಿಂತಿಹುದು ॥ ೮೪ ॥
ಹೂಡಿನೋಡಿದರೆತ್ತುಗಳನುರೆ । ಹೂಡಿಕೋಣಂಗಳನುಪರಿಕಿಸಿ ।
ನೋಡಿದರುರಥವೇನುಸಾಗದಲಿಕ್ತುಸ್ವಸ್ಥಳದಿ ॥
ನೋಡಿದೆವುಲೋಕದಲಿಕಲಿಯುಗ । ರೂಢಿಯಲಿಪೊಸತಾಯು ಮಹಿಮೆಗೆ ।
ಜೋಡುದುಂಟೇಶ್ರೀಫಕೀರಂಗೆಂದುದೈಜನವು ॥ ೮೫ ॥
ಗಾಡಿಬಟ್ಟುದುಗುರುವಿನಾಟವ । ದೋಡಿದುದುಜನಕಿರ್ದಭ್ರಮೆಯದು ।
ಮೋಡಿಕಾರನಕೇಳಿಯಲ್ಲವುಹರನಮುಂಡಿಗೆಯು ॥
ರೂಢಿಯಲಿಕೇಳಹೆವುಪೋಣಾವ್ । ನೋಡಿಹೆವುಹಿಂದಕ್ಕೆಕಡುವಾ ।
ವಾಡುಗಳನೆನುತಿರ್ದುದೈಗಡಪರಿಶಿಯೊಳಹೊರಗೆ ॥ ೮೬ ॥
ಕಂತುಹರತರುಬಿದನೊಮಿಗೆದನು । ಜಾಂತಕನುಬಿಡದಾಣೆಯಿಟ್ಟನೊ ।
ನಿಂತುಬ್ರಹ್ಮನುಸನ್ನೆಗೈದನೊಮೋಣ್ ವಿಚಾರಿಸಲು ॥
ಶಾಂತಸದ್ಗುರುಕರ್ತಕೋಪವ । ನಾಂತುನಿಲಿಸಿದನೇನೊತಾನೆಂ ।
ಬಂತೆರಥನಿಂತಲ್ಲೆನಿಂತಿತುಲೋಕಕರಿದೆನಿಸಿ ॥ ೮೭ ॥
ಹರಿಹರಾದ್ಯರುಸುರರಮೇಳದೆ । ನೆರೆದರಾಗಸದಲ್ಲಿಕರ್ತನ ।
ಕುರುಹಿನಾಟಕೆಕೌತುಕಂಬಡುತೆಂದರೀತೆರದಿ ॥
ದುರಿತಕಲಿಯುಗದಲ್ಲಿಮಾಯಾ । ಭಂತಲೌಕಿಕರಲ್ಲಿಬೆಳಗುತೆ ।
ಗುರುವುದೊಡ್ಡವನೆನಿಸುವದುನಿರ್ಣಯನಾಟವಿದು ॥ ೮೮ ॥
ಮಾನವರಯುಕ್ತಿಪ್ರಯುಕ್ತಿಗೆ । ಮಾನವರತನುಶಕ್ತಿಗೇನಾ ।
ಸ್ಥಾಣುಪೊಳೆಯುವದುಂಟೆಶಿವಶಿವಸಾಕದಂತಿರಲಿ ॥
ಆನಿರಲ್ಕೆಳೆದೆಳೆವುದನವಿನು । ಶಾನೆಬಳಲುವದೆಂದುಬೇಗನೆ ।
ಭಾನುವಾರಿಥಿಗಿಳಿದನೆನೆಮುಚ್ಚಂಜೆತೋರಿದುದು ॥ ೮೯ ॥
ಪುರುಷರೊಳಗುತ್ತಮನುಮಹಿಮ । ಪುರುಷರಿಗೆತಾನೊಡೆಯನಾತನು ।
ಗುರುಗಳಲಿಗುರುದೇವನಲ್ಲವೆಶ್ರೀಫಕೀರೇಶ ॥

ಧರೆಯೊಳಾತನರಥದಸೊಬಗಿನ । ಸಿರಿಯನೀಕ್ಷಿಸಲೆಂದುತಾನತಿ ।
ಭರದಿಬಂದನೊಯೆಂಬವೊಲ್ಮೂಡಿದನುಚಂದ್ರಮನು ॥ ೯೦ ॥
ಪರಿದುದೆಣ್ದೆಸೆಗಳಲಿಪಂಕೆಯು । ಭರದಿತಂತಮ್ಮಿಳದತಾವಿಗೆ ।
ಬೆರಗುಬೆಜ್ಜರಗೊಂಡುನಡೆದರುವರಸಭಾಸದರು ॥
ಹೆಂಯಭಕ್ತರೆಹರುಷದಿಂದೀ । ಗುರುಫಕೀರನಲೀಲೆಕೇಳರಿ ।
ಪರಮರಾಮಗೆಸಿರಿಯನೈಪ್ರಭುರಾಯನಿರ್ಮಾಯ ॥ ೯೧ ॥
ಭೂರಿಬ್ರಹ್ಮಾಂಡಾಧಿಕಾರಿಯೆ । ಘೋರಮೃತ್ಯುಂಜಯನೆನಿಸ್ನಧಿ ।
ಕಾರದಲಿನಶ್ವರರನರರಧಿಕಾರವೇನೆನುತಾ ॥
ಧೀರಶರಣರಸಾಧುಗಳಮೇಣ್ । ವೀರಯೋಗೀಶ್ವರರಪರತರ ।
ಪಾರಮೂರ್ಥಾನಂದಸುರನದಿಮೇರೆದಪ್ಪಿದುದು ॥ ೯೨ ॥
ಹಾಗುಹೀಗಾಜಾತ್ರೆಯಾಯಿತು । ಸಾಗಿಹೋಯಿತುಪರಿಶೆಯದುತಲೆ ।
ವಾಗಿಗುರುವಿಂಬಿಡದಲಾಶೀರ್ವಾದಮಂಪಡೆದು ॥
ಆಗಳುಂಪ್ರತಿವರ್ಷಮೂಗುವ । ಶ್ರೀಗುರುರಥೋತ್ಸವವುನಡೆಯದೆ ।
ಸಾಗದಿರ್ಪಾಯೊಸುಗೆಪಸರಿಸಿದತ್ತುದೆಸೆಗಳಲಿ ॥ ೯೩ ॥
ಗುರುರಥವನೆಳೆದೆಳೆದುದಣಿದರು । ಪರಮಭಕ್ತರುದುರಭಿಮಾನಿಗ ।
ಳರರೆಸಾಸಿಗರೆಲ್ಲಬಲುಬಳಲಿದರುಛಲವಿಡಿದು ॥
ನರರಕಡೆಗೇನಿಲ್ಲಮೂತಿದು । ಗುರುವಿನಾಟವದಾರ್ಗೆತಿಳಿಯುವ ।
ದರಿಪರಿದುನಿಜವೆಂದುನುಡಿಯುವದಾಯ್ತುನಾಡೆಲ್ಲ ॥ ೯೪ ॥
ಆರಿಯಿರೀಪರಿಯಾರುವರ್ಷದ । ವರೆಗೆಜಾತ್ರೆಯದಾದೊಡಂಗಡ ।
ಗುರುರಥವುತಾಂಸಾಗಲಿಲ್ಲವುಕರ್ತನಾಜ್ಞೆಯಲಿ ॥
ಶರಣರಾಟವೊದೇವಿಯಾಟವೊ । ಗುರುವಿನಾಟವೊಪಟ್ಟಬಿಡಿಸುವ ।
ಕುರುಹಿನಾಟವೊತಿಳಿಯದೆಂದುದುಸಕಲದೇಶಜನಾ ॥ ೯೫ ॥
ನರರುಮೂಡಿದಕಟ್ಟಗೆಯತೇರ್ । ನರರಶಕ್ತಿಗೆಯುಕ್ತಿಗಳುಕದ ।
ಲಿರುವದೇನಚ್ಚರಿಯೊಯೆಂದರುಭೂಮಿಪಾಲಕರು ॥
ಗುರುಫಕೀರನಸ್ಮರಿಸುತಿದ್ದರು । ಗುರುಮಹತ್ವವನೊರೆವುತಿದ್ದರು ।
ಹಿರಿಯರೆಮ್ಮವರೆಂದುನೆನಪಿಗೆತಂದರವರಾಗ ॥ ೯೬ ॥

ಗುರುದಿಗಂಬರದತ್ತ ಕರ್ತನು । ನರಹರಿಯೆಸ್ಸೈಯೆಂದುಭಕ್ತ ।
ಸ್ಫುರಣದಲಿಮಿಗೆಸೇವೆಗೈದಿಹರೆಮ್ಮಪೂರ್ವಜರು ॥
ಪರಮವೃದ್ಧಾಚಾರದಂತಾ । ಗುರುಫಕೀರೇಶಂಗೆನಾವುಂ ।
ಹರುಷಬಡಿಸುವದೆಮ್ಮಧರ್ಮವಿದೆಂದರಾನ್ನಪರು ॥ ೯೭ ॥
ಬರುವಜನರಿಗೆಪಟ್ಟಬಿಟ್ಟೆವು । ಹರುಷಗೊಳ್ಳಲಿನಾಡುತಾನಾ ।
ಪರಿಶೆನೆರೆಯಲ್ರಥವುಸಾಗಲಿಯೆಂದುಭೂಪತಿಯು ॥
ಗುರುಫಕೀರೇಶ್ವರಗೆಪ್ರಾರ್ಥನೆ । ಯರಿಕೆಗೈದನುತದನುವಾರ್ತೆಯು ।
ಪರಿದುದೆಲ್ಲೆಡೆಯಲ್ಲಿಸಂತಸವಾಯ್ತುಸಕಲರಿಗೆ ॥ ೯೮ ॥
ಹಿರಿಯರೇಕಿವಿದೆರೆದುಕೇಳಿರಿ । ಗುರುಫಕೀರೇಶ್ವರನವಾದದ ।
ಪರಮಭಕ್ತರುಸೇವೆಗಗಲದೆಬಾಳ್ವೆಮಾಡುತಿರೆ ॥
ಗುರುವುನಿಜದಾಸೋಗದಲಿತಾ । ನಿಂತನಾಗಿರುತಿರಲುಶ್ರೀಗುರು ।
ವರರಥೋತ್ಸವದಿವಸಬಂದವುಸ್ವಾಮಿಗೇಳೆನುತೆ ॥ ೯೯ ॥
ಗುರುವುಸಹಜಾನಂದಶಿವಸುಖ । ವೆರೆದುಭಕ್ತರಿಗೆಲ್ಲತಿಳಿಸುತೆ।
ಕರುಣಿಸುತೆದಾಸೋಗವನುಸಲೆನಡಿಸುತಿರುತಿರಲು ॥
ಗುರುರಥೋತ್ಸವದಿವಸಗಳುಗಡ । ಬರೆಸಮೀಪಿಸಿನಮಿಸಿಕರ್ತನ ।
ಗುರುಫಕೀರನುದೇಶದಲಿಭಿಕ್ಷಾರ್ಥಹೊರಹೊರಟಾ ॥ ೧೦೦ ॥
ಪೊಳಲುಪಳ್ಳಿಗಳಲ್ಲಿಭಕ್ತರ । ಬಳಗದಲಿನಲಿದಾಡುತಂಗುರು ।
ನಲಸದಲೆಕಡುಬಿರುದುಹೊಗಳಿಸುತಾತ್ಮಲೀಲೆಯಲಿ ॥
ಸುಳಿವುತಾಶೀರ್ವಾದಕರುಣಿಸು । ತೊಲೆವುತಂಸಂತಸವನೀವುತೆ ।
ಲಲಿತಸದ್ಗುರುಮೂರ್ತಿದಯಮಾಡಿದನುಸಿರಿಪುರಿಗೆ ॥ ೧೦೧ ॥
ಗುರುಫಕೀರಗೆಬಸವಲಿಂಗಗೆ । ವರವಿವಾಹ್ಯಗೆಚನ್ನಬಸವಗೆ ।
ಶರಣರಿಗೆಸಂಜನಿಸೆದೀನೆಂಬೊಂದುಶಬ್ದವದು ॥
ಧರಣಿಯಲಿಸಂಚರಿಪಸದ್ಗುರು । ವರನುದೀನೆನ್ನುತ್ತೆಹೊರಟನು ।
ಪರಿಜನವ್ರಜಸಹಿತಬಂದನುನಿಜಬೃಹನ್ಮಠಕೆ ॥ ೧೦೨ ॥
ಕುಶಲಮತಿಗಳೆಕೇಳಿರೈಸಂ । ತಸದಿಗುರುವಾದಕ್ಕೆಬಂದಸ ।
ವಸದಿಮುಖ್ಯರುಪ್ರಾರ್ಥಿಸಿರೆಸಾಷ್ಟಾಂಗವೆರಗುತಲಿ ॥

ಎಸೆವಸದ್ಗುರುಸ್ವಾಮಿದಯವಾ । ಲಿಸುತೆಪಾಚ್ಛನಮೂಲಗದ್ದುಗೆ ।
ಗಸಮಕರ್ತನಕಂಡುಬಂದನುಶ್ರೀರಥೋತ್ಸವಕೆ ॥ ೧೦೩ ॥
ಶರಣಸಂತತಿಪರಮಯೋಗೀ । ಶ್ವರರಸಂತತಿವಿಸುತಮಹೇ ।
ಶ್ವರರಸಂತತಿಸಾಧುಸಂತತಿಭಕ್ತಸಂತತಿಯು ॥
ನೆರೆದುಕರ್ತನರಥದಕೆಲಬಲ । ಕಿರುವರುಘೆಜಯವೆಂಬಘೋಷದೆ ।
ಗುರುಫಕೀರಸ್ವಾಮಿಬಿಜಯಂಗೈದನಾಮಠಕೆ ॥ ೧೦೪ ॥
ಮಿಸುಪವಿವಿಧಪತಾಕೆಯಲಿಪೂ । ರಿಸಿದನವವರ್ಣದಲಿಚಿತ್ರ ।
ಪ್ರಸರದಲಿಬಹುಪದಪಿನಂತಸ್ತುಗಳಸೊಬಗಿನಲಿ ॥
ಎಸೆವಕಳಸದಶೋಭೆಯಲಿಪರಿ । ಲಸಿತಚಕ್ರಸುರಚಕನೆಯಲಿಬಂ ।
ಥಿಸಿದಹಗ್ಗಗಳಿಂದೆಸಿಂಗರವಾಂತುದಾರಥವು ॥ ೧೦೫ ॥
ಜಗದಕರ್ತನರಥವುನಿಂತಿದೆ । ಝುಗಿಝುಗಿಪವೈಚಿತ್ರ್ಯರೂಪದೆ ।
ಬಿಗಿಹುರಿಯಹಗ್ಗಗಳುಚಾಚಿವೆಮೂರುಮುಂಗಡಿಗೆ ॥
ಸೊಗಸುಗೊಂಡಿದೆಪರಿಶೆಬಿಡದೀ । ಕ್ಷಿಸಲಿಕಂಗಡಿಸಾಲುಕೆಲಬಲ ।
ಕೆಸೆವುತಿವೆಜಯಘೋಷಮೆಸಗಿದೆಲೋಕಮುಖಗಳಲಿ ॥ ೧೦೬ ॥
ಪರಮಕವಿಗಳುಪಂಡಿತರುವ್ಯಾ । ಕರಣಿಕರುಶಾಸ್ತ್ರಿಗಳುಶ್ರೀಹರಿ ।
ಹರರಕೀರ್ತನೆಗೈವರಾನಿಗಮೊಳಿಯರಿತವರು ॥
ತರತರದಕಾವ್ಯಾರ್ಥಿಗಳುಬಂ । ಧುರಚತುರ್ವಿಧಮೋಕ್ಷಮಾರ್ಗದೊ ।
ಳಿರುವಭಕ್ತರುಹಿಂದುಮುಂದೆಯುಮೆಸೆಯುತಿಹರರರೆ ॥ ೧೦೭ ॥
ಕಳೆಗಳಾಣ್ಮನಮೂಲಪಾಚ್ಛನ । ವಿಲಸಿತೋನ್ನತರಥಮನೆಳೆಯ ।
ಲ್ಕೆಳಸಿಕಟ್ಟಿದಹಗ್ಗಗಳುಮಿಗೆಸಾಲುಗೊಂಡಿಹವು ॥
ಹಲವುಹುಡುಗರಹೆಗಲಮೇಲವು । ಕೆಲವರಂಗೈಗಳಲಿಮೇಣ್ಕೆಲ ।
ಪಲರರಟ್ಟೆಯಮೇಲೆಕೆಲವೆಡೆನೆಲಕೆಹತ್ತಿಹವು ॥ ೧೦೮ ॥
ರಥವೆಶ್ರೀಗುರುರಥವೆಶಕ್ತಿಯು । ರಥವೆಸುಮನೋರಥವೆಶ್ರೀಕರ ।
ರಥವೆಕಾಲಜ್ಞಾನಸೂಚಿಪರಥವೆಸಾಗೆನುತಾ ॥
ಅತಿಶಯಾನಂದದಲಿಸ್ವಾಮಿಯು । ರಥದಗಾಲಿಗೆಕಾಯಿಯೊಡೆಯಲು ।
ರಥವುಚೀತ್ಕಾರದಲಿಸಾಗಿದಪರಿಯನೇವೇಳ್ವೆ ॥ ೧೦೯ ॥

ಗುರುಫಕೀರನುಚನ್ನವೀರೇ । ಶ್ವರನುದಿಟ್ಟಸಿಮೇಲೆಕೈಯಿಡೆ ।
ಪರಕೆಪರತರಬೊನ್ಮವೆಸೆದುದುರಥದಮಧ್ಯದಲಿ ॥
ಅರರೆದತ್ತಾತ್ರಯನುಪ್ರಮಥರು । ವರಪುರಾತನಪುರುಷರೆಸೆದಿರೆ ।
ಶರಣರೊಸೆದಿರೆಮುಂದೆಸಾಗಿತುರಥಸಗಾಢದಲಿ ॥ ೧೧೦ ॥
ಗುರುರಥೋತ್ಸವನೋಡಲೆಂದಾ । ಸುರಮುನೀಶ್ವರಹರಿಹರಾದ್ಯರು ।
ಸುರಪಮುಖ್ಯಾಮರರುನಿಂದಿಹರೈಸೆಗಗನದಲಿ ॥
ಗಿರಿಜೆಲಕ್ಷ್ಮಿಯುವಾಣಿಶಚಿಯಂ । ಬರದೊಳೆಸೆದರುತಮ್ಮವರನೊಡ ।
ವೆರೆದುದಿಟ್ಟಸುತಿರ್ದ್ದರೈಗುರುವರರರಥೋತ್ಸವವಾ ॥ ೧೧೧ ॥
ಸಂಗಮೇಶ್ವರಸನ್ನಿಧಾನ । ಕ್ಕಿಂಗಿತವನರುಪಲ್ಕೆರಥಸಿರಿ ।
ಯಂಗವಿಸಿಧಾವಿಸಿದಳೆನೆರಥವ್ರೋಡಿತಂದದಲಿ ॥
ಲಿಂಗಮಯಶಿವಯೋಗಿಗೊಂದಿರೆ ಹೀಂಗೆಹೋಗುವದಲ್ಲವೆಂದೇ ।
ಹಾಂಗೆಮರಳಿದಳೆಂಬವ್ರೋಲ್‌ಹಿಂದಿರುಗಿತಾರಥವು ॥ ೧೧೨ ॥
ಹೊಡೆವಭೇರಿಗಳಿಂದೆದನಿಸೊಂ । ಪಿಡಿದಕಹಳೆಗಳಿಂದೆತಾಳಂ ।
ಗುಡುವಪರಮುಸನಾದಿಮೇಳಗಳಿಂದಲಾರಥವು॥
ಮೃಢನಸೂತ್ರದೆಸ್ಥಾನಬಿಟ್ಟಡಿ । ಗಡಿಗೆಕಂಡುದೊಕಾಣದಿರ್ದುದೊ ।
ಪಡಗರದೊಳಾಮೆಟ್ಟಗೈದಿತುಪೇಳಲೇನದನು ॥ ೧೧೩ ॥
ವರಪುರಾತನರಾಜಪದ್ಧತಿ । ವೆರಸಿಮುಂದಣಕಾರ್ಯವೆಲ್ಲವು ।
ಧರೆಗೆಶುಭಕರಮೆನಿಸಿಸಾಗಿತುಸಾವಧಾನದಲಿ ॥
ನೆರೆದಪರಿಶೆಯುಪ್ರಭುವಿನಾಟಕೆ । ಬೆರಗುವಟ್ಟಾನಂದಭರದಲಿ ।
ಗುರುಪಕರ್ತನಸೇವೆಮಾಡಿದುದತುಳವಿಭವದಲಿ ॥ ೧೧೪ ॥
ಹರುಷದತಿಭರದಿಂದೆಶ್ರೀಗುರು । ವರಗೆಕಾಣ್ಕೆಯನೀವುತೆಲ್ಲರು ।
ಹರಿಕೆಗೊಂಡೈದಿದರುತಂತಮ್ಮೂರುಗಳಿಗಾಗಿ ॥
ಅರುಹಿನಿಲ್ಲಿಸಿತೇರುಸಾಗಿಸಿ । ಧರಣಿಯಲಿಪಾವಾಡುಮೆರೆಯಿಸಿ ।
ಗುರುವುದೊಡ್ಡವನೆನಿಸಿದನುಗಡಶ್ರೀಫಕೀರೇಶ ॥ ೧೧೫ ॥
ಗುರುಮಹತ್ವವಕಂಡುಕಣ್ಣಿಂ । ದರರೆನಂಬದೆಕೆಡುವರೆಂದೇ ।
ನೆರವುತೊಬ್ಬರಿಗೊಬ್ಬರಾಡುವರಾದರಡಿಗಡಿಗೆ ॥

ವರದಿಗಂಬರವಾಚ್ಛನೆಂದಿಗು । ಮಿರುವನೈಸ್ವಾಮಿಯಲಿಪೀಠದೊ ।
ಳಿರುವನೈನಿಜವೆಂದುನುಡಿಯುವದಾಯ್ತುಸಕಲಜನಾ ॥ ೧೧೬ ॥
ಧರೆಯೊಳಂದಿಗೆಮಹಿಮೆತೋರಿದ । ಗುರುಫಕೀರನುಮುಂದಿಗಿಂದಿಗೆ ।
ನಿರತುಗುರುತುಗಳೆಲ್ಲಸೈಸೈಯೆನಿಸಿದನುಬಳಿಕಾ ॥
ಗುರುವೆನಿನ್ನದೆನುತ್ತೆಸ್ವಾಮಿಯು । ಬರುವಜನಕನ್ನವನುಕರುಣಿಸು ।
ತಿರುವನಾದನುಮುಂದೆಕೇಳರಿಗುರುವಿನಾಟವನು ॥ ೧೧೭ ॥
ಸುಗ್ಗಿಯಲಿಹೊಲಗಳಿಗೆಪರಶಿವ । ಸುಗ್ಗಿಯೆಂದೇನಡೆದುಹೋಗುವ ।
ನುಗ್ಗಿಹೊಲಗೆಲಸವನುಮೊಳ್ಪನುನಾಚಿಪಸರಿಲ್ಲ ॥
ಅಗ್ಗಳಿಕೆಯಲಿಕೇಳರಾಗುರು । ಬೊಗ್ಗಿದುಡುಮೆಯೊಳಿರಲುಗಗನದಿ ।
ಸಗ್ಗಿಗರುಮೊಯುದಲಿಹೂಮಳೆಗರೆದುನಲಿಯುವರು ॥ ೧೧೮ ॥
ಮೊನದಾಶೆಗೆಹೋಗವಲಿಗುರು । ಸ್ವಾನುಭಾವಾನಂದದಲಿತಾಂ ।
ತಾನೆನೆಲದಲಿಕೂಡ್ರುವನುಬಡಜನರುಬರಲೊಡನೆ ॥
ತಾನೆನಿಜಕರದಿಂದಲವರಿಗೆ । ದಾನಧರ್ಮಂಗಳನುಮಾಡುವ ।
ನೇನುಹೇಳಲಿಜಗದೊಳುಪಕೃತಿಗೈವಲೀಲೆಯನು ॥ ೧೧೯ ॥
ಕೂಲಿಕಾರರಕೂಲಿಯನುತೆನೆ । ಗೂಲಿಯನುಮಿಗೆತಾನೆಕೊಡುವನು ।
ಬಾಲಕರತೆರನಂತೆಲೀಲೆಯನಾಡುತಿಹನಮಮಾ ॥
ಆಳುಹೋಳುಗಳೆಲ್ಲನಾಚಿದ । ಯಾಳುಗುರುವೆನುಬೇಡಿಕೊಂಬರು ।
ಕಾಲಗಳಿಯದೆಹೆದರಿದುಡಿವರುಗುರುವಿನೆದುರಿನಲಿ ॥ ೧೨೦ ॥
ಬಡಜನರಬಳಲಿಸದೆಬೇಗನೆ । ಕೊಡುವನೈಕೂಲಿಯನುಸಂತಸ ।
ವಡೆವುತಾಜನವೆಲ್ಲಕೊಂಡಾಡುವದುಗುರುವರನ ॥
ಮೃಡನಕಡೆಯುವರೆಲ್ಲರಂಬರ । ದೆಡೆಗೆನಿಂತೇನೋಡಿನಲಿವರು ।
ಪೊಡವಿಯಲಿನಿರ್ಮಾಯನಾಟವುನೋಡಿರೆನ್ನುವರು ॥ ೧೨೧ ॥
ಹಿಂದಿನಾಟವನೆಲ್ಲಹೇಳ್ವನು । ಮುಂದೆಬರ್ಪುದನರಪುವನುನಡೆ ।
ಹಿಂದೆಮುಂದಾಳ್ವಮೊಳ್ಪುದನುತಿಳಿಸುವನುಭಕ್ತರಲಿ ॥
ಹಂದಿಗಳುನೆರೆಹೊರೆಯೊಳಿರ್ದ್ದರೆ । ಸಂದಿಗೊಂದಿಗಳೆಲ್ಲಸ್ವಚ್ಛವು ।
ಮಂದಮತಿಗಳೆಜಗಳಬೇಡಿರಾಯೆಂಬನಾಸ್ವಾಮಿ ॥ ೧೨೨ ॥

ಸುಳ್ಳರಾಸವಿನುಡಿಗಳಂವ್ಯೆ । ಗಳ್ಳರಾಕೀಳ್ಗೆಲಸವನುಕಡು ।
ಗಳ್ಳರಾವೋಸವನುಬಣಜಿಗರಾಟಬ್ಯಾಟವನು ॥
ಎಲ್ಲವನುಬಾಯಿಬ್ಬಿಚ್ಚಿಹೇಳುವ । ನೆಲ್ಲರಂಗೆಬಲುಜೋಕೆಯೆಂಬನು ।
ಬಲ್ಲಿದರುಬಲುಹೆದರಿಬಾಗುವರಾದರಡಿಗಡಿಗೆ ॥ ೧೨೩ ॥
ಹೊಲದೊಳಾಗಿರೆಗೋದಿರಾಶಿಯು । ಬಳಿಯೊಳಾಳ್ಗಳುನಿದ್ರೆಗೊಂಡಿರೆ ।
ಕೆಲವುಕಳ್ಳರುವೊಟ್ಟೆಗಳಗಾರಾಸಿತುಂಬುತಿರೆ ॥
ಲಲಿತಯೋಗಾನಂದನಿದ್ರಾ । ಭರಿತಸ್ವಾಮಿಗೆಕಾಣಲಾಕ್ಷಣ ।
ತಿಳಿದುಬಿಡದೆಬ್ಬಿಸಿದನೆಲ್ಲರನಾಫಕೀರೇಶ ॥ ೧೨೪ ॥
ಎಲೊಸಿಪಾಯರನೀವೆಹೋಗಿರಿ । ಹೊಲಕೆಬಂದಿಹರೈಸೆಕಳ್ಳರು ।
ಬಳಬಳದುಗೋದಿಯನುತುಂಬುತ್ತಿಹರುವೊಟ್ಟೆಯಲಿ ॥
ಎಲವೊಬೆಯ್ಯದೆಬಡಿಯದೆಮ್ಮಯ ಸ್ಥಳಕೆನೀವ್ಕರತನ್ನಿಯಂದೇ ।
ಕಳಿಸಿದನುಗಡಮಧ್ಯರಾತ್ರಿಯೊಳ ಫಕೀರೇಶಾ ॥ ೧೨೫ ॥
ಗುರುವುಸೂಚಿಸಿದಂತೆಹೋದರು । ಭರದಿಕಳ್ಳರಹಿಡಿದುತಂದರು ।
ಗುರುಫಕೀರನುನಗುತನುಡಿಸಿದನವರನಂದದಲಿ ॥
ಹರಹರಾಸಲೆಸುಡಲಿಬಡತನ ವಿರುವದೀಗೇಕಣ್ಹೊಟ್ಟೆಗೋಸುಗ ।
ವರಿಯೆದುರ್ಗತಿಗಾಂಬಕೆಲಸವುಬೇಡರಿನ್ನೆಂದಾ ॥ ೧೨೬ ॥
ಗುರುತಿನವರೈನೀವುನಿಮಗಾಂ । ಹೊರತದಿಲ್ಲವುಬೇಡಿದಡೆಸಾ ।
ದರದೆಕೊಡುವೆನುಮತ್ತಮೆಂದಾದತ್ತಗುರುರಾಜಾ ॥
ಕರೆದುಹೇರಳಕಾಳುಕೊಟ್ಟನು । ಭರದೆಗೋದಿಯವೊಟ್ಟೆಯೊಂದಿಗೆ ।
ಹರಸಿಕಳಿಸಿದನೆಲ್ಲರನುಗುರುಕೃಪೆಯದೇಂಘನವೊ ॥ ೧೨೭ ॥
ಕಳ್ಳತನವನುಮಾಡಬೇಡರಿ । ಕೊಳ್ಳಿಗೆಲಸಕೆಹೋಗಬೇಡರಿ ।
ತಳ್ಳಗಾರರಕೂಡಬೇಡರಿಸುಜನರೆಂಬವರು ॥
ಸುಳ್ಳುನುಡಿಗಳನಾಡಬೇಡರಿ । ಖುಲ್ಲರಾಗಲಿಬೇಡಿರೈನೀ ।
ವಿಲ್ಲಿನರಕದೊಳಲ್ಲಿಬಳಲುವಿರೆಂದನಾಸ್ವಾಮಿ ॥ ೧೨೮ ॥
ಒರೆವುತೀಪರಿಮುರವಿಮನುಜರಿ । ಗರುಪುತಂಭಕ್ತಾಗೆಭಕ್ತಿಯ ।
ತೆರವನಂದದೆಬೋಧಿಸುತೆಸನ್ಮಾರ್ಗದಂದವನು ॥

ಇರುತಲಾದಾ ಸೋಗದಲಿಸಲೆ । ನಿರತನಾಗಿಯೆಚನ್ನವೀರೇ ।
ಶ್ವರನುವೈರಾಗ್ಯದಲಿಬೆಳಗುವನಾದನೊಳಕೊರಗೆ || ೧೨೯ ||
ಗುರುನಿಯಾಮುಕನೆನಿಪಕರ್ತನ । ಪರಮಲೀಲಾಮೃತವಕೇಳಿರಿ ।
ಮೆರೆಯುತಿರುವದುಕಾಮನಾಳೆಂಬೊಂದುಗ್ರಾಮವದು ॥
ಅರರೆತತ್ಪುರದಲ್ಲಿಕರ್ತನು । ಪರಮಭಕ್ತರಿಗೊಲಿದುಕೊಟ್ಟನು ।
ವರನಿರಂಜನಪುತ್ರನನುನೀವಾಲಿಸಿರಿಮುಂದೆ || ೧೩೦ ||
ಆಮಹಾತ್ಮನಸೂತ್ರದಿಂದೀ । ಭ ಮಿಗವ ರಿಸಿದನುಬಾಲಕ ।
ನೀಮನುಜಲೋಕದಲಿಬಳೆದನುವರವಿರಕ್ತಿಯಲಿ ॥
ರಾಮಸೋಮಸುಭಕ್ತಸದ್ಗು ಣ ಧಾಮರೆಲ್ಲರುಕೇಳಿರೈಬಹು ।
ಸೀಮೆಗಳನೆಡತಾಕಿದನುಬಾಲ್ಯದಲಿಗು ುಕುವರ || ೧೩೧ ||
ವೀರಶೈವದಿನಿತ್ಯನಲಿವುತೆ । ಸಾರವೈರಾಗ್ಯದಲಿಚಲಿಸುತೆ ।
ಮೀರಿಮೊಯದೆನಿಂತುಲೀಲೆಯನಾಡಹತ್ತಿದನು ॥
ಘೋರಕಾಂತಾರದಲಿವಾಸಿಸಿ ಮೂರಹರಶಿವಪಾದಪದ್ಮ ।
ಕ್ಕಾರಡಿಯುತಾನೆನಿಸಿಕರ್ತಧ್ಯಾನಿಸುವನವನು || ೧೩೨ ||
ಎಲವೊಭಕ್ತರೆಕೇಳಿರೈಸಲೆ । ಗುರುಮಹೇಶ್ವರನಾದಕರ್ತಂ ।
ಗರುವದೆನಿತೋಯತಿಯರೂಪದೊಳವಗೆಕಂಗೊಳಿಸಿ ॥
ಗುರುಕುವರನೀಂನಿಗೆಜಗದೀ । ಶ್ವರನಶ್ರೀದಫಕೀರಪಾಚ್ಛನ ।
ಮೆರೆವಪಟ್ಟವುಮುಂದೆದೊರೆಯುವದೆಂದುಮರೆಯಾದಾ || ೧೩೩ ||
ಅಂತೆಸೆದುಮರೆಗೊಂಡಕರ್ತನ । ಸಂತರಂಗದೊಳಟ್ಟುಕೊಂಡಂ ।
ದಂತುಮಿಂತುಂಬಿಡದೆಸಂಚಾರವನುಮಾಡುತಲಿ ॥
ಶಾಂತಸದ್ಗುರುವೆಸಿಸಿಲೀಲೆಯ । ನಾಂತುಹಂದ್ರಾಳದಲಿಮಠದಲಿ ।
ನಿಂತುಭಿಕ್ಷಾವೃತ್ತಿಯಿಂದಾಸೋಗನಡಿಸಿದನು || ೧೩೪ ||
ಭಕ್ತರನುಮತಿಗೊಂಡುಬಿಡದಾ । ಸಕ್ತಿಯಲಿಸಂಚರಿಸಿಭಿಕ್ಷಾ ।
ವೃತ್ತಿಯಿಂಮಾಡಿದನುಬಹುಧನಧಾನ್ಯಸಂಗ್ರಹವಾ ॥
ಭಕ್ತರಾತನಕರೆದುಕೊಂಡೀ । ಭಕ್ತಬಂಧುಫಕೀರನಡಿಗನು ।
ರಕ್ತಿಯಲಿತಿಳಿಸಿದರುತಮ್ಮಯಗುರುಚರಿತ್ರವನು || ೧೩೫ ||

ಗುರುಫಕೀರಸ್ವಾಮಿಯುವರಿಗೆ । ಹರುಷಬಡಿಸುತ್ತೆಂದನಾತಗೆ ।
ಗುರುಕುವರನೈನೀನುನಮ್ಮವನಹುದುಲೋಕದಲಿ ॥
ಗುರುವನಗಲದೆನಿಂತುಕೊಳ್ಳೀ । ಸ್ಥಿರಕಪನಿಧರಿಸಿನ್ನುಹೋಗ್ಯೆ ।
ಹರನಪಟ್ಟಕನೀನೆಸಿದ್ಧನುಮುಂದೆಬಾರೆಂದಾ ॥ ೧೩೬ ॥
ಗುರುವಿನಾಜ್ಞೆಯನಾಂತುರಾಮೇ । ಶ್ವರನುಹಂದ್ರಾಳಕ್ಕೆಮಠಕಾ ।
ತುರದಿಹೊರಟನುತಲುಪಿದನುನಿಜಭಕ್ತಜನಸಹಿತ ॥
ಗುರುಫಕೀರನಪಾದಭಕ್ತರೆ । ಗುರುವಿಲಾಸವನರಿತುನಡೆಯಿರಿ ।
ಗುರುವನಗಲದೆಸೇವೆಮಾಡಿರಿಸುಖಿಸಿರಿಹಪರದಿ ॥ ೧೩೭ ॥
ಮರಿಯೆನಿಪಶ್ರೀಸಿದ್ಧರಾಮನು । ಮರವಿಜನರಿಗೆಜ್ಞಾನಮಾರ್ಗವ ।
ನರುಪುತಾಡುವನಾದನಾದಾಸೋಗಸಾಗಿಸುತೆ ॥
ಗುರ ದಿಗಂಬರದತ್ತನಾಟವೊ । ಳಿರುವಸ್ವಾಮಿಯುಚನ್ನವೀರೇ ।
ಶ್ವರನಲೀಲೆಯನೆಲ್ಲಕೇಳಿರಿಭಕ್ತರೆಂಬವರು ॥ ೧೩೮ ॥
ಹೇಳಿದನುಗುರುಮೊದಲೆಪಿಡುಗಿನ । ಕಾಲಸೂಚನೆಗೈದುತೊರ್ದ್ದಾ ।
ಕೀಲಿಹಾಕಿದನಕಟಸಿಜಮಠಕೆಲ್ಲಬಾಗಿಲಿಗೆ ॥
ಹೇಳಲೇಂಹಳೆಕೋರಿಯದನೇ । ಹೋಳುಕೀಲಿಗೆಸುತ್ತಿಕಟ್ಟಿದ ।
ನಾಳುಗಳಗಾಜ್ಞಾಪಿಸಿದನಾಗುರುಫಕೀರೇಶಾ ॥ ೧೩೯ ॥
ಗುರುವಿನೀಮಠವೆಲ್ಲಕಾಯಿರಿ । ಗುರುವುನಿಮ್ಮನುಕಾಯ್ದುಕೊಂಬನು ।
ಗುರುಪದದಸೇವೆಯನುಮಾಡಿರಿನಿತ್ಯನೇಮದಲಿ ॥
ಧರಣಿಯಲಿಗಡಮುಂದೆಪುಣ್ಯಾಂ । ಕುರಿತಸಂತತಿನಿಲ್ಲುವದಲ್ಲದೆ ।
ನರಗುರಿಗಳೇನುಳಿವವೆಂದನುಗುರುಮಹಾತ್ಮಕನು ॥ ೧೪೦ ॥
ಕಾಲಕರ್ಮವುಕೂಡಿಬಂದದೆ । ಕಾಳಕಾವರಪುತ್ರನಾನಿಜ ।
ಲೀಲೆಯೊದಗಿದೆಪರಮಕಾಲಜ್ಞಾನಸೂಚನೆಗೆ ॥
ಶೂಲಪಾಣಿಯಸತ್ಯಶರಣರ । ಮೇಳವತಿಗುಪ್ತದಲಿನಿಂದದೆ ।
ಕೈಲಿಕೊಡಲಿಯಪಿಡಿದುಮೌನನುಮಾಯವಾಗಿಹನು ॥ ೧೪೧ ॥
ಧರಣಿಯಲಿಹಿಂದಾದಶರಣರು , ಬರುವರೈಮುಂದಿನ್ನುಕಾಲಾಂ ।
ತರದೆಣಿಕೆಗೊಂಡವರುಬೈಲಿಗೆಬಂದುಬೆಳಗುವರು ॥

ಅರರೆಕಾಲಜ್ಞಾನದಾಟವ । ನಿರದೆತೋರಿಸಿಸತ್ಯಮಾರ್ಗವ ।
ನರುಪಿಮಾಧಿವ್ರಜವನೊರಸುವರವರುಸುಲಭದಲಿ ॥ ೧೪೨ ॥
ಧರಣಿಭಾರವನಿಳುಹಿಜಗದೀ । ಶ್ವರನಮಹಿಮೆಯತೋರಿಭಕ್ತರಿ ।
ಗಿರದಲಾಶೀರ್ವದಿಸಿಬೈಲಿಗೆಬೈಲದೆನುಸುವರು ॥
ಆಡುತಿಂತಾಸ್ವಾಮಿಸದ್ಗುರು । ರೂಢಿಯಲಿಭಕ್ತರಿಗೆತಿಳಿಸು ।
ತ್ತಾಡುತಿರುವನುಪರಮದಾಸೋಗದಲಿಸೊಗಯಿಸುತೆ ॥ ೧೪೩ ॥
ನೋಡಿರಾಮುದಿವಾಚ್ಛನಂದಿಗೆ । ತೋಡುತೆಗೆದೇಳನೆಯಪಟ್ಟವ ।
ಹೊಡಲೆಳಿಸಿದನಾರುಬಲ್ಲರುಗುರುವಿನಾಟವನು ॥
ರೂಢಿಯಲಿತನುದೊರೆದುನನ್ನೊಳ । ಗಾಡಬಾರ್ಯೆಮಗುವೆನನ್ನೊಡ ।
ಗೂಡಬಾರ್ಯೆಯೆಂದುಸ್ವಾಮಿಯಕರೆದನಾಕರ್ತಾ ॥ ೧೪೪ ॥
ಗುರುವುಪೇಳಿದಪರಿಯುಪಿಡಗದು । ಸುರುವದಾಯಿತುಪುರವನುಳದರು ।
ಹೊರಗಡವಿಯಲಿವಾಸಿಸಿದರ್ರೈಗುಡಿಸಲೆಡೆಗಳಲಿ ॥
ಹರಿಪುರದಕಡೆಗಿರುವಬಸವೇ । ಶ್ವರನಗುಡಿಯಲಿಪ್ರಸ್ತನಡೆಯಿಸಿ ।
ಪುರದಭಕ್ತರುಬಂದುಸ್ವಾಮಿಗೆಬಿನ್ನಮಾಡಿದರು ॥ ೧೪೫ ॥
ಧರೆಯೊಳೀಪರಿಯಾದಬಿನ್ನಕೆ । ಗುರುಫಕೀರನುಯಾವಸ್ವಾಮಿಯು ।
ಕರುಣಿಸಿಲ್ಲಕಟಕಟಸುಮ್ಮನೆಯಾಕೆಕಾಡುವಿರೊ ॥
ಗುರುಗೆಸಮ್ಮತವಿಲ್ಲಮಾತಿದು । ಹರುಷವದುನಿಮಗಾವುಬಂದೊಡೆ ।
ನರಶರೀರಸಮಾಪ್ತವಿಲ್ಲಿಗೆಯೆಂದನಾಸ್ವಾಮಿ ॥ ೧೪೬ ॥
ನೆರೆದಭಕ್ತರಬಿನ್ನಕಾಗಿಯೆ । ಗುರುವೆಬುದ್ಧಿಯೆಬರಲಿವಾದವು ।
ಹರುಷದುತ್ಸವಕೆಂದುಛಲವಿಡಿದವರುಕುಳಿತಿರಲು ॥
ವರದಿಗಂಬರವಾಚ್ಛನಿನ್ನಯು । ಪರಮಲೀಲಾಸೂತ್ರವೆಂದೇ ।
ಗುರುಫಕೀರಸ್ವಾಮಿಹೊರಟನುಭಕ್ತವತ್ಸಲನು ॥ ೧೪೭ ॥
ಗುರುಸುಕೀಲವನರಿತಭಕ್ತರೆ ಪರಮಕರ್ತನತಂತ್ರವರಿಯರಿ ।
ಗುರುವುಹೇಳಿದಮಾತಿನರ್ಥವನರಿಯದಲೆಜನರು ॥
ಮೆರಿಸುತುತ್ಸವದಿಂದೆಸ್ವಾಮಿಯ । ಕರೆದುಕೊಂಡೈದಿದರಗುಡಿಯಲಿ ।
ಭರದಿಪ್ರಸ್ತದಕಾರ್ಯಸಾಂಗೋಪಾಂಗವೆನಿಸಿದರು ॥ ೧೪೮ ॥

ಅಂದಿಗಾಗುರುಬಿನ್ನಹ ತೀರಿಸಿ । ಬಂದನೈರಾತ್ರಿಯಲಿಮಠಕಾ ।
ಬಂಧುರಾತ್ಮನತನುವಿಗಾಯ್ತು ಸ್ವಸ್ಥತೆಯುಬಳಿಕ ॥
ಮುಂದಿನೆರೆಯಿತ್ತುಭಕ್ತರೆಲ್ಲರು । ಬಂದರಾಗುರುಹಿರಿಯರೆಂಬರು ।
ಸಂದಣಿಸಿಜನಜಾತ್ರೆಯೆನಿಸಿತುಗುರುವಿನಂಘ್ರಿಯಲಿ ॥ ೧೪೯ ॥
ಬಂದುಕೂಡಿದಸಕಲಭಕ್ತ । ವೃಂದದಲಿಗುರುಸ್ವಾಮಿಹರಸು ।
ತ್ತಂಧದಲಿಪೇಳಿದನುಪೇಳುವದೆಲ್ಲವುಂದಿನದ ॥
ಅಂದಿಗಾಗುರುದೇವತನ್ನಯ । ಹಂದರಾಳಧವುರಿಗೆರಾಮಂ ।
ಗಿಂದುಧರಶಿವಪಟ್ಟದಾಶ್ರಮುಕೊಟ್ಟನವನಿನ್ನು ॥ ೧೫೦ ॥
ಕಾರಭಾರದಿವರವಕೀಲರು । ಧೀರರುಂತಾವೆನಿಸಿಗುಣಸಿರಿ ।
ದೋರುವಾಗೋಪಾಳರಾಯರಿಗೋಕರೆಂಬರಿಗೆ ॥
ಧಾರುಣಿಗೆಸದ್ಗುಣಿಗಳೆನಿಸುವ । ಘೋರಶೆಟ್ಟರಚನ್ನಬಸವರಿ ।
ಗಾರಯಿದುಕರತರಿಸಿಮುಂದಣಕಾರ್ಯವರುಪಿದರು ॥ ೧೫೧ ॥
ಹರುಷವೆಗ್ಗಳಿಸಿತ್ತುಸುರರಿಗೆ । ನರಜನಕೆಬಹುದುಃಖವೆನಿಸಿತು ।
ನೆರೆಧುದಂಬರದಲ್ಲಿಪ್ರಮಥಸ್ತೋಮವೇವೇಳ್ವೆ ॥
ಭರದಿಪೂಮಳೆಯಾಯ್ತುಮೊಯದೆ । ಗುರುಕುವರಬಾಹಿಂದುತನ್ನೆಡೆ ।
ಗಿರಿಸಿಕೊಂಡನುಕರ್ತನಾತನಸೂತ್ರಕೇನೆಂಬೆ ॥ ೧೫೨ ॥
ಇದ್ದಭಕ್ತರುಕೇಳಿರೈಸಲೆ । ಬುದ್ಧಿವಂತರುಕೂಡಿದರುಮರಿ ।
ಸಿದ್ಧರಾಮೇಶ್ವರನಿಗಾಯ್ತುರುಪಟ್ಟದುತ್ಸವವು ॥
ಶ್ರದ್ಧೆಯಿಂದಲಿಸಕಲವುತ್ತಧವ । ರೆದ್ದುಕಾಣ್ಕೆಯನಿತ್ತರವರಿಗೆ ।
ಸಿದ್ಧರಾಮನುಹರಸಿಸದರಿಗೆಶೋಭಿಸುವನಾದ ॥ ೧೫೩ ॥
ಗುರುಮಹತ್ವದಸಾರವಿಂತಿದು । ಗುರುಮಹತ್ವಮನಂತಮಿರ್ಪುದು ।
ಗುರುಮಹತ್ವವನರಿದುಪೇಳುವರಾರುಲೋಕದಲಿ ॥
ಗುರುಘಕೀರೇಶ್ವರನ್ನಗಂಗಾ । ಧರನಮುಖದಿಂಪೇಳಿಸಿದನೀ ॥
ತೆರದಿಮುಗಿದುದುಸಂಧಿಯಿಪ್ಪತ್ತೊಂಭರನೆಯದೆನಿಸಿ ॥ ೧೫೪ ॥

॥ಇತಿಶ್ರೀ ಶಿರಃಪುರಸನ್ಮಠಶೂನ್ಯಸಿಂಹಾಸನ ಶ್ರೀಭಗವಾನ್‌ವಿಭುವಾತ್ಮೀಯ ಗಂಗನಿಂ ಪೇಳಿಸಿದ ಪೌರಾಣದೊಳಿಪ್ಪತ್ತೊಂಭರನೆಯ ಸಂಧಿಸಮಾಪ್ತಮಿಂತು ೧೫೪ ಪದ್ಯಂಗಳಿಗೆ ಮಂಗಳಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ

## ೨೮ನೇ ಸಂಧಿಯು.

### ೩ನೇಪಟ್ಟ—ಮೂರನೆಯ ಸಿದ್ಧರಾಮಸ್ವಾಮಿಗಳು.

ಸೂಚನೆ—

ಗುರುಸಮರ್ಥನುಮೂಲಕರ್ತನು । ಮರಿಯೆನಿಪಶ್ರೀಸಿದ್ಧರಾಮೇ ।
ಶ್ವರನನಾಮದೊಳೆಸೆವನಾದನುಮರ್ತ್ಯಭೂಮಿಯಲಿ ॥ ಪಲ್ಲ ॥
ಪರಮಗುರುಹಸ್ತಾಬ್ಜಸಂಭವ । ನುರುತರದಮಹಿಮೊಂಗರಾಮೇ ।
ಶ್ವರನುಭಕ್ತಪ್ರೇಮಿಯೆನಿಸುತೆರಂಜಿಸುವನಾದ ॥
ಗರುದಿಗಂಬರಸಹಿತಸದ್ಗುರು । ವರಫಕೀರೇಶ್ವರನಮಹಿಮೆಯ ।
ಪರಿಯಪೇಳಲಿಕಳವೆಪಾಮರರರಿವರೇನದನು ॥ ೧ ॥
ಸಾಧುವರ್ತನರೆಲ್ಲಕೇಳಿರಿ । ಮೇದಿನಿಯೊಳೀಗುರುಫಕೀರನು ।
ಭೇದವಿಲ್ಲದಲನ್ನಕೊಡುವವನಾದನೀಜಗಕೆ ॥
ವೇದಶಾಸ್ತ್ರಪುರಾಣಗಳತ । ರ್ಕಾದಿವಿಷಯವಿಬುಧರಿಗೊಪ್ಪದ ।
ಲಾದಿಕರ್ತನಕಡೆಗೆನೋಡುವನಾದನೊಳಹೊರಗೆ ॥ ೨ ॥
ಗುರುಗೆಕಿಂಕರನಾಗಿಭಕ್ತಗೆ । ಪರಮಶಂಕರನೆನಿಸಿಶಕ್ತಿಗೆ ।
ವರಕುವರನೆಂದೆನಿಸಿವೈರಾಗ್ಯದಲಿಬೆಳಗುತಲಿ ॥
ಗುರುತುಗುರಿಗಂಟೆಲ್ಲಕರ್ತನ । ಚರಣಕರ್ಪಿಸುತಿರುತೆನಿತ್ಯದಿ ।
ಹರನದಾಸೋಗಪನುನಡಿಸುತ್ತಿರುವನರವಿನಲಿ ॥ ೩ ॥
ಶರಣಲೀಲೆಯನರುಹಿಲೌಕಿಕ । ದಿರವನರುಹಿಸಿಭಕ್ತಿಪುಟ್ಟಿಸಿ ।
ಧರೆಯೊಳೀನರದೇಹದಭಿಮಾನವನುಮಿಗೆತೆಗೆಸಿ ॥
ಪರಮಮುಕ್ತಿಯಹಾದಿಹಿಡಿಯಿಸಿ । ಶರಣಸಂತತಿಯಲ್ಲಿಸೇರಿಪ ।
ಗುರುಫಕೀರಗೆಕರುಣವೆನಿತೋಮರ್ತ್ಯದೀಜನರ ॥ ೪ ॥
ಧರಣಿಯಲಿಗುರುವೆನ್ನುವೆರಡ । ಕ್ಷರಮಹತ್ವವನರಿತಭಕ್ತರು ।
ಪರಮಗುರುವಿನಗುರುತುವಿಡಿದಾಚರಿಪರವರಿನ್ನು ॥
ನರಪುರಾತನಶರಣಮಹಿಮೋ । ತ್ಕರುಷರಾಪತ್ರಕ್ಕೆಹತ್ತಿದ ।
ಪುರುಷರಿಗೆತೊತ್ತಾಗಿನಡೆಯಿರಿಭಕ್ತರೆಂಬವರು ॥ ೫ ॥

ಗುರುವುಸತ್ವರಜಸ್ತಮೋಗುಣ । ವರನುಗಡನಿರ್ಗುಣನುಗಡಗುರು ।
ಗುರುವುಮಾಯಾಸಾರಮಾಯಾದೂರನ್ಯೆಗುರುವು ॥
ಗುರುವನಂತಿಂತೆಂದುಬಣ್ಣಿಸ । ಲರಿದುವಾಚಾತೀತನೆನಿಪನು ।
ಗುರುವುಲೀಲಾಮೂರ್ತಿಸುಪರಂಜ್ಯೋತಿಪರಬೊಮ್ಮ ॥ ೬ ॥
ವಿವಿಧಭಕ್ತರನೀವುಕೇಳಿರಿ । ಭುವನದೊಡೆಯನಲೀಲೆಯನುಹೇ ।
ಳುವದುಬಣ್ಣಿಪುದರಿದುಗುರುಸುಕಟಾಕ್ಷವಿರಹಿತಗೆ ॥
ಅವನಿಯಲಿತರತರದಶ್ರುತಿಗಳ । ನಿವಹನುಪಕಾರಾರ್ಥವೆನೆಸಾ ।
ರುವವುಕಣ್ಗೆಸೆದವನುಪರಶಿವಗುರುಫಕೀರೇಶ ॥ ೭ ॥
ವರಪುರಾತನಪದ್ಧತಿಗೆಸರಿ । ಯಿರಿಸುತಾಕಮಠವನುಬೆಳೆಯಿಸಿ ।
ನೆರೆಸುಧಾರಣೆಗೈಸಿದನುಹೂದೋಟದಂದವನು ॥
ಪರಿಕಿಸುತೆದಾಸೋಗದಂದವ । ನರಿವುತುತ್ತಮಜನರನಿರಿಸುತೆ ।
ಬರುವಭಕ್ತರಿಗೆಲ್ಲಸಮ್ಮುದಗೊಳಿಸುತಿರುತಿಹನು ॥ ೮ ॥
ನೆರೆವಮಾಹೇಶ್ವರರನಗಲದೆ । ಶರಣರನುಸಾಧುಗಳನಾಸಂ ।
ತರನುನಾನಾಮುಖದೊಳಾನಂದದಲಿಮುಳುಗಿಸುತಾ ॥
ದರುಶನಾರ್ಥವುಬಂದುಪಾದ । ಕ್ಕೆರಗುತಿರುವಾರಾಜಪುರುಷರಿ ।
ಗಿರದೆಮನ್ನಿಸುತಿಹನುಕಾಮ್ಯವನಿತ್ತುಗುರುರಾಯ ॥ ೯ ॥
ಬರುತಲಿರುವಾಬಡವರಿಗೆಕುರು । ಡರಿಗೆಕುಂಟರಿಗೆಲ್ಲಹೆಳವರಿ ।
ಗಿರದೆಚಿಂತಿಸಿಕರುಣಿಪನುಗುರುವನ್ನವಸ್ತ್ರವನು ॥
ಪರಿಕಿಸುವನೊಳಹೊರಗೆಮಠದೊಳ । ಗಿರುತೆಪಗಲಿರುಳೆನಲುಸೇವಕ ।
ರಿರುವರೆಚ್ಚರವಿಡಿದುಕೆಲಸಂಗೈವರಡಿಗಡಿಗೆ ॥ ೧೦ ॥
ಹೊಲಸುಬಗೆಯನುಬಿಡಿರಿಕೆಲಸವ । ನಲಸದಲೆಮಿಗಿಮಾಡಿದಣಿಯಿರಿ ।
ದೊರಕಿಸಿರಿಸಲೆಸೀಗೆಸುಖಿಸಿರಿಧರ್ಮಮಾರ್ಗದಲಿ ॥
ಇರುವತಾಯ್ತಂದೆಗಳಪಾದ । ಕ್ಕೆರಗುತವರಾಜ್ಞೆಯಲಿನಡೆಯಿರಿ ।
ದುರುಳತನದಿಂದೇನುಸುಖವಿಲ್ಲೆಂಬನಾಸ್ವಾಮಿ ॥ ೧೧ ॥
ಹೊಲದೆಡೆಗೆಸಲೆಸಾರಿಬರುವನು । ಸುಳಿವುತುಗ್ರಾಣದಲಿನೋಳ್ಪನು ।
ಬಲಿದಕಮಠದಮನೆಯೊಳಡ್ಡಾಡುವನುಗುರುದೇವ ॥

ಎಲವೊಭಕ್ತರೆಕೇಳಿರಾಗುರು । ಲಲಿತವಿಶ್ವಕುಟುಂಬಿಯಾತನ ।
ಬಳಗದೊಳಿಗಡವನುತಾನೆಂತೆಂಬನೇವೇಳ್ವೆ ॥ ೧೨ ॥
ಪದಪಿನೆಸೆವನಗಾರಿಖಾನೆಗೆ । ಸದರಿನೆಡೆಗುರೆಲಕ್ಷ್ಯಕೊಡುವನು ।
ಪದೆದುಪಾಚ್ಛನಪಾಡಿಗದ್ದಿಗೆಗೈದಿವಂದಿಪನು ॥
ಸದಮಲಾತ್ಮರೆಲಾಲಿಸಿರಿಗುಣ । ಸದನದಾರ್ಯರೆಚಿತ್ತ್ರಯಿಸಿರಾ ।
ಮದನಹರಗುರುಶಂಭುಲಿಂಗನಕಥೆಯಸಾರವನು ॥ ೧೩ ॥
ಒರೆವುತಿರುವನುಶಾಸ್ತ್ರದರ್ಥವ । ನೊರೆವುತಿರುವನುವೇದದರ್ಥವ ।
ನೊರೆವುತಿರುವನುಗುರುಮಹತ್ವವಸಾರಸಂಗತಿಯಾ ॥
ಒರೆವುತಿರುವನುಶರಣರಂದವ । ನೊರೆವುತಿರುವನುಸಾಧುಶೀಲವ ।
ನೊರೆವುತಿರುವನುಸ್ವಾಮಿಭಕ್ತರನೀತಿರೀತಿಯನು ॥ ೧೪ ॥
ಮುಂದೆವಂದಿಸುತಿಹರುಕೆಲವರು । ಹಿಂದೆನಿಂದಿಸುತಿಹರುದುರುಳರು ।
ಮುಂದೆಬಂಧನವವರಿಗಲ್ಲದೆಬೇರೆಗತಿಯುಂಟೆ ॥
ತಂದೆಜಂಗಮದೇವರೆಂಬರು । ಮುಂದಕವರನುಕರೆದುನೀಡರು ।
ಹಂದಿಮನುಜರಬಾಳ್ವೆನೋಡಿರಿಯೆಂಬನಾಸ್ವಾಮಿ ॥ ೧೫ ॥
ಸತಿಸುತರ್ಕಳುಬಂಧುಬಳಗವು । ಕ್ಷಿತಿಯೊಳಾಪರಶಿವನಲೀಲೆಯೋ ।
ಸ್ನತಿಕೆಯದುಗಡಸೃಷ್ಟಿಯಾಟವುಸರ್ವವಾತನದು ॥
ಸತತವೊಳಹೊರಗಿರ್ಪನಾತನು । ನುತಿಗೆನಿಂದೆಗೆಸುಜನಕುಜನ ।
ಪ್ರತತಿಗಾತನುನಲಿವನಗಲದೆಮುಳವನೆನ್ನುವನು ॥ ೧೬ ॥
ಗುರುಮಹಾಕಾರ್ಯಾರ್ಥಕೆಂದೆನೆ । ಪರಮಭಿಕ್ಷಾಟನಕೆಗುರುಸಂ ।
ಚರಿಸುತಿರುವನುನಾಡಿನಲಿಶಿವಲೀಲೆಯುಲಿಬಿಡದೆ ॥
ದರುಶನಾಪೇಕ್ಷೆಯಲಿಪಗಲಿರು । ಳಿರಗುತಿರುವಾಜನಕೆಶ್ರೀಗುರು ।
ಹರಸಿಸುಕ್ಷೇಮವನುಕೇಳ್ವನುಮನ್ನಿಸುವನವನು ॥ ೧೭ ॥
ಅರರೆನಾಡಿನೊಳೆಲ್ಲಕಡೆಯುಲಿ । ಗುರುಮಹೋತ್ಸವಕಾರ್ಯನಡೆವುದು ।
ಗುರುವಿಗೆಲ್ಲೆಡೆಯಲ್ಲಿಬಿನ್ನಹಗಳಾಗುತೆಸೆಯುವವು ॥
ಸರಸಭಕ್ತರುಧನಿಕರೆಲ್ಲರು । ಮೆರೆವಶೆಟ್ಟರುದೈವದೊಂದಿಗೆ ।
ಪರಮಗುರುಪಾದಕ್ಕೆಭಿಕ್ಷಾರ್ಥವನುಸಲಿಸುವರು ॥ ೧೮ ॥

ಅರವಿನರಸನುಗುರುಫಕೀರೇ । ಶ್ವರನುತಾನವರವರಯೋಗ್ಯತೆ ।
ಯರಿತುಸ್ವೀಕರಿಸುವನುಶ್ರೀಭೂದೇವಿಗಗಲದಲೆ ॥
ಹರುಷಬಡಿಸುವನೆಲ್ಲಪಾಪವ । ನೊರೆಸುವನುಸಂಚಾರವಾದದೆ ।
ಗುರುನಿರಂಜನಗೆನಿತುಕರುಣವೊಭಕ್ತಜನರೆಡೆಗೆ ॥ ೧೯ ॥
ಪರಶಿವನತತ್ತ್ವರಿಗದಿಂಗಿತ । ಪರುಷಿಹರುಷಂಗೊಡುವನಾತನು ।
ದುರುಳತೆನವನುಬಿಡಿಸಿಭಕ್ತ್ಯಾಚಾರದೋರುವನು ॥
ಚರಣದರ್ಶನವನಿತ್ರಕೆಲ್ಲರು । ತ್ವರಿತಭಯಭಕ್ತಿಯನುಹೊಂದುವ ।
ರುರೆಸುರಾಚಾರವನುಬಿಡುವರುಸುಜನರಾಗುವರು ॥ ೨೦ ॥
ಮೊನ್ನೆಕನಸಿನೊಳೆಸೆದನೆಂಬರು । ನಿನ್ನೆದರುಶನವಾಯಿತೆಂಬರು ।
ಚನ್ನಸದ್ಗುರು ಲೀಲೆಹೆಚ್ಚಿನದೆಂದುನುಡಿಯುವರು ॥
ಬನ್ನಬಡುವರುಜರಿವರಾಸಂ । ಪನ್ನರೆಲ್ಲರುಸುಖದೆಬಾಳುವ ।
ರೆನ್ನುವರುಮತ್ತೊಬ್ಬರೊಬ್ಬರಿಗೆಲ್ಲತಿಳಿಸುವರು ॥ ೨೧ ॥
ಕೇಳಿರಾಗುರುಸಿದ್ಧರಾಮನು । ಲೀಲೆಯಾಡುತೆಚರಸುತಂಗ್ರಾ ।
ಮೊಳಿಯನುಭಕ್ತರನುಪಾವನಗೈಯುತಂದದಲಿ ॥
ಭಾಳನೇತ್ರನಸೂತ್ರದಿಂದಲೆ । ಕಾಲಕಾಲಕ್ಕೊದಗುತಂತಾಂ ।
ಮೂಲಕರ್ತನವರರಥೋತ್ಸವಸಾಂಗಗೊಳಿಸುವನು ॥ ೨೨ ॥
ಪರಮಕರ್ತನುಮುನ್ನತೋರಿದ । ತೆರದೊಳನುಗುಣವಾಗಿನಾನಾ ।
ತರದಕಾರ್ಯಂಗಳನೆನಡಿಸುವನೆಲ್ಲಜಾತ್ರೆಯಲಿ ॥
ಕೊರತೆಗಳುತಲೆದೋರದಂದದೊ । ಳರಿಸಿಸಮಲಕ್ಷ್ಯವನುಹೊರಗೊಳ ।
ಗರರೆಸೊಗಯಿಸುತಿಹನುಸದ್ಗುರುವರಫಕೀರೇಶ ॥ ೨೩ ॥
ಬರುವರೈಸಲೆರುದ್ರಗಣರುಂ । ಬರುವರೈಸಲೆಪ್ರಮಥಗಣರುಂ ।
ಬರುವರೈಸಲೆಭಕ್ತಗಣರುಂಗಗನದಿಂದಿಳಿದು ॥
ಧರಣಿಯಲಿಸಂಚಾರಮೊಡು । ತ್ರಿಭುವನವರ್ಯಗುರುಶಂಭುಲಿಂಗನ ।
ಪರಮಕರ್ತನವಂತದೊಳಡ್ಡಾಡುವನವಾಮದಲಿ ॥ ೨೪ ॥
ಬರುತಿಹನುಗಡವಿಷ್ಣುಬ್ರಹ್ಮನು । ಬರುತಿಹದಿಕ್ಪಾಲರೆಲ್ಲರು ।
ಬರುತಿಹನುಮುನಿಪರಮರುವಿವಿಧರೂಪದಲಿ ॥

ಗುರುಫಕೀರೇಶ್ವನದೇವಿಯು । ಪರಮಕರ್ತನಕಂಡುಕೌತುಕ ।
ವೆರೆಸುತೋಂಕಾರದಲಿಬ್ರಹ್ಮಾಸಂಡವಮಯರಹರು ॥ ೨೫ ॥
ನೋಡುವರುಮಠದೊಳಗೆಹೊರಗೆಯು।ನೋಡುವರುವಿಗೆಮೇಲೆಕೆಳಗೆಯು।
ನೋಡುವರುಚೌಘಡನಗಾರಿಯಲಕ್ಷ್ಮಿಯನುರಥವ ॥
ನೋಡುವರುಹೂದೋಟವನುಗಡ । ನೋಡುವರುಜಾಹ್ನವಿಯವಾಪಿಯು ।
ರೂಢಿಯಲಿಕಾಣುವರುಕರ್ತನಸರ್ಪಭೂಷಣನ ॥ ೨೬ ॥
ನೋಡುವರುಶಿವಸದರನೊಪ್ಪು । ತ್ತಾಡುತಿರುವಾರಾಮಲಿಂಗನ ।
ನೋಡಿವಿಗೆಮುದವಾಂತುಕೊಂಡಾಡುವರುತವ್ಮೊಳಗೆ ॥
ನೋಡುವರುಜಾತ್ರೆಯನುಬಹುಜನ । ಕೂಡಿಭಕ್ತ್ಯುಚ್ಚಾರದಲಿಸಲಿ ।
ದಾಡುವಂಕಣ್ಣಿಂದೆಕಂಡಾನಂದಹೊಂದುವರು ॥ ೨೭ ॥
ಬರುವನಾಭೃಂಗೀಶಸಿಳೆಯಲಿ । ಬರುವನಾನಂದೀಶ್ವರಂಗಡ ।
ಬರುತಲಿರುವನುಷಣ್ಮುಖೇಶ್ವರಬಹುಕುರೂಪದಲಿ ॥
ಬರುವರಾವೂರುತಿವಿಭೀಷಣ । ರರರೆಸಂಚರಿಸುತ್ತೆಲೋಕದಿ ।
ಗುರುಫಕೀರನಕಂಡುಕಾಣಿದಾಡುವರ ನಲಿನಲಿದು ॥ ೨೮ ॥
ಗುರುವಿನೆಡೆಗಾಹರಕತಿರಕರ । ತೆರದಿರೂಪವನಾಂತುಬರುವರು ।
ಗುರುಪ್ರಸಾದಕೆಬಾಯಿದೆರೆವರುಶ್ರೀಫಕೀರನಿಗೆ ॥
ಅರವದೆನಿತೋಕಾಣುತವರನು । ಹೊರಗೊಳಗೆಸಂತಯಿಸಿನೂಯದೆ ।
ಗುರುಪ್ರಸಾದವನೀಯುತಿರುವನುನಿಮ್ಮದೆಂದೆನುತಾ ॥ ೨೯ ॥
ಎಲೆಲೆಮಕ್ಕಳೆಕೇಳಿರೈನಿ । ವ್ಮೊಳಗೆಹೊರಗೆಯುಹೊಳೆದುಹೊಳೆಯುದ ।
ಲಿಳೆಯೊಳಿರ್ಪಜ್ಜಯ್ಯನವರಾಜಾತ್ರೆಯೆಂದವನು ॥
ಸುಲಭದಲಿಸಂಕ್ಷಿಪ್ತದಲಿನಿಮ । ಗೆಳಸಿಹೇಳುವೆನಿಲ್ಲಿನಿರ್ವಗಡ ।
ನಲಿದೆರಗಿಕಿವಿಗೊಡಿರಿಸದ್ಗುರುಫನಕಥಾಮೃತಕೆ ॥ ೩೦ ॥
ಬರುತಲಿಹರೆಣ್ದೆಸೆಯೊಳಿರ್ಪರು । ಮೆರೆವವಂಗಡಿಸಾಲುಗಳುಪರಿ ।
ಪರಿಘುವೌಜಿನಮೇಳಗಳುಗಡಪದಪಿನಾಟಗಳು ॥
ಉರುತರದಸನ್ಯಾಸಿಗಳುಗಡ । ಪರಮಚರಮೂರ್ತಿಗಳುಯೋಗೀ ।
ಶ್ವರರುಬಂದೆರಗುವರುಸ್ವಾಮಿಗೆಕರ್ತಗಗಲದಲೆ ॥ ೩೧ ॥

ಎತ್ತನೋಡಿದಡತ್ತಜನಕುಲ । ವೆತ್ತನೋಡಿದಡತ್ತಗೂಡಾ ।
ರೆತ್ತನೋಡಿದಡತ್ತಕರಿತುರಗಾಳಿಪಶುಪಕ್ಷಿ ॥
ಎತ್ತನೋಡಿದಡತ್ತವಾದ್ಯಗ । ಳೆತ್ತನೋಡಿದಡತ್ತಜಾತ್ರೆಯು ।
ದೆತ್ತನೋಡಿದಡತ್ತಸಂಭ್ರಮವಮಮಕಣ್ಮನಕೆ ॥ ೩೨ ॥
ಪರಮಗುರುಸಂಸ್ಥಾನಕೊಪ್ಪು । ತ್ತಿರುವರೆಲ್ಲರುಸೇವಕರುಮುದ ।
ವೆರೆದುಮುಂಚಿತವಾಗಿಸೌರಣೆಗೈಯಲೊಳಹೊರಗೆ ॥
ಅರರೆವಾಚ್ಛನಮಠವುಶಿವಸಿರಿ । ವೆರಸಿತಾಂರಜತಾದ್ರಿಯೆನಲೀ ।
ಧರಣಿಗೆಸೆಯುತ್ತಿಹುದುಚರ್ಣದಶುಭ್ರವರ್ಣದಲಿ ॥ ೩೩ ॥
ಗುರುಮಠದಸರ್ವಾಧಿಕಾರಿಗ । ಳರವುಗೊಂಡಾಜ್ಞಾಪಿಸಲಿಕಾ ।
ಗುರುವಿನೆಡೆಗಳುಸಹಜಸಿಂಗರವಾಂತುರಂಜಿಸಲು ॥
ಪರಿಪರಿಯಪಟಗಳಲಿಭಾಸುರ ತರದಬೊಂಬೆಗಳಲ್ಲಿಬಹುಸುಂ ।
ದರವಿಚಿತ್ರದಚಿತ್ರಪಟಮೇಳದಲಿಶ್ರೀರಥವು ॥ ೩೪ ॥
ಉನ್ನತರೋನ್ನತಕಳಸದೊಂದಿಗೆ । ನೆರವಿಗಚ್ಚರಿಯೆನಿಸುತಂಡವೆ ।
ಗುರುಮಹತ್ವದಘನತೆಯಲಿಶೋಭಿಪುದುಜಾತ್ರೆಯಲಿ ॥
ಹರುಷದಿಂಹರಿದಾಡುತಿರುವರ । ಪರಿಶೆಯಬ್ಬರವಡೆದುಮಠದೊಳ ।
ಹೊರಗೆಕಿವಿಗಡಚಿಕ್ಕುವವುಬಹುವಾದ್ಯನಾದದಲಿ ॥ ೩೫ ॥
ಗುರುಮಠದವೈಭವದಸಂಸ್ಥಿತಿ । ಯರಿಸುವೆನುತುಸುವೊತ್ರಕೇಳಿರಿ ।
ಕಿರಿಯರೇನೀವೆಲ್ಲನೋಡಿಂಮುಂದಿನುತ್ಸವವ ॥
ಹಿರಿಯರೆಂಬವರೆಲ್ಲಬಲ್ಲರು ಗುರುವಿಲಾಸದಮಠದಭಾಗಗ ।
ಳೊರೆವೆನಂದದಿಕೇಳಿರೆಲ್ಲರುಗುರುವಿನಾಟವನು ॥ ೩೬ ॥
ಹಿಂದೆಮುಂದೆಯುಸೂಪಶಾಲೆಗ ಳೊಂದಿಲುಭೋಜನದಶಾಲೆಗ ।
ಳಂದದಲಿಮೆರೆದಪುದುಮಧ್ಯದಭಾಗನವರಂಗ ॥
ಹೊಂದಿದವುಗಳಮಧ್ಯಮಾರ್ಗದಿ । ಹೊಂದಿದಾಬಾವಿಯಲಿಕೃಷ್ಣೆಯು ।
ನಿಂದುಮರೆಯಾಗಿಹಳುಶ್ರೀಗುರುಕರ್ಶನಾಜ್ಞೆಯಲಿ ॥ ೩೭ ॥
ಪರಮನವರಂಗಕ್ಕೆಪೂರ್ವ । ಕ್ಕಿರುವದೇಶಿವಸದರಿನೆಡೆಯೆನೆ ।
ಸಿರಿಯೊಳೆಸೆವವುಕೋಣೆಯೆರಡುಂದಕ್ಷಿಣೋತ್ತರಕೆ ॥

ಗುರುಪರಾತ್ಪರನೆನಿಪಕರ್ತನ । ಪರಮಹಂಸನಶ್ರೀಫಕೀರೇ ।
ಶ್ವರನಸದರದುಮೆರೆವುದಾದಶದಿಕ್ಕಿನೋಳ್ಜೆಯಲಿ ॥ ೩೮ ॥
ಉರುತರದಯೋಗಿಗಳಶರಣರ । ಪರತ ದತ್ತ್ರೈಮೂರ್ತಿಗಳಭ ।
ಕ್ತರಸುಶಾಂತಸಿರಿಸರಸ್ವತಿಶಕ್ತಿದೇವಿಯರ ॥
ಪರಮಧಾರ್ಮಿಕಧರಣಿಪಾಲರ । ಶರಣರಕ್ಷಕಕರ್ತನೆಸೆವಾ ।
ಗುರುಫಕೀರೇಶ್ವರನಸನ್ನುತಭಾವಪಟಗಳಲಿ ॥ ೩೯ ॥
ತರತರದಬಣ್ಣದಲಿಚಿತ್ರೋ । ತ್ಕರದೊಳಾಭಿತ್ತಿಗಳವೈಸಿರಿ ।
ವೆರದಕಡುಸೊಬಗಿನಲಿರಂಜಿಸುತಿಹುದುಶಿವಸದರು ॥
ನರಸುರರಿಗಾಹ್ಲಾದಗೊಡುವಾ ಬರುವಜನಕನ್ನವನುಕರುಣಿಪ ।
ಗುರುಫಕೀರೇಶ್ವರನುಶೋಭಿಪನೈದೆಸದರಿಸಲಿ ॥ ೪೦ ॥
ವರಶಿರಃಪುರದಾರ್ಯರೆಲ್ಲರು । ಧರಣಿಪಾಲಕರಾಜಪುರುಷರು ।
ಗುರುಫಕೀರೇಶಂಗೆಸದರಿಗೆಬಾಗಿಪ್ರಾರ್ಥಿಸಲು ॥
ಗುರುರಥೋತ್ಸವಕೆಂದುಸದ್ಗುರು । ವರನುಸಿದ್ಧತೆಗಾಜ್ಞೆಗೊಡಲ ।
ಬ್ಬರಿಸುತಿರುವವುಕಾಳಿಜಯಭೇರಿಗಳುಬಳಿವಿಡಿದು ॥ ೪೧ ॥
ಹಸರುಡಿಗೆತೊಡಿಗೆಯಲಿತಾಂಬಿಡ । ದಸಮಬಿರುದುಗಳಲ್ಲಿಶೋಭಿಪ ।
ಹಸರುಧ್ವಜದೋಳ್ಜೆಯಲಿಕರಿತುರಗದಲಿವಾದ್ಯದಲಿ ॥
ಅಸಮಚಾಮರಛತ್ರದಲಿನಿಂ ದೆಸೆವಮರಿದೇವರ್ಕಳಲಿಗುರು ।
ಶಶಿಧರೋನ್ನತತೇಜದಲಿಬಂದಪನುಗದ್ದುಗೆಗೆ ॥ ೪೨ ॥
ಇವನದೇನೆಂದಪನೊಕರ್ತನ । ಗವನಿವನಿಗೇನೊರೆದಪನೊನೆರೆ ।
ದವರಿಗೇಂಹೊಳೆದಪುದೆಶಿವಸಂಜ್ಞಾಂಗಶಬ್ಧವದು ॥
ತವತವಗೆಭಯವಡೆದುಸರಿಸರಿ । ದುವಿನಮಿತರಾಗುತ್ತಲಿರುತಿರೆ ।
ಭವಹರಂಗುರುರಥಕೆಬರ್ಪನುಶಂಭುಸಂಭ್ರಮದೆ ॥ ೪೩ ॥
ಧರೆಯೊಳಂಬರದೊಳಗೆಸ್ಥಳವಿಡಿ । ದಿರುವರೆನೆಮನುಜರ್ಕಳಮರರು ।
ಗುರುಫಕೀರನುತೆಂಗಿಲಿಡುವನುರಥಕೆಸಾಗೆನುತಾ ॥
ಅರರೆಧೀನ್‌ದೀನೆಂಬಶಬ್ಧದೆ । ಪರಮರಥವದುಸಾಗಿಬರ್ಪುದು ।
ತಿರುಗಿತನ್ನೆಡೆಗೈದಿನಿಲ್ವುದುಗುರುವಿನಾಜ್ಞೆಯಲಿ ॥ ೪೪ ॥

ಪರಮಗುರುಪಾದದಲಿಪ್ರತಿದಿನ । ವಿಂಡಲಾಗುತ್ತಿರುವವಾದ್ಯವು ।
ನೆರೆಹೊರೆಗೆಪುರಕೆಲ್ಲಸಂಭ್ರಮಗೊಳಿಸುತಿಹುದಮಮ ॥
ಸರಸಚೌಘಡಮಂಗಲಧ್ವನಿ । ವಂಸನಾದಿಯುಮಂಜುಲಸ್ವರ ।
ನೆರೆನಗಾರಿಯವಾದ್ಯದಬ್ಬರವಹುದುಶಿವಸುಖವು । ೪೫ ॥
ಹೊರಗೆವಾದ್ಯಗಳಾಗುತಿರಲಾ । ಪರಿಯುಗದ್ದುಗೆಯೊಳಗೆಹೊರಗೆಯು ।
ಸುರರವಾದ್ಯಗಳಾಗುತಿರುವವುಕರ್ತನೆಡೆವಿಡಿದು ॥
ಹರಿಯೆಬಲ್ಲನುಶಿವನೆಬಲ್ಲನು । ಗುರುವೆಬಲ್ಲನುವೇಣುಯೋಗೀ ।
ಶ್ವರನೆತಾನದುಬಲ್ಲನಲ್ಲದೆಕಾಣುವವರಾರು ॥ ೪೬ ॥
ಗುರುನಿರಾಮಯಪ್ರಭುನಿರಾಮಯ । ಗುರುನಿರಾಕುಲಪ್ರಭುನಿರಾಕುಲ ।
ಗುರುನಿರಂಜನಪ್ರಭುನಿರಂಜನನೀನೆನಿರ್ಮಾಯ ॥
ಗುರುಮಹೋನ್ನತಪ್ರಭುಮಹೋನ್ನತ।ಗುರುಮಹಾತ್ಮಕಪ್ರಭುಮಹಾತ್ಮಕ।
ಗುರುಜಗನ್ಮಯಪ್ರಭುಜಗನ್ಮಯನೀನೆಗುರುದತ್ತ ॥ ೪೭ ॥
ಗುರುಪುರಾತನಪ್ರಭುಪುರಾತನ । ಗುರುಸಮರ್ಥನುಪ್ರಭುಸಮರ್ಥನು ।
ಗುರುದಿಗಂಬರಪ್ರಭುದಿಗಂಬರಸಚ್ಚಿದಾನಂದ ॥
ಗುರುಸದಾಶಿವಪ್ರಭುಸದಾಶಿವ । ಗುರುನಿರಾಕೃತಿಪ್ರಭುನಿರಾಕೃತಿ ।
ಗುರುಜಗದ್ಗುರುಪ್ರಭುಜಗದ್ಗುರುನೀನೆನೀನೆನುತ ॥ ೪೮ ॥
ಬಂದಿಹರುನಾರದರುತುಂಬುರ । ರಂದದಲಿನಿಂತಿಹುದುದೇವ ।
ವೃಂದವದುಭೃಂಗೀಶನಂದೀಶ್ವರರುಸಾರಿಹರು ॥
ನಿಂದಿಹರುಸಲೆರಂಭೆಯುರ್ವಶಿ । ಬಂದಿಹರುಗಡದೇವಗನ್ಯರು ।
ಹೊಂದಿಹರುನೆರೆನಾಗಗನ್ಯರುಕರ್ತನೆಡೆವಿಡಿದು ॥ ೪೯ ॥
ಸರಸತಾಳಮೃದಂಗಗಳತಂ । ಬುರಿಯುಸುಸ್ವರಗೈದುಪಾಡು ।
ತ್ತಿರಲುಬೆಳಗುತ್ತಿರಲುಮಣಿಗಣಮಂಗಳಾರತಿಯ ॥
ಹರುಷಗೊಳುತಿರೆಕರ್ತನಂದದೊ । ಳಿರದಲೆಲ್ಲರುಭಜನೆಗೈಯುತೆ ।
ಭರದೆಜಯಜಯವೆನುತೆನಿಲ್ಲದೆನೆಗೆವರಂಬರಕೆ ॥ ೫೦ ॥
ಮೂಯೆಯಿಂಬಂದವರುಭೂಮಿಗೆ । ಮೂಯೆಯಿಂನಡೆಯುವರುಗಡನಿ ।
ರ್ಮಾಯನಾಟವಗಾಧವೆಂದೈದುವರುತಮ್ಮೆಡೆಗೆ ॥

ನಾಯಕರೆನಡೆನೋಡಿರಾಗುರು । ನಾಯಕನಕಥೆಬಹುವಿಚಿತ್ರವು ।
ಮಾಯೆಯಾಟವದೇನೊತಿಳಿಯದುಮರ್ತ್ಯದೀಜನಕೆ ॥ ೫೧ ॥
ಗುರುವಿನಾಜ್ಞೆಗೆಸಾಗಿರಥವದು । ಗುರುವಿನಾಜ್ಞೆಗೆತಿರುಗಿತಾನಾ ।
ಗುರುವಿನಾಜ್ಞೆಗೆಸ್ಥಾಯಿಯೆನಿಸಿರೆಶ್ರೀಫಕೀರೇಶ ॥
ಬರುವಸೀಶನಕಿಡಿಕಿಸದರಿಗೆ । ನೆರೆವುದೆಲ್ಲವುಮುಖ್ಯಮಂಡಳಿ ।
ಹರುಷದುತ್ಸವನರ್ತನಂಗಳುವಾದ್ಯವೆಸಗುವವು ॥ ೫೨ ॥
ಮರುದಿವಸಕಡುಬಿನುರುಕಾಳಗ । ವರರೆನೋಡಲ್ಕೆಂದುಬಹುಜನ ।
ನೆರೆಯುತಿರುವದುಹಳ್ಳಿಪಳ್ಳಿಗಳಿಂದಬರುತಿಹುದು ॥
ಧರಣಿಮನೆಮೊಳಗೆಯುಮೇಣು । ಪ್ಪರಿಗೆದಟ್ಟಣೆಯೆನಿಸುತಿರೆಮುಂ ।
ಬರಿವಮಾನಸದೃಷ್ಟಿಯಿಂದೆರಗುತ್ತಲಿರೆಪರಿಶೆ ॥ ೫೩ ॥
ನರರುಜಯಜಯವೆನಲುಭುವನದಿ । ಸುರರುಜಯಜಯವೆನಲುಗಗನದಿ ।
ಗುರುಫಕೀರನುಕಂಡುಕರ್ತಂಗೆರಗಿವೋದದಲಿ ॥
ಅರರೆಜಯಭೇರಿಯನುಹೊಡಿಸುತೆ । ನೆರೆನಿರೀಕ್ಷಿಸಿಹರಸುತಂದದಿ ।
ಸುರಿಸುತಲಿಸಲೆಸೂರೆಗೈಯಲುಬೆಲ್ಲದಚ್ಚುಗಳ ॥ ೫೪ ॥
ಹರುಷದತಿಭರದಿಂದೆಭಕ್ತರು । ಸುರಿವುತಿರೆಪುಷ್ಪಾಳಿಯಲಿಶ್ರೀ ।
ಕರದಪರಿಮಳದ್ರವ್ಯದಲಿಮಿಗೆಮುಳುಗಿಮೃಡಸಮನು ॥
ಗುರುಫಕೀರನುಮೂಲಗದ್ದುಗೆ । ಗಿರಿಗಲ್ಯೆದೇಸುಪ್ರದಕ್ಷಿಣೆ ।
ಗೆರಗುತಾಗಿಸಿಮುಂದೆನಡಿಸುವನೆಲ್ಲಕಾರಣವ ॥ ೫೫ ॥
ಪರಿಭವದಕುಲಛಲದಭಕ್ತರೆ । ಹರುಷಗೊಳ್ಳಿರಿಜಗದಕರ್ತನು ।
ಮೆರೆವಗದ್ದುಗೆಗಿರುತೆಮಾಯೆಯೊಳಾಡುತಾಡುತಲಿ ॥
ನರರಭಕ್ತಿಗೆಸೇವೆಗೋಲಿವನು । ಪರಿಕಿಸುತ್ತಿರುತಿಹನುನಿಷ್ಠೆಯ ।
ನರಿಯಿರೈನೀವ್‌ತಿಳಿದುನಡೆಯಿರಿಜೋಕೆಬಲುಜೋಕೆ ॥ ೫೬ ॥
ಎಲ್ಲಭಕ್ತರೆಕೇಳಿರಾಗುರು । ವಲ್ಲಮನಕಡುಕಾರಣಂಗಳ ।
ನೆಲ್ಲಸಾಗಿಸಿಬಹುನಿಧಾನದೆಶಾಂತಿಮಾಡಿಸುತ ॥
ಎಲ್ಲಭಕ್ತರಿಗನ್ನಗಾಣಿಸು । ತೆಲ್ಲರಿಗೆಹರಸುತ್ತೆಮನ್ನಿಸು ।
ತೆಲ್ಲರಲಿಶಿವಸದರಿನಲಿಸಲೆಶೋಭಿಸುತ್ತಿರಲು ॥ ೫೭ ॥

ಪರಮರಸಿಕರುಗಾಯಕರುಸಿಂ । ಗರದವೇಶ್ಯಾಂಗನೆಯರಾಶಂ ।
ಕರನಕೀರ್ತನೆಗೈವರಾಪಂಡಿತರುಕವಿವರರು ॥
ಗುರುವೆನೀಗತಿಯೆಂದುಸನ್ನಿಧಿ ಗೆರಗುತಿರೆಸೇವಿಸುತಲಿರೆಶ್ರೀ ।
ಗುರುವುಬಿಡದಿಷ್ಟಾರ್ಥವಿತ್ತಾನಂದಬಡಿಸುವನು ॥ ೫೮ ॥
ಎಲ್ಲರಾಶೀರ್ವಾದಫಲವನು । ಸಲ್ಲಲಿತಗುರುಪಾದದಲಿಪಡೆ ।
ದೆಲ್ಲಕಡೆಗನುದಿನವುನಡೆವರುಧ್ಯಾನಬಲದೊಡನೆ ॥
ಎಲ್ಲರಾಗುರುಜಾತ್ರೆಯಂದವ । ನೆಲ್ಲಬಲ್ಲವರೈಸೆನಿಮಗಿ ।
ನ್ನೆಲ್ಲಮಪ್ರಭುಲೀಲೆಪೇಳ್ವೆನುಕೇಳ್ವುದಂದದಲಿ ॥ ೫೯ ॥
ವರುಷವರುಷಕೆನಡೆವುದೀತೆರ । ವರಿಯಲಾಗುರುವರರಥೋತ್ಸವ ।
ಭರವುನೆರೆವುದುಜಾತ್ರೆರಂಜಿಸುತಿಹುದುಕಣ್ಮನಕೆ ॥
ಅರರೆದುರ್ಮಲಮನವುಧೌತಾಂ । ಬರದಪ್ರೋಲ್ಬಲುಬೆಳಗೆಹೃದಯದಿ ।
ಗುರುಸುಖದಸಂಭ್ರಮದೆಸಂಸಾರದಲಿಸೊಗಯಿಪರು ॥ ೬೦ ॥
ಪರಿಶೆಯದುಬೈಲಾದಬಳಿಕಾ । ಗುರುಫಕೀರೇಶ್ವರನುತನ್ನಯ ।
ಪರಮಸಂಸ್ಥಾನದಲಿಮುಖ್ಯರಕಾರಭಾರವನು ॥
ಅರಿತುಕೊಂಡಾನಂದದಲಿಬಿಡ । ದುರೆಸುಧಾರಣೆಗೈವನೈಮುಂ ।
ದರಿಯಿರಾಶ್ರೀಸಿದ್ಧರಾಮೇಶ್ವರನಲೀಲೆಯನು ॥ ೬೧ ॥
ಜೋಕೆದುಷ್ಟರೆಗುರುವುನೋಳ್ಪನು । ಜೋಕೆಹೊರಗೊಳಗಿರ್ಪನಾತನು ।
ಜೋಕೆಬ್ರಹ್ಮಜ್ಯೋತಿತಾನವನಿರ್ಪನೆಲ್ಲೆಡೆಗೆ ॥
ಸಾಕುಸಾಕೀಜನದಸಂಗತಿ ಲೋಕದೊಳಗರವಿಲ್ಲವೆಂದೇ ।
ಲೋಕದೊಡೆಯನುಸ್ವಾಮಿಯಲಿನಿಂತೆಸೆವುತಾಡುವನು ॥ ೬೨ ॥
ಶರಧಿಮೇರೆಯನೊತ್ತಿಹರಿದಡೆ । ಬರಸಿಡಲ್ಗಳುಕವಿದುಸುರಿದಡೆ ।
ಗರಳಮಯಕೌಮುದಿಯನಾಂತೊಡೆಚಂದ್ರಮಂಡಲವು ।
ಹರಿಹರಾದ್ಯರನೆಳೆದುಜಗದಲಿ । ಪರಮಲೀಲಾಮೂರ್ತಿಯೆನಿಸಿಹ ।
ಗುರುಫಕೀರನುಪೊರೆವನಲ್ಲದೆಬಿಡನುಭಕ್ತರನು ॥ ೬೩ ॥
ಶಿವನನಂಬಿಗೆಯಿಲ್ಲಗಡವೂ । ಧವನನಂಬಿಗೆಯಿಲ್ಲಸರಸಿಜ ।
ಭವನನಂಬಿಗೆಯಿಲ್ಲದೇವಿಯನಂಬಿಗೇನಿಲ್ಲ ॥

ಅವಗಡಿಸಿದಾಪತ್ತಿನಲಿಮೊ । ನವರುಕೆಲವರುಬಾಹ್ಯದಲಿಗಡ ।
ಕವಲುಭಕ್ತಿಯತೋರ್ಪರಲ್ಲದೆನಂಬಿಗೇನಿಲ್ಲ ॥ ೬೪ ॥
ಪರಮಭಕ್ತರೆಕೇಳಿರಾಸ । ದ್ಗುರುವುಸ್ವಾಮಿಯುಮಠದೊಳೆಸೆಯುತೆ ।
ದರುಶನಾರ್ಥಕೆಬಂದಭಕ್ತರಗೊಲಿವುತಂದದಲಿ ॥
ಇರುತಿರಲ್‌ಗಡಮೂಲಪಾಪ್ಣನು । ಪರಮಕಾಲಜ್ಞಾನದಾಟದ ।
ಕುರುಹುದೋರಲ್ಕೆಬ್ಬಿಸಿದನಾಸ್ವಾಮಿಯನುಬಿಡದೆ ॥ ೬೫ ॥
ಗುರುಫಕೀರನುಸಿದ್ಧರಾಮೇ । ಶ್ವರನುಕುವಲಯಪಾವನಾರ್ಥಕೆ ।
ಹೊರಟುಮಠವನುಬಿಟ್ಟುಹಂದ್ರಾಳಕ್ಕೆಪಥವಿಡಿದ ॥
ಕರುಣದಿಂದೀಕ್ಷಿಸುತೆಬಹುಭ । ಕ್ತರಪುರಾಕೃತಪಾಪಮಂಬಿಡ ।
ದೋಂಸಿಡಂಬಳದೆಡೆಗೆನಡೆದನುತೋರೆವುಚ್ಚಿಂಜೆ ॥ ೬೬ ॥
ಭವಹರನಗುರುವರನನಿಜಪಾ । ದವನುತಾಂಕಂಡೆರಗಿಡಂಬಳ ।
ದವನುಶಿವರುದ್ರಪ್ಪನಾಸದ್ಭಕ್ತನೆಂಬವನು ॥
ಶಿವಸಮಾನನೆಗುರವೆಬುದ್ಧಿಯೆ । ತವಚರಣದಲಿಬಿನ್ನದಯುಮೊ ।
ಡುವದುನಿಲ್ಲುವದೆಂದುಸಲೆಸಾಷ್ಟಾಂಗವೆರಗಿದನು ॥ ೬೭ ॥
ಕಾಕುಮತಿಗಳೆಕೇಳಿರಾತನು । ಲೋಕದೊಡೆಯಗೆಗುರುಫಕೀರನಿ ।
ಗೇಕಚಿತ್ತದೊಳೆರಗಿಮೊಡಲುಬಿನ್ನವಾಸ್ವಾಮಿ ॥
ಪಾಕಿದೊಡ್ಡಿತ್ತಲ್ಲಬಗೆದಡೆ । ಸಾಕದುಪರಾಮರಿಕೆದೊಡ್ಡದು ।
ಲೋಕಭಕ್ತನೆಮೊಡುನೀಬಿನ್ನಾಯಿಮೊಡೆಂದ ॥ ೬೮ ॥
ಬಹಳಹರ್ಷಿತನಾಗಿಭಕ್ತನು । ಬಹಳಸಾಹಿತ್ಯವನುಕೂಡಿಸಿ ।
ಬಹುವಿಧಾನದೊಳಡಿಗೆಮೊಡಿಸಿಶ್ರೀಫಕೀರನಿಗೆ ॥
ಬಹುವಿಧಾನದೆಗುರುವಪೂಜಿಸಿ । ಬಹಳವಿಧದಾನಂದಬಡಿಯಿಸೆ ।
ವಿಹಿತಭಕ್ತ್ಯೈಕಾಪ್ತಬಿನ್ನವತೀರಿಸಿದನವನಾ ॥ ೬೯ ॥
ಮರುದಿವಸಬೆಳಗಿನಲಿಭಕ್ತನು । ಭರದೆಬಂದೆರಗಿರಲುಸ್ವಾಮಿಯು ।
ಕರುಣದಿಂದಲೆಹರಸಿಹೊರಟನುಬಿಟ್ಟುಡಂಬಳವ ॥
ಸ್ಮರಿಸುತಗಲದೆಬರ್ಪಭಕ್ತನ । ಪರಿಯನರಿದಾಸ್ವಾಮಿಯಾತನ ।
ಕರೆದುಮನೆಗಪ್ಪಣೆಯನೀಯಲುಬಂದನವತಿರುಗಿ ॥ ೭೦ ॥

ಗುರುಫಕೀರೇಶ್ವರನಭಕ್ತರೆ । ಹರುಷದಿಂಶಿರಬಾಗಿಕೇಳಿರಿ ।
ಧರೆಯಕುಲಛಲಭಕ್ತರಾಟದಕಥೆಯುಬಂದಿಹುದು ॥
ಗುರುದಿಗಂಬರನಾಟವದುಗಡ । ಪರಮದೇವಿಯಮಾಟವದುಗಡ ।
ಕುರುಹುಕಾಲಜ್ಞಾನದಾಟವತಪ್ಪಿಸುವರಾರು ॥ ೭೧ ॥
ಅರಕೆತೋಂಟದಸ್ವಾಮಿಭಕ್ತರು ಕರೆದರಾತನಚೇಷ್ಟಗೈದರು ।
ಹರಹರಾಕುಲಗೆಟ್ಟಯಾನೀನಿಂತುನನ್ನವನು ॥
ಧರೆಯೊಳಾತಫಕೀರನೆನಿಪನು । ಬಿರುದುಮೆರಿಸುವನೆಲ್ಲವನುನೀ ।
ನರಿತರಿತುಗಡಬಿನ್ನವೊಳ್ಪರೆವುರುಳಿಭೀಯೆನುತಾ ॥ ೭೨ ॥
ವರಫಕೀರಗೆಬಿನ್ನವಾವುದು । ಕುರಿಯೆ ಕೋಳಿಯೆಪಾದಪೂಜೆಸಿ ।
ಕರುಣವಿಟ್ಟಿಸಿಭಿಕ್ಷೆಯನುನೀನಿತ್ತಿಯಾಮೂಢಾ ॥
ಹರಮತಕೆನೀಂಪೊರಗೆಸಾರೆಂ । ದೊರೆದತೋಂಟವಸ್ವಾಮಿಕಡೆಯವ ।
ರಿರದೆದಂಡವನಿತ್ತುಬಾರೊಳಗೆಂದರಾತನಿಗೆ ॥ ೭೩ ॥
ಹುಟ್ಟಜಂಗಮನೆನಿಸಗಾಂಮನ । ಮುಟ್ಟಭಕ್ತ್ಯಾಚಾರತೋರಿದ ।
ರೆಷ್ಟುತಪ್ಪಯ್ತಕಟದಂಡವಕೊಳ್ಳಿರೆಂದಿತ್ತ ॥
ಥಿಟ್ಟಶಿವರುದ್ರಪ್ಪನಾತ್ಮದಿ । ಕೆಟ್ಟೆದಂಡನಕೊಟ್ಟೆನಕಟಾ ।
ಸೃಷ್ಟಿಕರ್ತಂಗಿದನುತಿಳಿಸುವದೆಂದುಸಾಗಿದನು ॥ ೭೪ ॥
ಗುರುವಶಂಭುವಬಸವಲಿಂಗನ । ಶರಣಮೊಹೇಶ್ವರರನಗಲದೆ ।
ಸ್ಮರಿಸುತಂನಡೆದೊಳಗೆಸಾರಿದನಾತ್ಮಲಿಂಗನಿಗೆ॥
ಶರಣುಶರಣೆನ್ನುತ್ತೆಹೃದಯದೊಾ । ಳಿರಗಲಾಭಕ್ತಂಗೆಸದ್ಗುರು ।
ವರಫಕೀರೇಶ್ವರನುಕೇಳ್ದನುಬಂದಹರನವನು ॥ ೭೫ ॥
ಗುರುವೆಬುದ್ಧಿಯೆಹೇಳ್ವದೇನ್ನೆ । ಚರಣವಾಟವನಾನುಬಲ್ಲೆನೆ ।
ಕರೆದುತೋಂಟದಸ್ವಾಮಿಭಕ್ತರುಬಿಡನಲೆನ್ನಿಂದ ॥
ಜರಿದುದಂಡವಕೊಂಡರೆಂದಾ । ತೆರವನೆಲ್ಲವನರಿಕೆಗೈಯಲು ।
ಗುರುದಿಗಂಬರಸಹಿತಹೊರಟನುಸಿದ್ಧರಾಮೇಶ ॥ ೭೬ ॥
ಕುಲವನೀಕ್ಷಿಪೆನವರಛಲವನು । ಬಳಿಸಿಪರಿಕಿಪೆನವರಲೌಕಿಕ ।
ಕುಲಛಲವಭೇದಿಪೆನುಬಿಡೆನೆನ್ನುತ್ತಲಾಸ್ವಾಮಿ ॥

ಘಳಿಲನೇಡಂಬಳಕೆತಾಂಬಂ । ದಿಳಿದುಭಿಕ್ಷಾವೃತ್ತಿಯಿಂಸಂ ।
ಚಲಿಸಿದನುಗ್ರಾಮಸಲಿಸದ್ಗುರುಸಾಂಬಲೀಲೆಯಲಿ ॥ ೭೭ ॥
ವಲ್ಲಿಸಾಬೆಂಬಾಖ್ಯೆಯಲಿತಾ । ನೊಳ್ಳೆಭಕ್ತನುಬಂದುಗುರುವರ ।
ಗಲ್ಲಮಪ್ರಭುಗೆರಗಿತನ್ನಯಬಿನ್ನವೇಂದೊರೆದ ॥
ಅಲ್ಲಮಗನೀಬಿನ್ನಮೊಡಿಸು । ಸಲ್ಲಿಸೊಳ್ಳಿತುನಿನ್ನಭಕ್ತಿಯ ।
ನಿಲ್ಲಿತೋರಿಸುತೋರಿಸೆಂದನುಸಿದ್ಧರಾಮೇಶ ॥ ೭೮ ॥
ಕರೆದುಕೂಡಿಸಿಜಂಗಮರನಾ । ದರಿಸಿಶಿವಭಕ್ತರಲಿನಾನಾ ।
ತರದಸಾಹಿತ್ಯವನುಕೊಟ್ಟಡಿಗೆಯನುಮಾಡಿಸಿದಾ ॥
ಗುರುಪದಾಂಬುಜಪೂಜೆಗೈಯಿಸಿ । ಗುರುವಿಗತ್ಯಾನಂದಬಡೆಯಿಸಿ ।
ಗುರುವೆನೀಗತಿಯೆಂದುಭಕ್ತಿಯಮುಟ್ಟಿಸಿದನವನು ॥ ೭೯ ॥
ಪರಮಭಕ್ತನೆನಿನ್ನಬಿನ್ನವು । ಸರಸವಾಯ್ತಿದುಭಕ್ತಿರಸದಿಂ ।
ಭರಿತವಾಯ್ತುಫಕೀರಪಾಚ್ಛನುನಿನಗೆಕರುಣಿಸುವ ॥
ಅರಿತುಕೋಯೆಳೆಂದುಸದ್ಗುರು । ವರಫಕೀರನುಸಿದ್ಧರಾಮೇ ।
ಶ್ವರನುಹರುಷದೆಹರಸಿದನುಜನಕಾಗನಿಬ್ಬೆರಗು ॥ ೮೦ ॥
ಏನುಹೇಳಲಿಬಣ್ಣಿಸಲಿಮಿಗೆ । ಮೊನವರುಭಯಗೊಂಡುಭಕ್ತಿಯ ।
ನಾನಿರಂಜನಸಿದ್ಧರಾಮಗೆಸಲ್ಲಿಸಿದರಿರದೆ ॥
ಮೌನಪರಶಿವಕರ್ತನೊಂದಿಗೆ । ತಾನುಪರಸುತ್ತೆಲ್ಲರಿಗೆಸ ।
ನ್ಮಾನದಲಿಲಕ್ಕುಂಡಿಗೈದಿದನಾಫಕೀರೇಶ ॥ ೮೧ ॥
ಅಲ್ಲಿಬಹುಜನರೊಸೆದುನಿಷ್ಠೆಯೊ । ಳೊಳ್ಳಿತೆನೆನಯುಭಯದಭಾವದೊ ।
ಳಲ್ಲಮಪ್ರಭುಪಾದವೆಂದೇಬಾಗಿಭಕ್ತಿಯನು ॥
ಸಲ್ಲಿಸಿದರಾಗುರುಮಹಾತ್ಮಂ । ಗೆಲ್ಲರುಂಸಾಷ್ಟಾಂಗವೆರಗಿರ ।
ಲೆಲ್ಲರನುಸಲೆಹರಸಿಹೊರಟನುಶಿವವಿನೋದದಲಿ ॥ ೮೨ ॥
ಗುರುಫಕೀರನಭಕ್ತರೇಮುಂ । ಬರಿದುಬನ್ನಿರಿಕೇಳಿರೆಲ್ಲರು ।
ಗುರುಸುಲೀಲಾಸಾರವೇಳ್ವೆನುಮುಂದಿನಾಟವನು ॥
ಗುರುಫಕೀರೇಶ್ವರನುರಾಮೇ । ಶ್ವರನುಗಡನಾಗಾವಿಗ್ರಾಮಕೆ ।
ಚರಿಸಿಭಕ್ತಿಗೆಮೆಚ್ಚಿಬೆಳಧಡಿಗೈದಿದನುಬಳಿಕಾ ॥ ೮೩ ॥

ವರಶಿರಃಪುರಪಶ್ಚಿಮೊಳೆಯೊ । ಳಿರುವಬಾನಾಪುರದಭಕ್ತನು ।
ಚರಣಸೇವಾಸಕ್ತನಾಸೋಮಪ್ಪನೆಂಬವನು ॥
ದರುಶನಾರ್ಥಕೆಬಂದನಾತುರ । ವೆರಿಸಿಸಂಭ್ರಮದಿಂದಲಾಗುರು ।
ವರನಪಾದಾಂಭೋಜಕೆರಗಿದನತುಳಭಕ್ತಿಯಲಿ ॥ ೮೪ ॥
ಬೆಳಧಡಿಯೊಳಾಗುರುವುಭಕ್ತಿಯು । ಸಲಿಸಿದಾಸರ್ವರನುಹರಸಿದ ।
ನೊಳಗೆಕಂಡನುಶಿವನಮುಂದಣಕಾರ್ಯಭಾಗವನು ॥
ಭಲರೆಶಂಕರಕರ್ತನಿನ್ನಯ । ಸುಳವುಕಾಲಜ್ಞಾನದಾಟದ ।
ಹೊಳವುಕಡುಕುರುಹೆಂದುಹೊರಟನುಬಿಟ್ಟುಬೆಳಧಡಿಯಾ ॥ ೮೫ ॥
ಮುಂದೆಗಡಬೆಟಗೇರಿಗೈದಿದ । ನಂದಿಗಾಸದ್ಭಕ್ತರೆಲ್ಲರು ।
ಮುಂದರಿದುವೀರಪ್ಪನೆಂಬಾಸಪ್ಪನೆಂಬವರು ॥
ಬಂದುಗುರುಪಾದಕ್ಕೆಸಂಭ್ರಮ । ದಿಂದಲುತ್ಸವಗೈಯುತಂಪುರ ।
ಕಂದದಲಿಕರೆದೊಯ್ದು ಸೇವೆಗೆನಿಂತರೇವೇಳ್ವೆ ॥ ೮೬ ॥
ಪಗಲಿರುಳುಮೆನ್ನದಲೆಭಕ್ತರು । ಜಗದಸದ್ಗುರುಸಿದ್ಧರಾಮನ ।
ನಗಲದಲೆಬಹುಸೇವೆಗೈದರುಗ್ರಾಮದವರೆಲ್ಲ ॥
ಬಗೆದಡಾಬೆಟಗೇರಿಭಕ್ತರು । ಜಗದೊಳೆಣೆಯಿಲ್ಲೆನಿಸಿರಾಜಿಸು ।
ತೊಗುಮಿಗೆಯ-ಹರ್ಷದಲಿಭಿಕ್ಷಾರ್ಥವನುಸಲಿಸಿದರು ॥ ೮೭ ॥
ಅವರುಮಾಡಿದಸೇವೆಯನುಬಿಡ । ದವರುಮಾಡಿದಬಿನ್ನವನುತಾ ।
ವವರುಬಿಡದಲೆಮಾಡಿದುತ್ಸವವಿನ್ನುಗುರುಪದಕೆ ॥
ಅವರುನೀಡಿದಭಕ್ತಿಯನುಮೇ । ಣವರಸಂಘದನಿಷ್ಠೆಯನುತಾ ।
ನವನುಸದ್ಗುರುಬಲ್ಲನಲ್ಲದೆಬಣ್ಣಿಸಲ್ಕಳವೆ ॥ ೮೮ ॥
ಇಂತುಬೆಟಗೇರಿಯುಲಿಸದ್ಗುರು । ಶಾಂತನಾಸದ್ಭಕ್ತರಲಿತಾಂ ।
ನಿಂತುಗದಗಿನಭಕ್ತರಂದವನೀಕ್ಷಿಸುವನಾದ ॥
ಕಂತುಹರಶಿವಮಹಿಮೆಲೀಲೆಗ । ಳಿಂತೊತೋಟದಸ್ವಾಮಿಭಕ್ತರ ।
ಮಂತಣವುತಾನೆಂತೊನೋಡುವೆನೆಂದನಾಸ್ವಾಮಿ ॥ ೮೯ ॥
ನಾವುತೋಂಟದಸ್ವಾಮಿಭಕ್ತರು । ನಾವುಬಂದಫಕೀರಸ್ವಾಮಿಯು ।
ಸೇವೆಮಾಡುವರಲ್ಲಬಿನ್ನವಮಾಡುವವರಲ್ಲ ॥

ನಾವುಭಿಕ್ಷೆಯಕೊಡುವರಲ್ಲವು । ನಾವುದರ್ಶನಗೊಂಬರಲ್ಲವು ।
ನೀವುಬಲುಜೋಕೆಂದುಸೂಚನೆಯಾಯ್ತುಗದಗಿನಲಿ ॥ ॥ ೯೦ ॥
ಗದಗಿನಲಿಬಾಗಿಸದೆಕುಲಛಲ । ಹೃದಯಕಂಬೆಸೆಯದಲೆಭಕ್ತಿಯ ।
ನೊದವಿಸದೆಭಿಕ್ಷೆಯನುಕೈಕೊಳ್ಳದಲೆಬಿಡೆನೆನುತ ॥
ಸದಮಲಾತ್ಮನುಸಿದ್ಧರಾಮನು । ಮದನಹರನಲಿಕರ್ತನಲಿತಾ ।
ನೊದಗಿನಲಿದಾಡಿದನುಕೇಳಿರಿಸಕಲಲೌಕಿಕರೆ ॥ ೯೧ ॥
ಹೊಡಿನಗಾರಿಯಜಡಿನಿಶಾನಿಯ । ಕಡಿಕುಠಾರವಬಡಿಸುದಂಡವ ।
ಸುಡುಸುಡುರೆಕಡುಬಿಡದನೆನುತಿರೆಸಿದ್ಧರಾಮೇಶ ॥
ಅಡಗಿಗದ್ದುಗೆಗಿರುವಕರ್ತನು । ಪೊಡವಿಯುಲಿದಿನಬಂದವೆಂದೇ ।
ಬಿಡದೆಹೊಡಿದನೊಂದುಪಾಯವನಾತ್ಮಸೂತ್ರದಲಿ ॥ ೯೨ ॥
ಅರರೆಶ್ರೀಗುರುವೆಮೌನಕರ್ತನು । ಭರದಿಗದಗಿನೊಳಾಟಹೊಡಿದ ।
ಪರಿಯಪೇಳಲ್ಕಳವೆಕೆಲವರೊಳಾಯ್ತುಹಂಬಲವು ॥
ವರಫಕೀರನುಸ್ವಾಮಿತಾನೇ । ಕರುಣದಿಂಪ್ರತ್ಯಕ್ಷಬಂದಿರೆ ।
ದರುಶನಕೆಹೋಗದಲೆಕೆಟ್ಟೆವುಕೆಟ್ಟೆವಾವೆನುತ ॥ ೯೩ ॥
ಬರಲಿವಾಣಲಿಕುಂದುಕೊರತೆಗ । ಳೊರಸಿಗೆಲಿಸುವಗುರುಸಮರ್ಥನು ।
ಬರಲಿವೊಳ್ಪೆವುಬಿನ್ನವೆಂದಾಲೋಚಿಸಿದರವರು ॥
ತಿರುಗಿರಾತ್ರಿಯೊಳಾಪ್ತರಿಷ್ಟರ । ನೆಂಹಿದರುಶಾಬಾದಿಮಠದಾ ।
ಗುರುಗೆಸಮ್ಮತಬಡಿಸಿಕಳೆದರುರಾತ್ರಿಕಾಲವನು ॥ ೯೪ ॥
ಗುರುಮಹಾತ್ಮನವರಫಕೀರನ । ಚರಣದರ್ಶನಕೇಳಿರೆಂದೆ ।
ಚ್ಚರಿಕೆಗೊಟ್ಟನುಭಾನುವೆಂಬಂತೆಸೆಯೆ-ಹೊಂಬಿಸಿಲು ॥
ಕರೆವುತೊಬ್ಬರನೊಬ್ಬರೆಲ್ಲರು । ಹರುಷದಿಂದಲೆಕಾಯಿಕರ್ಪೂರ ।
ವಿರಿಸಿಕೊಂಡೈದಿದರುಬೆಟಗೇರಿಯಲಿಗುರುಪದಕೆ ॥ ೯೫ ॥
ಇಷ್ಟುದಿನವಾವ್ಹೆದರಿಬಿಟ್ಟೆವು । ಶ್ರೇಷ್ಠಸದ್ಗುರುಸಾಂಬಕರುಣಾ ।
ದೃಷ್ಟಿಯಿಟ್ಟೆಮ್ಮಲ್ಲಿಬಿನ್ನವುಬಿಜಯಮಾಡುವದು ॥
ದಿಟ್ಟರಾಗಿಹೆವಿನ್ನುಲೋಕದೊ । ಳೆಷ್ಟುಮಾತ್ರವುಭೀತಿಗೊಳ್ಳದೆ ।
ನಿಷ್ಠೆಯಲಿಗುರುಸೇವೆಗೈಯುವೆವೆಂದರಡಿಗೆರಗಿ ॥ ೯೬ ॥

ಅವರೊಳಗೆಕೊಟ್ರಪ್ಪನೆಂಬನ । ರವರೊಳಗೆಗದಿಗೆಪ್ಪನೆಂಬುವ ।
ರವರೊಳಗೆನಾಲ್ವಡನೂರಂದಪ್ಪನೆಂಬವರು ॥
ಅವರಿವರುವೀರಯ್ಯನವರುಂ । ಭನಹರಗೆಗುರುಸಿದ್ಧರಾಮಗೆ ।
ಶಿವಮಹೋತ್ಸವವೆಸಗುತ್ಮೈದಿದರೊಡನೆಗದಗಿನಲಿ ॥ ೯೭ ॥
ಕೆಲರುಭಕ್ತರುಮುಂದೆಸೈಯೆನೆ । ಕೆಲರುಭಕ್ತರುಹಿಂದೆಸೈಯೆನೆ ।
ಕೆಲವರೆಡಬಲಕಿರುವರೈಸೈಗುರುಸುಸೇವೆಯುಲಿ ॥
ಭಲರೆಬೆಟಗೇರಿಯೊಳಗಿರುವರು । ತಿಳಿದಭಕ್ತರುತಮಗೆಪೋಲುವ ।
ರಿಳೆಯೊಳಾರಿಲ್ಲೆನಿಸುತುತ್ಸವಗೈದರವರೊಡನೆ ॥ ೯೮ ॥
ಕೇರಿಕೇರಿಗೆಕಳಸಕನ್ನಡಿ । ಸಾಂವಸ್ತ್ರಾಭರಣತೋರಣ ।
ತೋರುತಿರೆಗುರುಸೇವೆಯುತ್ಸವವಾರ್ತೆಪಸರಿಸಲು ॥
ಹಾರಯಿಸಿನೆರೆದೂರಿನವರುಂ । ಸಾರೆಸುತ್ತಣಪಳ್ಳಿಯವರುಂ ।
ಸೇರೆಕ್ರಮದಿಂನಡೆವುದಾಯ್ತುಗುರುಪದೋತ್ಸವವು ॥ ೯೯ ॥
ಎಷ್ಟೊಕರಿತುರಗಗಳಸಂಭ್ರಮ । ವೆಷ್ಟೊಭೇರಿನಗಾರಿನಾದಗ ।
ಳೆಷ್ಟೊಕಾಳಿಗಳೆಷ್ಟೊಕರ್ಣೆಗಳೆಷ್ಟೊಸಡಗರವು ॥
ಎಷ್ಟೊತಮ್ಮಟವಾಸನಾದಿಗ । ಳೆಷ್ಟೊನಾನಾತರದಮೇಳಗ ।
ಳೆಷ್ಟೊಚಾಮರಛತ್ರಪಂಖಗಳೆಷ್ಟೊಬೆತ್ತಗಳು ॥ ೧೦೦ ॥
ಎಷ್ಟೊಬಟ್ಟಂಗಿಗಳಹೊಗಳಿಕೆ । ಯೆಷ್ಟೊಬಿರುದಾವಳಿಪಠಾಕುಗ ।
ಳೆಷ್ಟೊಪಾದೋತ್ಸವವುಗದಗಿನೊಳಾಯ್ತುಗುರುವರಗೆ ॥
ಎಷ್ಟೊವುದ್ದಿನಮೌಜಿನುತ್ಸವ । ವೆಷ್ಟೊಜಾಗ್ರತೆಯೆಷ್ಟೊಕಾವಲ ।
ದೆಷ್ಟೊತೇಜಃಪುಂಜದೀಪಗಳೆಷ್ಟುಹುಲುವರಿದು ॥ ೧೦೧ ॥
ಎಷ್ಟೊಪರಿಚಾರಕರುಕೆಲಬಲ । ಕೆಷ್ಟುಶಿಷ್ಯರೊಭಕ್ತಮಂಡಳಿ ।
ಯೆಷ್ಟೊವಿದ್ಯಾಧರರುಸದ್ಗುರುಪಾದಸೇವೆಯಲಿ ॥
ಎಷ್ಟೊಗ್ರಾಮಾಂತರದಜನಕುಲ । ವೆಷ್ಟೊಶಿವಗುರುಪಾದದರ್ಶನ ।
ಕೆಷ್ಟೊನೆರೆದುದೊಪರಿಶೆಯಂದದಿಪೇಳಲೇನಳವೆ ॥ ೧೦೨ ॥
ಬಂದಿಹರುಗಡರಾಜಪುರುಷರು । ಹೊಂದಿಹರುಗಡಸಾಧುಯೋಗಿಗ ।
ಳಂದದಲಿಗುರುಸೇವೆಗಂದಿನರಾತ್ರಿಕಾಲದಲಿ ॥

ನಿಂದುನೋಡಲ್ಕೆಂದುದೇವ । ವೃಂದವದುನಭದೆಡೆಗೆಸಾರ್ದಾ ।
ನಂದದಲಿಗುರುವರಗೆಪೂಮಳೆಗರೆದರಡಿಗಡಿಗೆ ॥ ೧೦೩ ॥
ಉರುತರದದೀವಟಿಗೆಬೆಳಕಿಗೆ । ಪರತರದದೀಪಗಳಬೆಳಕಿಗೆ ।
ತರತರದೊಳಬ್ಬರಿಪಮದ್ದಿನಬೆಳಕಿಗಾಯಿರುಳು ॥
ಗುರುಪದಾಂಬುಜಸೇವೆಗಾಭಾ । ಸ್ಕರನುಚಂದ್ರನುಸ್ನೇಹದಿಂಹೊಂ ।
ದಿರುವರೋಯೆಂಬಂತೆತೋರ್ದುದುಬಹುಪ್ರಕಾಶವದು ॥ ೧೦೪ ॥
ಜನವಿಳಾಸದಘೋಷದೇಳ್ಗೆಗೆ । ಘನತಳದವಾದ್ಯಾಳಿರಭಸಕೆ ।
ಚಿನುಮಯೋತ್ಸವಭರಕೆಕಿವಿಗಡಚಿಕ್ಕಿದವುಭಲರೆ ॥
ಘನಫಕೀರಗೆನಿಜಮಹತ್ವಗೆ । ನೆನೆವಸೇವಿಪಭಕ್ತಜನರಿಗೆ ।
ಘನತೆಹೆಚ್ಚಲಿಸೌಖ್ಯವೆನಿಸಲಿಬಾಳ್ವೆಯಡಿಗಡಿಗೆ ॥ ೧೦೫ ॥
ಅರರೆನಾರಾಯಣನುತ್ರಿಕುಟೇ । ಶ್ವರನುಮಿಗೆನಲಿದಾಡಿದರುಗುರು ।
ವರನಿಗಾದುತ್ಸವಕೆಬಹಳಾನಂದಲಹರಿಯಲಿ ॥
ಮೆರೆವಗದಗಿನೊಳಾದಶ್ರೀಗುರು । ವರಮಹೋತ್ಸವಕೈದೆನಾನಾ ।
ತರದೊಳಾಗಿರ್ಪನ್ನಶಾಂತಿಗೆಗ್ರಾಮದಧಿದೈವ ॥ ೧೦೬ ॥
ದುರುಗೆಯುಡಚಿಯುಚೌಡಿಯೆನಿಸು । ತ್ತಿರುವಶ್ರೀಪರದೇವಿತನ್ನೊಳ ।
ಹೊರಗೆಕಂಡಾತ್ಮದಲಿನುತಿಸಿದಳಾಪರಾತ್ಪರನ ॥
ಅರಿಯಲಾತ್ಮಾರಾಮಸದ್ಗುರು । ಗುರುಗಳಲಿಗಡಕರ್ತವೌನೇ ।
ಶ್ವರನುಸೈನೆನೆದಲ್ಲಿಬೆಳಗುವೆನೆಂದಳಾದೇವಿ ॥ ೧೦೭ ॥
ದರುಶನಾರ್ಥಕ್ಕೆಸ-ಜನವ್ರೋ । ನೆರೆದುದೇಸೋಮನೆಯವೊಳಿಗೆ ।
ಗಿರದೆಸಂದಣಿಸಿರ್ಪುದೇಸೋಜಂಗುಳಿಯದೈವ ॥
ಸಿರಿಯುಸಡಗರವೇಸೊಶ್ರೀಗುರು । ವರನಪದಪದ್ಮವನುಕಾಂಬಾ ।
ತುರವದೇಸೋಪೇಳಲೇನಾಗುರುವಿನುತ್ಸವವ ॥ ೧೦೮ ॥
ಬಹಳಕಾಳಗಳೊದರುತಿರುವವು । ಬಹಳವಾದ್ಯಗಳಾಗುತಿರುವವು ।
ಬಹುಚಮತ್ಕೃತಿಮೇಳಗಳುತಲೆದೋರುತಿಹವಮಮ ॥
ಮಹಿಗೆಮಂಗಲವೆನಿಸುತುತ್ಸವ । ಬಹಳಸಡಗರದಿಂದನಡೆದುದು ।
ಮಹಿತಮಹಿಮಗೆವಾಸವೆನಿಸಿತುದಿವ್ಯಗುರುಮಠವು ॥ ೧೦೯ ॥

ಇದ್ದಭ್ರಾಂತಿಯದೆಲ್ಲಹೋದ । ತ್ರಿದ್ದನ ಭಲವೆಲ್ಲಬೈಲಾ ।
ಯ್ತಿದ್ದಪಾಪವುಕಾಡುಹೊಕ್ಕಿತುಗುರುವಿಗಂಜುತಲಿ ॥
ಬುದ್ಧಿನಿರ್ಮಲವಾಯ್ತುಮನವದು । ಶ್ರದ್ಧೆಹೊಂದಿತುಭಕ್ತಜನರಲಿ ।
ಶಿದ್ಧವಾಟಾಯ್ತರರೆಶ್ರೀಗುರುಲೀಲೆಗೇನೆಂಬೆ ॥ ೧೧೦ ॥
ಗುರುವೆಗುರುವೇಗುರುವೆಗತಿಯೆನು । ತಿರುವಜನರಾನಂದಶಬ್ದದೆ ।
ಸರಸವಹಸಂಗೀತನಾದದೆತುಂಬಿಹೊರಸೂಸಿ ॥
ಗುರುವಿನುತ್ಸವದೊಡನೆಹರಯಿತೊ । ಮೆರೆವಗದಗನಭಕ್ತಿನದಿಯೆನೆ ।
ಧರೆಯೊಳೆಣ್ದೆಸೆಗಾಯ್ತುಕೀರ್ತಿಸುವಾರ್ತೆಪಸರಿಸಿತು ॥ ೧೧೧ ॥
ಸದಮಲಾತ್ಮನಗುರುಫಕೀರನ । ಪದಕೆನೂರಂದಪ್ಪಬಿನ್ನಹ ।
ಮೊದಲುಮೂಡಿದನತುಳಭಕ್ತಿಸ್ಫುರಣಭಾವದಲಿ ॥
ತದನುಗುಣರೆನೆಸಕಲಭಕ್ತರು । ಮುದದೊಳಾಗುರುಪಾದದಲಿವೂ ।
ಡಿದರುಬಿನ್ನಹವನ್ನುಸೈಸೈಯೆನಿಸುತುತ್ಸವದೆ ॥ ೧೧೨ ॥
ಗದಗಿನುತ್ಸವವೆನಿತೊಗುರುವಿಗೆ । ಮುದದಬಿನ್ನಹವೆನಿತೊಗುರುಪದ ।
ಗೊಡವಿದಾಭಿಕ್ಷಾರ್ಥಮೆನಿತೋಪೇಳಲೇನದನು ॥
ಕದನಕರ್ಕಶಬ್ದವಾಗದ । ಹದವದಾಗಿಸಿರಂಜಕೀಯರು ।
ಪದೆದುನಿಂತೇಸೇವಗೈದರುಗುರುಪದಾಂಬುಜಕೆ ॥ ೧೧೩ ॥
ಎಲ್ಲರಿಗೆಸರಿಯೆನಿಸುತಂದದೊ । ಳೆಲ್ಲನಿಮ್ಮಂದೆಂದುಮನ್ನಿಸು ।
ತಲ್ಲಮುಪ್ರಭುಬಿಡದಲಾಶೀರ್ವಾದವೂಡುತಲಿ ॥
ಇಲ್ಲಿಹೋದವುಬಹಳದಿವಸಗ । ಳಲ್ಲಿಗಾಮಠದೆಡೆಗೆಚರಿಸುವ ।
ಬೆಲ್ಲರಪ್ಪಣೆಕೊಡಿರಿನೀವಿನ್ನೆಂದನಾಸ್ವಾಮಿ ॥ ೧೧೪ ॥
ಗುರುವಿನಾನಂದಕ್ಕೆಸಮ್ಮತ । ವೆರಸಿಸಕಲ್ಯೆಸಿರಿಯುಸಡಗರ ।
ವಿರಿಸಿಸಂಭ್ರಮದಿಂದಲುತ್ಸವಗೈಯಲಾಸ್ವಾಮಿ ॥
ಭರದಿಬಿಜಯಂಗೈಯ್ದುತಾನಾ । ವರಶಿರಃಪುರಮಠಕೆಸದರಿಗೆ ।
ಪರಮಹಂಸಂಬೋಲುಶೋಭಿಪನಾದನಾಗುರುವು ॥ ೧೧೫ ॥
ಸರಸವಿದ್ವಜ್ಜನರೆಕೇಳಿರಿ । ಗುರುಫಕೀರನುಮಠಕೆಬಂದಿರೆ ।
ಪರಮಕರ್ತನುಕುರುಹಿನಾಟಕೆಬೇಟವೆಸಗಿದನು ॥

ಗುರುವುನಮ್ಮವನೆಂಬಭಾವದೊ ಳಿರಡುಮತಗಳುಪುಟ್ಟವುತ್ಸರ ।
ವೆರೆದುದಾಗದಗಿನಲಿಬೆಟಗೇರಿಯಲಿಭಕ್ತರಲಿ ॥ ೧೧೬ ॥
ಅರರೆತೋಂಟದಸ್ವಾಮಿಪಕ್ಷವು । ಗುರುಫಕೀರೇಶ್ವರನಪಕ್ಷವು ।
ಧರೆಯೊಳೀಪರಿಯೆನಿಸಿನಡೆದವುಕಾರ್ಯ್ಯವೊಳಹೊರಗೆ ॥
ಗುರುಮಹಾತ್ಮನವರಫಕೀರನ । ಚರಣವೇಗತಿಯೆಂಬಭಕ್ತರು ।
ವ ಶಿರಃಪುರವುತಕೆಬಂದರುಬಿಡದಲೊಮ್ಮನದೆ ॥ ೧೧೭ ॥
ಥಲದೆಪಾದವುಬರಲಿಗದಗಿಗೆ । ಸ್ಥಳವಹುಟ್ಟಲಿಧ್ವಜವುನಿಲ್ಲಲಿ
ಪೊಳೆದುಕಟ್ಟಲಿಮಠವುಮಹಿಮಾಸ್ಥಾನವೆನಿಸಿರಲಿ ॥
ಇಳೆಯೊಳಾವ್ಶಿವಥಲದಭಕ್ತರು । ಬಳಗದೊಂದಿಗೆಸೇವೆಗೈಯುವೆ ।
ವೊಲುಮೆಯಿಂದುದ್ಧರವಮೂಡುವದೆಂದುಕೈಮುಗಿಯೆ ॥ ೧೧೮ ॥
ಬಳಗೆಕಂಡಾಸಿದ್ಧರಾಮುನು । ಸುಳಿದುಗದ್ದುಗೆಗೆರಗಿಭಕ್ತರ ।
ಬಳಗದೊಂದಿಗೆಮತ್ತೆಬಿಜಯಂಗೈದನಲಸದಲೆ ॥
ಅಲಲಗದಗಿನದಕ್ಷಿಣಾಶೆಗೆ । ಲಲಿತನಾಗಸ್ಥಾನವೆಂದೆನೆ ।
ಬಳಸಿಪುಟ್ಟುವದಾಯ್ತುಮಠನದುಕುರುಹಿನಾಟದಲಿ ॥ ೧೧೯ ॥
ಗುರುವಿನಾಜ್ಞೆಗೆನಿಂತುಸದ್ಗುರು । ವ ಫಕೀರನುತಾರತಮ್ಯನ ।
ನಿರಿಸಿಭಿಕ್ಷಾಟನೆಗೆಹೊರಟನುಬಿರುದುಮೆರೆಸುತಲಿ ॥
ಚರಿಸುತೆಡಬಲಕೆಸೆವಹಳ್ಳಿಯೊ । ಳಿರುವಭಕ್ತರನಿಷ್ಠೆಗೋಲಿವುತೆ ।
ನೆರೆನಿರೀಕ್ಷಿಸತಿಳಿಸಿದನುಹುಬ್ಬಳ್ಳಿಯುಂದವನು ॥ ೧೨೦ ॥
ಪರಮಶಕ್ತಿಯಭಕ್ತರೆನಿಪರೆ । ಗುರುಫಕೀರನಮುಂದಿನಾಟದ ।
ಪರಿಯನಾಲಿಸಿಯ್ಯನಿಮುಗನುಭವವುಸಿದ್ಧಾಂತ ॥
ಶರಣರಂಬೆಯಲೀಲೆಯುಲಿಬಹು । ತರದಭೀಕರರಾಕ್ಷಸರಸಂ ।
ಹರಣವಾಯ್ತೆನೆನರರಪಾಡಿನ್ನೇನುಲೋಕದಲಿ ॥ ೧೨೧ ॥
ಗುಣಗಳೈಸಿರಿಶಿಷ್ಯರೈಸಿರಿ । ಧನೆಯುಭಕ್ತರಬಮುಕಿನೈಸಿರಿ ।
ಪರಿಪರಿಯುವ್ಯವಹಾರದೈಸಿರಿಯಿರದೆಸಂಗ್ರಹಿಸಿ ॥
ಮೆರೆಯುವದುಹುಬ್ಬಳ್ಳಿಗಡಭಾ । ಸುರತರೋನ್ನತರಾಜಕೀಯರ ।
ಪರಮವೈಭವದಿಂದೆಶೋಭಿಪುದೇನುಬಣ್ಣಿಪುದು ॥ ೧೨೨ ॥

ವರಕುಮಾರೇಶ್ವರನಮಠವದು । ಮೆರೆವುದಾಹುಬ್ಬಳ್ಳಿಯಲಿಗಡ ।
ಸಿರಿವೆರೆದುಶೋಭಿಪುದುಗುರುಸಿದ್ಧಪ್ಪನುರುಮಠವು ॥
ಎರಡುಮಠದಧಿಕಾರಿಗಳುಶ್ರೀ । ಗುರುಗಳೆನ್ನಿಸಿಶೈವಮಠಕಾ ।
ಚರಿಸುತಿರುವರುಭವ್ಯಲೌಕಿಕವಾರಮಾರ್ಥದಲಿ ॥ ೧೨೩ ॥
ಗುರುಸುಭಕ್ತರೆಕೇಳಿರೈಸಲೆ । ವರಫಕೀರೇಶ್ವರನಲೀಲೆಯು ।
ತೆರನತಿಳಯಿರಿಲೋಕದಲಿಸಂಚಾರವಾಡುತಲಿ ॥
ಗುರುಫಕೀರನುಸಿದ್ಧರಾಮೇ । ಶ್ವರನುಗಡಹುಬ್ಬಳ್ಳಿಕಡೆಗೆನೆ ।
ಚರಿಸಿದನುತಿಳಿಸಿದನುತಾನ್ಮೆತಂದುದೊಸಗೆಯನು ॥ ೧೨೪ ॥
ಬಿಡದಲಾಶೀರ್ವಾದಪತ್ರವ । ನೊಡನೆಕಳಿಸಿರಲಾತ್ಮಸೇವಕ ।
ರೆಡೆಗೆಮುಟ್ಟಸೆಸುಮ್ಮನಿರ್ದುದುಮುಖ್ಯಮಂಡಳಿಯು ॥
ಮೃಡಮಹಾತ್ಮನುಗುರುಫಕೀರನು । ದೃಢಸುಭಕ್ತಿಯನೋಡಲೆಂದಡಿ ।
ಗಡಿಗೆಚರಂನುಕಳಿಸಿಜಯಭೇರಿಯನುಹೊಡಿಸಿದನು ॥ ೧೨೫ ॥
ಅಡಬಡಿಸಿಬಂದತ್ತುಜನವದು ಗಡಬಡಿಸಿಸಾಂಭವೆಸಗಿತು ।
ಮೃಡಮಹೋತ್ಸವಕೆಂದುಕಾಡಿತುಸಿಖಿಳಜನನಿಕರ ॥
ಬಿಡದಲಾಶೀರ್ವಾದನುಂಮಿಗೆ । ಪಡೆದುಸಂಭ್ರಮದಿಂದಲುತ್ಸವ ।
ನಡಿಸೆಬಿಜಯಂಗೈದಗುರುರುದ್ರಾಕ್ಷಿಮಠದೆಡೆಗೆ ॥ ೧೨೬ ॥
ಆದುದಾನಂದದಲಿಭಿಕ್ಷೆಯು । ಸಾಧುಸಜ್ಜನಭಕ್ತಜನರಿಗೆ ।
ವೋದವಮುಣ್ಮಿತುಮೇಣುಬಡಜನಕಾಯ್ತುಗುರುಕೃಪೆಯು ॥
ಗಾದಬಿದ್ದುದುಕೆಲವರಿಗೆಗುರು । ಪಾದಲೀಲೆಯುತಿಳಿಯದಾದುದು ।
ವಾದಿಭೇದಿಗಳೆಲ್ಲಬಾಗಿದರಾಮಹಾತ್ಮನಿಗೆ ॥ ೧೨೭ ॥
ದುರಿತದಲಿಸುಳಿದಾಡಿಲೌಕಿಕ । ಸಿರಿಗೆಮೋಹಿಸಿಜನಕೆಮೆಚ್ಚಿಸೆ ।
ಕರಣಸಂತತಿನೀತಿಯಲ್ಲವುನುರವಿಮನುಜರದು ॥
ಗುರುಪದಕೆಮುಂಗೈದಪೂಜೆಶೋ । ತ್ತರಸುಪುಣ್ಯದಬಲದೆಪದವಿಯು ।
ದೊರಿತರೇಂಹಳೆಬ ತ್ತಿಯೆಂದನುಗುರುಫಕೀರೇಶ ॥ ೧೨೮ ॥
ಹರಿಯಲೀಲಾನಂದದಲಿಶಂ । ಕರನಮಹಿಮಾತಿಶಯದಲಿಗುರು ।
ವರನಕರ್ತನಸೂತ್ರಮಾತ್ರದೆತೋರುತಾಡುತಲಿ ॥

ವರದಸದ್ಗುರುವೆನಿಸಿದೇಶಾಂ । ತರದತೀರ್ಥಪ್ರಸರವೇನಿಜ ।
ಚರಣಸನ್ನಿಧಿಯೆನಿಸಿಬೆಳಗಿದನಾನಿರಂಜನನು ॥ ೧೨೯ ॥
ಆಗದವರಿಗೆಬಾರದವರಿಗೆ , ಬಾಗದವರಿಗೆನೀಡದವರಿಗೆ ।
ಶಾಗುಣದಕುಲಛಲರಿಗೆಲ್ಲರಿಗಾಫಕೀರೇಶ ॥
ಶ್ರೀಗುರೂನ್ನತಸಿದ್ಧರಾಮನು । ಬಾಗಿಸುತೆಕಡುಬಿರುದುಮೆರೆಯಿಸು ।
ಶಾಗಳುಂದೇಶದಲಿರಂಜಿಪನಾದನಡಿಗಡಿಗೆ ॥ ೧೩೦ ॥
ಲೀಲೆಯಲಿದಿಗ್ವಿಜಯದಲಿಲೋ । ಕಾಳಿಯಲ್ಲಿಘನಮಹಿಮೆಯಲಿಭ ।
ಕ್ತಾಳಿಯಲಿನಿಜಕರುಣದಲಿಜಸವೆತ್ತುಶ್ರೀಗುರುವು ॥
ಪಿಲಯಿಪಸೇವಕರಭಕ್ತರ । ಜಾಲವಲಿಗಜತುರಗವಾದ್ಯದ ।
ಮೇಳದಲಿನಿಜಮಠಕೆಬಿಜಯಂಗೈದನಂದದಲಿ ॥ ೧೩೧ ॥
ವರಶಿರಃಪುರದೈವದವರಾ । ಪರಮಭಕ್ತರುಸೇವಕರುಸ ।
ದ್ಗುರುವಿನಂಘ್ರಿಗೆಸಾರಿಸಲೆಸಾಷ್ಟಾಂಗವೆ ಗಿದರು ॥
ಹರಸಿಸರ್ವರಿಗೆಲ್ಲವರುಹಿಸಿ । ಹರುಷಬಡಿಸಿದನಾನಿರಂಜನ ।
ಗುರುಫಕೀರೇಶ್ವರನುಭಕ್ತರಬಂಧುಬಹುಕರುಣಿ ॥ ೧೩೨ ॥
ಹಿಂದೆಬಂದವನಿಂದಿಗಿಲ್ಲೆಂ । ತೆಂದುನುಡಿಯಲಿಕಾಗದೆಂದಿಗು ।
ಸಂದಿಗವುನಿಮಗೇಕೊಯೆಂಬವುಮೌನವಚನಗಳು ॥
ಮಂದಿಕಾಣ್ಪಪ್ಪಂದದಲಿತಾ । ನಿಂದುಹುತ್ತಿನೊಳಡಗಿಗದ್ದುಗೆ ।
ಹೊಂದಿಹನುಮುದಿಪಾಚ್ಛನೀಧರೆಯಾಟನೆಸೇಡುವನು ॥ ೧೩೩ ॥
ಎರಡುದಿವಸದವಸ್ತಿಕಾರರೆ । ಭರದೆನೆರೆದುರೆಬೈಲದೆನಿಸು ।
ತ್ತಿರುವಕಲಿಯುಗಸಂತೆಗಿರುವರೆನೋಡಿರೆಳಹೊಗೆ ॥
ಗುರುಕಥಾಮೃತಕೆರಗಿಶಿವಸುಖ । ವೆರೆದುಸಂಸಾರದಲಿಸೊಗಯಿಸಿ ।
ಗುರುವನಗಲದೆಪಡೆಮಕೊಳ್ಳಿರಿನಿತ್ಯಸೌಖ್ಯವನು ॥ ೧೩೪ ॥
ಕೇಳಿರೇಳನೆಪಟ್ಟವಿದುಗಡ । ಹೇಳಿಹನುಪ್ರಭುರಾಯಸೂಚನೆ ।
ಯೇಳನೆಪಟ್ಟಕ್ಕೆಲಟಪಟ್ಟೆಂದುಸಾರಿಹನು ॥
ಕೇಳಿರೆಂಟನೆಪಟ್ಟಕಾನೇ । ಲೀಲೆಯಾಡುತೆಬರ್ಪನೆಂದೇ ।
ಹೇಳಿಹನುಮುದಿಪಾಚ್ಛನಾಟವನರಿವರವರಾರು ॥ ೧೩೫ ॥

ಮರವಿಯೂಟವುಲಟ್ಟಪಟ್ಟವ । ದರವಿನಾಟವ್ರಘಟ್ಟಮುಟ್ಟಯು ।
ಹರನಮುಂಡಿಗೆಯರ್ಥವರಿವವರಾರುಲೋಕದಲಿ ॥
ಶರಣರಾಟವುಶಾಂಬನಾಟವ । ದರಿಯುಲೊಳಗದುಶಿವನಪಟ್ಟವು ।
ಬರುವಸಂಧಿಗೆಬೈಲಿಗಂಗಡಿಯೆಂದುಹೇಳಿಹನು ॥ ೧೩೬ ॥
ಆರುಬಲ್ಲರುಪ್ರಭುವಿನಾಟವ । ನಾರುಹೇಳ್ವರುಗುರುವಿನಾಟವ ।
ನಾರುತಿಳಿವರುಶರಣರಾಟವನೀಜಗತ್ತಿನಲಿ ॥
ಧಾರುಣಿಗೆಗುಪ್ತದಲಿಮೂಯಾ । ಕಾರದಲಿಕಿಡಿಗೇಡಿತನದಲಿ ।
ತೋರುವರುಸಿಗದಾಡಿಹೋಗುವರೆಂದನಾಪಾಚ್ಛಾ ॥ ೧೩೭ ॥
ಪಿಂತೆಶ್ರೀಬಸವಾದಿಶರಣರು । ನಿಂತುಕಲ್ಯಾಣದಲಿಮಿಗೆಪೇ ।
ಳ್ದಂತೆಸರ್ವರುಬಂದುಕಾರಣಕಾರ್ಯವೆಸಗುವರು ॥
ಅಂತುಮಿಂತುಂದಿವ್ಯದಿನವೂ । ನಾಂತದಲಿನಿಶ್ಚಯವುಬರ್ಪುದು ।
ಶಾಂತಸದ್ಗುರುಬಲ್ಲತಿಳಿಯುವದಲ್ಲಶಿವಗಣಿತ ॥ ೧೩೮ ॥
ಗುರುಫಕೀರೇಶ್ವರನಮೌನೇ । ಶ್ವರನಲೀಲಾಮಹಿಮೆಲೋಕದೊ ।
ಳರಿದುಬಗೆವಡೆಗುಪ್ತಮಹಿಮೊಪುರುಷರವರಿಳೆಗೆ ॥
ಪರಮಕಾಲಜ್ಞಾನದಾಟದ । ಕುರುಹುಶಿವಕೊರವಂಜಿಸಾರಿದ ।
ಸರಸಸೂಚನೆತಿಳಿದುಕೊಳ್ಳಿರಿಭಕ್ತರೆಂಬವರು ॥೧೩೯॥
ಅರರೆಶಿವಕೊರವಂಜಿಪೇಳದ । ಪರಮಕಾಲಜ್ಞಾನದಂತಿರೆ ।
ಧರಣಿಯಲಿನೀವ್ಕಂಡುನಂಬಿರಿಪ್ರಮಥರುಕ್ತಿಯನು ॥
ಮೆರೆವತೀರ್ಥಕ್ಷೇತ್ರದಲಿಗಡ । ಗುರುಗಳೆನಿಪ ರತಾಣದಲಿಕಡು ।
ಕುರುಹುಗಳುಕಂಗೊಳಿಸುತಿರುವವುಕಾಲಸೂಚನೆಗೆ ॥ ೧೪೦ ॥
ಬಲುಭಯಂಕರಕಾಲಬರುವದು । ಮಹಿಯೊಳಡಗಿಹರೆಲ್ಲಶರಣರು ।
ಕುಹಕಡಾಂಭಿಕರೇಳ್ಗೆಮೆರೆವುದುಲೋಕದೊಳಗಕಟ ॥
ವಿಹಿತಚರಿತರುಮೂಲೆಹಿಡಿಯುವ । ರಹಿತಕಾರ್ಯವುನಡೆವುದೆಲ್ಲಿಯು ।
ಮಹಿಮರೆಲ್ಲರುಮುಂದೆಬಂದಪರೆಂಬುದಾವಚನಾ ॥ ೧೪೧ ॥
ಕಸವತೆಗೆದುರಿಹಸನುಗೈಯಲಿ । ಕೆಸೆವಶ್ರೀಪರದೇವಿಗಗಲದೆ ।
ಬೆಸಸಿಹನುಗುರುಮೌನಪಾಚ್ಛನುಕರ್ತನೊಡಗೂಡಿ ॥

ಬಸವಚನ್ನನುಬಂದಕಾಲಕೆ । ರಸೆಯೊಳೆಲ್ಲೆಡೆಯಲ್ಲಿಸ್ವಚ್ಛವು ।
ಮಿಸುಪಮಂಗಳಕಾರ್ಯದುತ್ಸವವೆಂಬುದೈವಚನಾ ॥ ೧೪೨ ॥
ಎಂದುಕಾಲಜ್ಞಾನವುಸುರುವ । ರಂದದಲಿಶಿವಲಾಂಛನರುನಯ ।
ದಿಂದೆಸಾರುತ್ತಿಹರುಗುರುಹಿರಿಯರ್ಕಳೆಂಬವರು ॥
ಎಂದುಬರುವವೊದಿವಸಗಳುತಾ । ವೆಂದುಬರುವರೊಮೃಡನಕಡೆಯವ ।
ರೆಂದುಚಿಂತನೆಗೈವರ್ಯೆನಿಜಭಕ್ತರೆಂಬವರು ॥ ೧೪೩ ॥
ಚರಿಸಿತೀರ್ಥಕ್ಷೇತ್ರದಲಿತ । ತ್ಪುರದಧೀಶ್ವರದೇವರಿಂದಲೆ ।
ನರರುಕಾಣುವವೋಲೆಕೆಲಸಂಗೈಸಿಪ್ರಭುವೆನಿಸಿ ॥
ವರವಿಲಿಂಗನಬಂಡಿತಿಂಥಣಿ । ಪುರಗಳಲಿತಾನಿರುತೆಮೆರೆವುತೆ ।
ಸ್ಥಿರವೆನಿಸುತಡಗಿಹನುಮೌನನುಲೀಲೆಯೇವೇಳ್ವೆ ॥ ೧೪೪ ॥
ಅಲ್ಲಿರುವನುಡಿಗಳನುಲೋಕದೊ । ಳಿಲ್ಲಿಹೇಳುವವಲ್ಲಬಲ್ಲವ ।
ರೆಲ್ಲಬಲ್ಲರುಬರ್ಪನಲ್ಲಮರಾಯನೆನ್ನುವರು ॥
ಅಲ್ಲಿಹನೊಕ್ಕೈಲಾಸದಲಿತಾ । ನಿಲ್ಲಿಹನೊಭೂಲೋಕದಲಿನಿಜ ।
ವೆಲ್ಲಹೇಳುವರಾರುಬಲ್ಲವರೇಕೆತಿಳಿಸುವರು ॥ ೧೪೫ ॥
ಅವರುಹೇಳುವದೇನುಲೋಕದೊ । ಳಿವರುಕೇಳುವದೇನುಬೇಡದು ।
ಬುವಿಗೆಬೈಲಿಗೆಬಿಚ್ಚಿಹೇಳಿಹನೆಲ್ಲಶಿವಮೌನಾ॥
ಅವಗಡಿಸಿದೀಕುಲದಹ್ಯಾವದ । ಹವಣುಬಲಿಯದುಬಿಡದುಮಿಗೆವೊ ।
ನೆವರಿಗೆಂತದುಕಾಂಬುದೈಬಹುಮೊಯದಾಟವದು ॥ ೧೪೬
ಪಾಪವೆಲ್ಲವುಪೋಗಿಪದಪಿನ । ಸೈಪಿನೊಗತನವೆಸೆವುದಾಸಂ ।
ತಾಪದೀಭೂದೇವಿಸಂತಸವಾಗುವಂದದಲಿ ॥
ಆಪುರಾರಿಮುರಾರಿಗಳನಿಜ । ರೂಪತೇಜೋನ್ವಿತರುಮೇಳದೊ ।
ಳೀಪೊಡವಿಗಿಳದಪರುತಿಳಿಯಿರಿಯೆಂಬುದೈವಚನ ॥ ೧೪೭ ॥
ಕಾಲಕರ್ಮಾತೀತಕರ್ತನು । ಕಾಲಸೂಚನೆಗಾಗಿಮೊದಲೊಳು ।
ಪೇಳಿದಂತಿಯೆನಡೆಯುತಿರುವದುಪೂಜ್ಯರೆಡೆಗಳಲಿ ॥
ಹೇಳಲೇನಾಗುರುಮಹಾತ್ಮನ । ಲೀಲೆಯದ್ಭುತಮಲ್ತೆಭೂತದ ।
ಯಾಳುವಾತನುತಿದ್ದುತಿರುವನುತನ್ನಬಳಗವನು ॥ ೧೪೮ ॥

ದೇವಿಕೋಪವ್ರೊಸಿಡಿಲುವ್ರೊಯ್ದಡೆ । ಕಾವ್ರಸೊಂಕಿತೊಕಾಡಬೇಗೆಯು ।
ದಾವರಿಸಿದುದೊಕಾಲಗತಿಯೆಂಬಂತೆಲೋಕದಲಿ ॥
ಭಾವಿಸಲ್ಕರಿದೆನಿಸಿದುಷ್ಟಜ । ನಾವಳಿಗೆಸಂಹರಿಸಿಶಂಕರ ।
ದೇವದೇವನುಬರುವನೆಂಬುದುಮೌನವಚನಾರ್ಥಾ ॥ ೧೪೯ ॥
ಜವನಜನಕನವ್ರೋಲುಲಯಭೈ । ರವನಬಂಧುವಿನಂತೆಪ್ರಳಯದ ।
ಶಿವನಮಿತ್ರಂಬೋಲುಮೇಣ್ಸಂವರ್ತಮೃತ್ಯುವದು ॥
ಅವತರಿಸಿದುದೊಯೆಂಬವ್ರೋಲ್ಗಡ । ಭುವನದಲಿವಾಸಿಸುವದುರ್ಜನ ।
ನಿವಹದಲಿತೋರುವದುಮುಂದಿನ್ನೆಂಬುದೈವಚನಾ ॥ ೧೫೦ ॥
ಪಿಂದೆಶ್ರೀಭಗವಾನ್ವಿಭುವುತಾ । ನಂದಿಗಾಗುರುಸಿದ್ಧರಾಮಂ ।
ಗೆಂದುಪೇಳಿರಲದನೆಪೇಳ್ಗುಂಸಿದ್ಧರಾಮೇಶ ॥
ಹೊಂದಿಕೊಂಡಿಹಭಕ್ತಜನಕಾ । ನಂದದಲಿತಿಳಿಸುವನುಸಾಂಪ್ರತ ।
ಕಿಂದಿಗದನೇಸೂಚಿಸುವದೈಸಾಂಬನಾಟವದು ॥ ೧೫೧ ॥
ಗುರುಮಹತ್ವದಸಾರವಿಂತಿದು । ಗುರುಮಹತ್ವಮನಂತಮಿರ್ಪುದು ।
ಗುರುಮಹತ್ವವನರಿದುಪೇಳುವರಾರುಲೋಕದಲಿ ॥
ಗುರುಫಕೀರೇಶ್ವರನುಗಂಗಾ । ಧರನಮುಖದಿಂಪೇಳಿಸಿದನೀ ॥
ತೆರದಿತಿಳಿವುದುತುರ್ತಿಗಿಲ್ಲಿಗೆಸಾಕುಮೊಡೆಂದ ॥ ೧೫೨ ॥

ಇತಿಶ್ರೀ ಶಿರಃಪುರಸನ್ಮಠಶೂನ್ಯಸಿಂಹಾಸನಸ್ಥಾಪನಾಚಾರ್ಯ ಶ್ರೀಫಕೀರಚನ್ನವೀರಸ್ವಾಮಿಸಮರ್ಥನಿತ್ಯನಿರಂಜನನಿಗಮಾಗೋಚರಸಚ್ಚಿದಾನಂದಅವಿರಳಪರಿಪೂರ್ಣಪರಂಜ್ಯೋತಿ ಆದಿಮೂರ್ತಿ ಅಲ್ಲಮಪ್ರಭು ಆತ್ಮಾರಾಮಶಂಭುಲೋಕಕರ್ತೃಶಾಪಾದಪಿಶಿರಾದಪಿಅಗಣಿತಗುಣಗಣ ಮಹಿಮಾಅನ್ನದಾತಾಭಕ್ತವತ್ಸಲದತ್ತಾವಧೂತದಿಗಂಬರಪಾತಶಹಾ ಶ್ರೀ ಭಗವಾನ್ವಿಭುವಾತ್ಮೀಯಗಂಗನಿಂ ಪೇಳಿಸಿದ ಪೌರಾಣದೊಳಿಪ್ಪತ್ನಾಲ್ಕನೆಯ ಸಂಧಿಸಮಾಪ್ತಮಿಂತು

೧೮೧೧ ಪದ್ಯಂಗಳಿಗೆ ಮಂಗಲಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ

## ೨೫ನೇ ಸಂಧಿಯು.

### ಕೈವಲ್ಯದರ್ಪಣ.

**ಸೂಚನೆ—**

ಸಕಲಶಾಸ್ತ್ರಪುರಾಣನಿಗಮೂ । ಪ್ರಕರವೊರೆವುದುಮುಕ್ತಿಮಾರ್ಗವ ।
ನಕಟಹೇಳ್ವುದುಸುಲಭನಡೆವುದುಬಹಳದುಸ್ತರವು ॥ ಪಲ್ಲ ॥
ಮರವೆಯಲಿಮೆರೆದಾಡಿಬಳಲು । ತ್ತಿರುವವಮಡಿಯುವಮರಳಿಪುಟ್ಟು ।
ತ್ತಿರುವಮನುಜರಕಷ್ಟವುಂಪರಿಹರಿಸಲೆಂದೆಳಸಿ ॥
ಗುರುಫಕೀರೇಶ್ವರನುಗಂಗಾ । ಧರನಮುಖದಿಂತೋರಿಸಿದನಾ ।
ಪರಮುಸದ್ಗತಿಮುಕ್ತಿಹೊಂದುವಸರಳಮಾರ್ಗವನು ॥ ೧ ॥
ಕರುಣಿಯುದ್ಧಾರಕನುಪರಿಭವ । ಶರಧಿಯಂಬಿಗನಲ್ಲಮಪ್ರಭು ।
ಗುರುಫಕೀರನುಪೇಳಿಸಿದನೈಪದಪಿನಂದವನು ॥
ಹಿರಿಯರೊಲುಮೆಯನಾಂತುಕಿರಿಯರು ಸಿರಿವಡೆದುಸೊಗಯಿಸುವವ್ರೋಲೆನೆ।
ಶರಣರೋಜೆಯನೊಂದಿಪಡೆವುದುನಿತ್ಯಸೌಖ್ಯವನು ॥ ೨ ॥
ಪರಮುಸದ್ಗತಿಮುಕ್ತಿಹೊಂದಲು । ಸರನಮಾರ್ಗವದನತಿದೂರವು ।
ಶರಣಸಂತರ ಸಂಗದಿಂದೆಸೆದಪುದುಕಣ್ಮನಕೆ ॥
ದುರಿತಸಂಸಾರದಲಿಜನ್ಮಾಂ । ತರಕೇವಿಸದೆಪಾರಮಾರ್ಥ ।
ಕ್ಕೆರಗುವದುಮನಮಿದುವೆಶತನಿಶ್ಚಯವುಸಿದ್ಧಾಂತ ॥ ೩ ॥
ನರರಮೂತಿಗೆಮೆಚ್ಚಬಾರದು । ನರರಗೊಡವಿಗೆಹೋಗಬಾರದು ।
ನರರಸಂಗಡಸೆಣಿಸಬಾರದುಭಕ್ತರೆಂಬವರು ॥
ನರಗುರಿಗಳೊಡನಾಡಿಸಜ್ಜನ । ಪುರುಷಸಾಧುಗಳಕಟಕೆಟ್ಟಹ ।
ನರಿಯಿರೈನೀವೆಂದುಹೇಳಿಹನಾಫಕೀರೇಶ ॥ ೪ ॥
ಪರರಿಗುಪಕೃತಿಗೈಯ್ಯುತಿರುವರು । ಹರುಷಗೊಂಬುದುಸಾಧುಸುಜನರ ।
ಚರಣದೆಡೆಯಲಿತೀರ್ಥಯಾತ್ರೆಗೆಸಾರಿಸೇವಿಪುದು ॥
ಕರಣದುಧ್ಭ್ರಮೆಯಲ್ಲಿಬೀಳದ । ಲಿಂಗವದುರೆಕಮ್ಮಳಿದುಸದ್ಗುರು ।
ವರನೆಗತಿಯೆಂತೆಂದುನಲಿದಾಡುವದುಸತ್ಪಥವು ॥ ೫ ॥

ಗುರುಸಿರಿಯರೆನಿಪರ್ಗೆಮನ್ನಿಪು । ದರುವಿನಿಂಕಿರಿಯರಿಗೆಬೋಧಿಪು ।
ದರಿಕೆಗೈದಾಜ್ಞೆಯಲಿವರ್ತಿಪುದಾರ್ಯರಂಘ್ರಿಯಲಿ ॥
ಧರೆಯೊಳಸ್ಥಿರವೆಂದುತಿಳಿವುದು । ಪರದಸದ್ಗತಿಚಿಂತೆಗೈವುದು ।
ಗುರುವರನಕೊಂಡಾಡಿನಲಿದಾಡುವದುಸತ್ಪಥವು ॥ ೬ ॥
ವರಪುರಾತನರೆಡೆಗೆನಮಿಪನು । ಶರಣರೆಲ್ಲರಧ್ಯಾನಮೊಳ್ಪನು ।
ಕರಮುಗಿದುಶಿರಬಾಗಿಪ್ರಮಥರಿಗೆಲ್ಲವಂದಿಪನು ॥
ಹರಿಹರಾದ್ಯರಭೇದಗೈಯ್ಯದೆ । ಹರುಷದಿಂದರ್ಚಿಪನುಬಾಳ್ವೆಯೊ ।
ಳಿರುವನಾಕುಂಬಾರಹುಳವಿನವೋಲುಭಕ್ತನವ ॥ ೭ ॥
ತನುವಿನಾಟವನರಿದುತನ್ನೊಳು । ಮನದಚೇಷ್ಟಾಭಾವವರಿವನು ।
ನೆನಹುಮಾತ್ರಕೆನಡಿಸಿಕೊಡುವನುಸಾಂಬನೆಂಬವನು ॥
ಕನಸುಮನಸುಗಳಲ್ಲಿನೀನೇ । ಮಿನುಗುವನುಗುರುರಾಯನೆಂಬವ ।
ನನಘನವನೇಸತ್ಯಸದ್ಗತಿಮುಕ್ತಿಮಾರ್ಗದವಾ ॥ ೮ ॥
ನಮ್ಮವರುಬೈದವರುಭೂಮಿಯೊ । ಳೆಮ್ಮವರುಹೊಡೆದವರುನೆರವೆಯೊ ।
ಳೆಮ್ಮವರುಪಳಿದವರುಮಿಗೆಬಿಟ್ಟಾಡಿಕೊಂಡವರು ॥
ನಮ್ಮವರುಹಿತಕರ್ತರೆಂದೇ । ಹಮ್ಮಳಿದುಗುರುಮೌನಭಜನೆಯೊ ।
ಳೊಮ್ಮನದಿಸೊಗಯಿಪನೆಸದ್ಗತಿಮುಕ್ತಿಮಾರ್ಗದವಾ ॥ ೯ ॥
ಹಿಂದೆನಾನಾರೆಂದುಬಗೆವುದು । ಮುಂದೆನಾನೆಂತೆಲ್ಲಿಗೈದುವೆ ।
ನೆಂದುಬಗೆವುದುನಡುವೆಗಂಟೆಲ್ಲಿಂದಬಿದ್ದಿಹುದು ॥
ಎಂದುಬಗೆವುದುನಿನ್ನಲೀಲೆಯ । ದೆಂದುಗುರುವಿಗೆಮೌನಮುದ್ರೆಯ ।
ನೊಂದಿತನ್ನೊಳೆತಾನೆನಗುವದುಮುಕ್ತಿಪಥವಿದುವೆ ॥ ೧೦ ॥
ಕುಲಛಲಂಗಳಹ್ಯಾವಪಂಥದ । ಬಲಿದಮರವೆಯುಮಬ್ಬುಬಲಿತ್ರೈ ।
ಮಲದಬಲಿಮೇಣ್ಮರ್ತ್ಯರಿಗೆಮಿಗೆಸುತ್ತುಗಟ್ಟಿಹವು ॥
ಕಲಿಯುಗದಮೊದಲನೆಯಸಂಧಿಗೆ । ಬಲಿಯುಕಾಲಂಗೆಂಬವಚನವು ।
ತಿಳಿದುಬಲಿಯಲಿಬೀಳಬೇಡರಿಯೆಂಬನ್ನೆಪ್ರಭುವು ॥ ೧೧ ॥
ಕುರುಡಕುಂಟರನಾಥರೆನಿಪರು । ಹರಕತಿಂಕರುಮನೆಗೆಬಂದೊಡೆ ।
ಜರಿಯಬೇಡರಿಕೊಡಿರಿಕೊಡಿರನ್ನವನುವಸ್ತ್ರವನು ॥

ಬರಿದೆಹೊತ್ತನುಕಳೆಯಬೇಡರಿ　ದುರಿತಕಾರ್ಯಕೆಹೋಗಬೇಡಿರಿ ।
ಗುರುವುಸಲಹುವನೆಂದುನಂಬಿರಿಯೆಂಬನೈಸ್ವಾಮಿ　॥ ೧೨ ॥
ತೇತರದಕುಲಧರ್ಮವಿಡಿದಾ । ಚರಿಪಕರ್ಮಾಸಕ್ತನಾಗಿಹ ।
ನರಗುರಿಯೆನೀನಂಜಿನಡೆಯೈವೃತ್ತ್ಯದೇವತೆಗೆ ॥
ಸ್ಥಿರವಡಲ್ಲೀಬಾಳ್ವಿಕನಸಿನ । ಪರಿಯುತಿಳಿಯಿರಿಬಾಗಿನಡೆಯಿರಿ ।
ಶರಣುಹೋಗಿರಿಗುರುವಿಗೆಂಬನುದತ್ತಗುರುದೇವ　॥ ೧೩ ॥
ನಂಬಿರೈನೀವ್ನಂಬಿಕೊಳ್ಳಿರಿ । ನಂಬಿಕೊಂಡೀಬಾಳ್ವಿಮೂಡಿರಿ ।
ಸಾಂಬಸದ್ಗುರುಕರ್ಮಕಂಟಕದೂರವೂಡುವನು ॥
ನಂಬಿದರಿಗುಂಟೆಲ್ಲಸಂಪದ । ವಿಂಬುದೊರೆವುದುಮುಕ್ತಿಮುಂದ ।
ಕ್ಕೆಂಬುದೇಪುಸಿಯಲ್ಲವೆಂದಾಡಿಸುವನಾಗುರುವು　॥ ೧೪ ॥
ವರವಿಮೌನನವಚನವೋದಿರಿ । ವರಶಿರಃಪು ಗುರುಫಕೀರನ ।
ಬಿರುದುನೋಡಿರಿಮುನಿಪುರಪ್ರಭುವಿಂಗೆವಂದಿಸಿರಿ ॥
ವರದಶಿಶುಮಾಂತೇಶಲೀಲೆಯ । ಗುರಿನೀಕ್ಷಿಸಿರಯ್ಯಲಕ್ಷ್ಮೀ ।
ಪುರದಲಿಂಬಯ್ಯಯ್ಯಗುರುಪಾವಾಡುನೆನಪಿಡಿರಿ　॥ ೧೫ ॥
ಗುರುತುಹಿಡಿಯಿರಿನಾಗಲಿಂಗನ । ವ ಕರಸ್ಥಳನಾಗಲಿಂಗನ ।
ಪರಿಯನರಿಯಿರಿಬೂದಿಸ್ವಾಮಿಯಹೊಲಬುಲೆಕ್ಕಿಸಿರಿ ॥
ಧರೆಯೊಳೆಚ್ಚರಸ್ವಾಮಿಯಾಟದ । ಕುರುಹುತಿಳಿಯಿರಿಅಡವಿಪಾಚ್ಛನ ।
ಚರಣಕೆರಗಿರಿಕಾಳಿದಾಸನಕಥೆಗೆಕಿವಿಗೊಡಿರಿ　॥ ೧೬ ॥
ಮೆರೆವಮಣಿಕೊಡಡಲಿನಿಂತುರೆ । ಧ ಣಿಯಲಿಸದ್ವೀರಶೈವದೆ ।
ಪರಮವೈರಾಗ್ಯದಲಿನಿತ್ಯದಿದೀನಜಗಾಯಿಸುತೆ ॥
ಮುರಿದುಖಳರನುಭಕ್ತಜನಕು । ದ್ಧರಿಸಿದವನವನನ್ನದಾನೀ ।
ಶ್ವರನುತಚ್ಛಿವಲೀಲೆಕೇಳಿರಿಭಕ್ತರೆಂಬವರು　॥ ೧೭ ॥
ವರಷಡಕ್ಷರಿಸಿಜಗುಣಾರ್ಯರ । ಗರಗದಾಮಡಿವಾಳಸ್ವಾಮಿಯ ।
ಪರತರದಘಟವಾಳಸ್ವಾಮಿಯಕನಕದಾಸನದ ॥
ಮೆರೆಯುತಿಹಶಿಶುನಾಳಕಳಸದ । ಸರಿಸಗುರುಗೋವಿಂದಸ್ವಾಮಿಗ ।
ಳುರುತರದಶಿವಲೀಲೆಕೇಳಿರಿಭಕ್ತರೆಂಬವರು　॥ ೧೮ ॥

ಸ್ಮರಿಸಿರಾಗುರುಶಾಂತವೀರೇ । ಶ್ವರನಶ್ರೀಅವಧೂತಹಗರೇ ।
ಶ್ವರನಮೋಣಿಕಪ್ರಭುವರಹಿಮಸ್ವಾಭ್ಯನವನಿಯಲಿ ॥
ಯಿರುತೆಭಕ್ತರನೆತ್ತಿಕೊಂಡಾ । ಶರಣರೆಲ್ಲರುತನ್ನಕಡೆಯುವ ।
ರರಿಯಿರೈನೀವ್ನಂಬಿರೆಂಬನುಗುರುದಿಗಂಬರನು ॥ ೧೯ ॥
ವರಕಬೀರಕಮೂಲದಾಸರ । ವರಪುರಂದರಾಮದಾಸರ ।
ವರತುಕಾರಾಮನಸುದಾಮನಪುಂಡಲೀಕನದು ॥
ವರಚಿದಾನಂದಾವಧೂತನ । ಪರತರದತಿಮಹಾ ಧೂತನ ।
ವರಚಿದಂಬರಸ್ವಾಮಿಯಂಕಲಕೋಟಿಗುರುವರನಾ ॥ ೨೦ ॥
ವಿರತಿಯಲಿಶಿವಲೀಲೆಯಾಡುತೆ ಮರವಿಜನರುದ್ಧಾರಮಾಡಿದ ।
ವರಚಮನ್ಯಾವಲಿಯಮಹಿಮೆಯನಾರುತಿಳಿಯುವರು ॥
ಶರಣರೆಲ್ಲರಸೂತ್ರವೊಂದೇ । ಧರೆಯಕುಲಛಲಮವರೊಳಿಲ್ಲವು ।
ಸ್ಮರಿಸಿಸೇವಿಸೆನನಗೆಹರುಷನದೆಂಬನೈಕರ್ತಾ ॥ ೨೧ ॥
ಬರಿಯಲಸದಳಕೇಳಲಚ್ಚರಿ । ಗುರುಸುಶಿಷ್ಯರಹೃದಯಸೂತ್ರದ ।
ಪರಿಯುದೆಂತೋಪ್ರಭುವಿನಂಶೀಭೂತರೆಂಬವರು ॥
ಮರವಿಕವಚವನಾಂತೊಡೇಂಹರಿ । ಹರರಕಡೆಯುವರೆಲ್ಲರೊಂದೇ ।
ಗುರುತುಕೊಡದಾಡುವರುನನ್ನವರೆಂಬನಾಪಾಚ್ಛಾ ॥ ೨೨ ॥
ಮರವಿಗರಿಗೆಚ್ಚಂಸಲೆಂದೇ । ಧರಣಿಗೆನ್ನಂಶಿಕರುಬರುವರು ।
ಗುರುತುಹಿಡಿವವರ್ಯಾರುಕುಲಛಲಕಾಡಿಕೆಟ್ಟಪರು ॥
ಹರಹರಾತಿಮತಿರುಗಿಹುಟ್ಟು । ತ್ರಿರುವಸಾಯ್ವರಕಂಡುಕೃಪೆಮಂ ।
ಬಾವುಕಿದೆನೀವ್ನಂಬಿರೆಂಬನುಸಾಂಬಸದ್ಗುರುವು ॥ ೨೩ ॥
ನರಗುರಿಗಳುದ್ಧಾರಕಾರಣ । ಪುರುಷಂವರೆಲ್ಲವರುತಿಳಿಯಿರಿ ।
ದುರಿತಸಂಸೃತಿಕೂಪಪತಿತರಿಗೇನುಹೊಳೆಯುವದು॥
ಅರಿತಜನಂತಿಳಿದುಕೊಳ್ಳಿರಿ । ಪರಮಕಾಲಜ್ಞಾನವೋದಿಂ ।
ನರಶರೀರವುಮುಂದೆದೊರೆವುದುಬಹಳದುಸ್ತರವು ॥ ೨೪ ॥
ಧರೆಯೊಳೊಂದವತಾರವಾದದ । ಕರುಣವನುಪಡೆದಿರ್ದನಿಜಕಿಂ ।
ಕರನೆಭಕ್ತನೆಧನ್ಯನವನ್ಯೆಮುಂದೆಲೋಕದಲಿ ॥

ಪರಿಭವಕ್ಕೀಂಬಾರನೈಗಡ । ತಿರುಗಿಬಂದೊಡವಿಲ್ಲಮರಿವೆಯು ।
ಧರೆಗೆಣಾನಿರ್ಲಿಪ್ತನೆನಿಸುವನಾತ್ಮನರುವಿನಲಿ ॥ ೨೫ ॥
ಹೇಸಿಕೆಯಸಂಸಾರಸೌಖ್ಯದೊ । ಳಾಸೆನಡೆದಾತ್ಮದಲಿಮರೆದೊಡ ।
ಮೋಶಿವಂತೋರಿಸುವನಾತ್ಮಜ್ಯೋತಿಯೆಂದವನು ॥
ಏಸುಜನ್ಮದಸುಕೃತವ್ರೋಜಗ । ದೀಶಸದ್ಗು ುಸಾಂಬವಾದವ ।
ಸೀಶರೀರದೆಚರ್ಮಚಕ್ಷುಗಳಿಂದೆಕಾಣುವದು ॥ ೨೬ ॥
ಬಸವಬಸವಾಬಸವಬಸವಾ । ಬಸವನೀನೇಮುಖ್ಯಗತಿಯೆನೆ ।
ಬಸವಲಿಂಗನುಬಿಡದೆತಾನೆಳಕೊಂಬನೇವೇಳ್ಕೆ ॥
ಬಸವಕೃಪೆಯಿಂಕಾಂಬುದಾಶ್ರೀ । ಬಸವಚನ್ನಗೆಪ್ರಭುಗೆಪೊಡವಿಯೊ ।
ಳಸಮಶರಣರವಾದಕಾಂಬುದುಬಹುರಹಸ್ಯದಲಿ ॥ ೨೭ ॥
ತೆ ೀರಿದನುಕುರಿಹಿಕ್ಕಿಯಲಿಮೈ । ದೋರಿದನುಬಳ್ಳದಲಿಮಿಗೆಕುಂ ।
ಬಾರಗುಂಡ ುಮುಂದೆಕುಣಿದಾಡಿದನುಪರಶಿವನು ॥
ಸಾರಿಮೊದರಚನ್ನನಂಬಲಿ ಹಾರಯಿಸಿಬಿತದುಂಡುತೇಗಿದ ।
ನೋಠಣದನಿಜಭಕ್ತಿಗಲ್ಲದೆಕಾಂಬನೇನವನು ॥ ೨೮ ॥
ಕಡಲದಂಡೆಯಗೊಗ್ಗೆಗೊಲೆದನು । ನಡೆದುಬಿಟ್ಟೇಮಣ್ಣುಹೊತ್ತನು ।
ಬಿಡದೆವೇಶ್ಯೆಯಕೈಯಲುಂಡನುಬಡಿಸಿಕೊಂಡಿಹನು ॥
ಕುಡಿನುವಿಷವನುಕಪ್ಪುಗೊರಲನು । ಪೊಡವಿಗೆನಿಸಿಹನರರೆನೋಡಿರಿ ।
ದೃಢಸುಸಿಷ್ಟ್ಯೆಗೆಶಂಭುಭಕ್ತರದಾಸನಾಗಿಹನು ॥ ೨೯ ॥
ಹರಿಯಭಕ್ತರುಲೋಕಧನ್ಯರು । ಹರನಭಕ್ತರುಜಗಕೆಧನ್ಯರು ।
ಧರೆಗೆಧನ್ಯರುದೇವಿಭಕ್ತ ುಸರ್ವರೆನೆಗೊಂದೆ ॥
ಧರಣಿಯಲಿಪ್ರತ್ಯಕ್ಷಪರಶಿವ । ಚ ಣಭಕ್ತರುಮೂರುಲೋಕದೊ ।
ಳಿರುವರಾರ್ಸರಿಯಲ್ಲವೆಂಬನುಗುರುಫಕೀರೇಶಾ ॥ ೩೦ ॥
ವರವಿಪಾಚ್ಛನಪಟುಕುಠಾರವು । ವರಸುದರ್ಶನಚಕ್ರವದುಗಡ ।
ವರಫಕೀರನರಾಮದಂಡವುರಾಮಬಾಣಕಣಾ ॥
ಧರೆಗೆರೂಪಾಂತರದಿತೋರುವ । ವರರೆಪ್ರಭುವಿನವಾದದಪ್ಪಣೆ ।
ಗೆರಗಿಶಿಕ್ಷಿಸಿರಕ್ಷಿಸುವವೈಕುಜನಸುಜನರಸು ॥ ೩೧ ॥

ಗುರುವಿನಾಟವುತಿಳಿಯದಾರಿಗು । ಶ ಣರಾಟವುತಿಳಿಯದಾರಿಗು ।
ಪರಮಭಕ್ತರಮಂತ್ರತಿಳಿಯದುಮರವಿಮನುಜರಿಗೆ ॥
ಗುರುವುಶರಣರುಪರಮಭಕ್ತರು । ದುರಿತಕರ್ಮದಮರ್ತ್ಯಲೋಕದೊ ।
ಳಿರೆಶಿವಸುಖಮಯರುತಿಳಿಯಿರಿಯೆಂಬನಾಪಾಜ್ಞಾ ॥ ೩೨ ॥
ಗುರುಗೆನನ್ನಯಗುರುಗೆಮಹಿಮೂ । ಪುರಷಬಾಜಾವಿಾನದೀನಗೆ ।
ಬಿರುದಂದುಸೇವಿಪನೆನೆನೆವನೆಧನ್ಯನವನಿಯಲಿ ॥
ಮರಳಿಬಾರನುಬಂದೊಡಾತನೊ । ಳಿರುವೆನಾನೇನಡಿಸಿಕೊಡುವೆನು ।
ನರರೆನಂಬಿರಿನಂಬಿರೆಂಬನುಗುರುಫಕೀರೇಶಾ ॥ ೩೩ ॥
ಧರೆಯೊಳಾಪರದಲ್ಲಿಶ್ರೀಗುರು । ವ ಕಥಾನಕಜಯನಿನಾದವು ।
ನರಸುರರಿಗಾಹ್ಲಾದಕರಮೆನೆಮಂಗಳಪ್ರದವು ॥
ದುರಿತವೋಡಿಸಿಪ ಮಭಕ್ತಿ । ಸ್ಫುರಣವನುಸ್ಥಿರಗೊಳಿಸಿಶಿವಸುಖ ।
ವೆರಿಸದೇನಿರ್ದಪುದೆಪರಶಿವಶರಣರಾಟವಿದು ॥ ೩೪ ॥
ಜಯಜಯವುಭೂಲೋಕದವರಿಗೆ । ಜಯಜಯವುಸುರಲೋಕದವರಿಗೆ ।
ಜಯಜಯವುಪಾತಾಳದವರಿಗೆಗುರುಕಟಾಕ್ಷದಲಿ ॥
ಜಯಜಯವುಪಳಿಗೈವಜನರಿಗೆ । ಜಯಜಯವುಯಮದೂತರಿಗೆಜಯ ।
ಜಯಜಯವುಜಯವೆಂದುನುಡಿಸಿದನಾಫಕೀರೇಶಾ ॥ ೩೫ ॥
ನಾನುಬಲ್ಲವನಲ್ಲವೇದವ । ನಾನುತಿಳಿದವನಲ್ಲಶಾಸ್ತ್ರವ ।
ಮೌನಸದ್ಧ್ಯಾನಗಳುಮಿಲ್ಲವುನಾನುಮತಿಹೀನ ॥
ನ್ಯೂನವಧಿಕವುಮೂಗಿಕೃತಿಗನು । ಮೂನವಾದೊಡೆತಿದ್ದಿಕೊಂಬುದು ।
ಸ್ವಾನುಭಾವರೆಪಾದಸೇವಕನೆಂದುತಿಳಿದೆನಗೆ ॥ ೩೬ ॥
ಕಂತುಹರನೊಳುತಾಸುತನ್ನೊಳು । ಕಂತುಹರಶಿವನೆನಿಪಕರ್ತನು ।
ಶಾಂತಸದ್ಗುರುಚನ್ನವೀರೇಶ್ವರನುಕೈವಿಡಿದು ॥
ಅಂತರಂಗದೊಳೆಂತುಹೊಳೆದನೊ । ನಿಂತುನುಡಿಸಿದನೆಂತೊಭುವನದೊ ।
ಳಿಂತುಶುಭಕರವೀಪುರಾಣವುಪುಟ್ಟಿಶೋಭಿಪುದು ॥ ೩೭ ॥
ಧರೆಗೆಮಂಗಳಕರವುಲೋಕದೊ । ಳಿರುವಜನರಿಗೆಮಂಗಳಪ್ರದ ।
ವೆಂತಭಕ್ತರರನ್ನಗನ್ನಡಿಮುಕ್ತಿಸೋಪಾನ ॥

ಶರಣಲೀಲಾವನವುಬಸವೇ। ಶ್ವರನಮಹಿಮೊಸ್ಥಾನವಿದುಶ್ರೀ।
ಗುರುಫಕೀರೇಶ್ವರಪುರಾಣವುಸುಪ್ರಸಿದ್ಧವಲಾ ॥ ೩೮ ॥
ಅಕುಟಿಲರಸದ್ಭಕ್ತಿಗುಂನಿಜ ಭಕತರಾದೃಢನಿಷ್ಠೆಗುಂಸೇ।
ವಕರಸದ್ಭಾವಕ್ಕುವೊಲೆಯುವಗುರುಪುರಾಣವಿದು ॥
ಸುಕವಿಕುಲದಲಿಬೆಳಗಿಸೂರಿ ಪ್ರಕ ದಲಿಮುದವೆರಸಿಭೂಜನ।
ನಿಕರದಲಿಸದ್ಭಕ್ತಿಸಂಪದವೀಯದೇನಿಹುದೆ ॥ ೩೯ ॥
ಗುರುವುಭಕ್ತಿಗೆನಿಜನಿಧಾನವು। ಗುರುವುಭಕ್ತಿಗೆಸ್ವರ್ಗದುರುಮಣಿ।
ಗುರುವುಭಕ್ತಿಗೆಪುರುಷನಿರ್ಜರಧೇನುತಾನವನು ॥
ಗುರುವುಭಕ್ತಿಗೆಕಲ್ಪತರುಶ್ರೀ। ಗುರುವಿಗೆಣೆಯಿಲ್ಲೆನಲುಜಗದೊಳು।
ಗುರುವಿನೀಕೃತಿಭಕ್ತಕುಲಕೇಂಕೊಡದೆಕಾಮ್ಯವನು ॥ ೪೦ ॥
ಜಯಜಯವುಗುರುದತ್ತದೇವಗೆ। ಜಯಜಯುವುಪರಬೊಮ್ಮದೇವಿಗೆ।
ಜಯಜಯವುಬಸವಾದಿಪ್ರಮಥರಿಗೆಲ್ಲಶರಣರಿಗೆ ॥
ಜಯಜಯವುಶಿವಯೋಗಿಸಾಧುಗೆ। ಜಯಜಯವುಸದ್ಭಕ್ತಜನರಿಗೆ।
ಜಯಜಯವುಜಯವೆಂದುನುಡಿಸಿದನಲ್ಲಮಪ್ರಭುವು ॥ ೪೧ ॥
ಸಂಗನಾಬಸವೇಶನಂಘ್ರಿಯ। ನಂಗವಿಸಿಶಿವಶರಣರೆಲ್ಲರ।
ಸಂಗಕೆಳಸಿದಗಂಗನೀಮುಖದಿಂದೆಲೋಕದಲಿ ॥
ಮಂಗಲಾತ್ಮಕಗುರುಫಕೀರನು। ಹ್ಯಾಂಗೆಕೈವಿಡಿದೆಲ್ಲಕೃತಿಯನು।
ಸಾಂಗಗೊಳಿಸಿದನೇನೊತಿಳಿಯದುಪಾಪಪುಂಜನಿಗೆ ॥ ೪೨ ॥
ಏನುತೋರಿದಡೇನುಲೋಕದೊ। ಳೇನುವೂಡಿದಡೇನುಮನುಜನು।
ಕಾಣನೈಪರಲೋಕಸದ್ಗತಿಮುಕ್ತಿಸೌಖ್ಯವನು ॥
ಜ್ಞಾನನಯಭಯಭಕ್ತಿಸುಸವೂ। ಧಾನವಾತ್ಮದೊಳಿಲ್ಲದಿರೆಗಡ।
ಮೌನಸದ್ಗುರುಕರ್ತನೊಲೆಯನುದೊರಕನೆಂದೆಂದು ॥ ೪೩ ॥

॥ ಕಂದ ॥

ಆಂಗಡಪಂಡಿತನೆಂಬವ। ನಾಂಗಡಬಹುರಸಿಕನೆಂಬವಂಭೂತಳದೊಳ್।
ಆಂಗದೊಡ್ಡವನೆಂಬವ। ನಾಂಗಡನಾನೆಂದುನುಡಿವನೇಕಡುಹೆಡ್ಡಂ॥ ೪೪ ॥

ರಂಗಪ್ರಿಯನಿಗೆಸಾಂಬಗೆ । ಸಂಗಯ್ಯಗೆಲಿಂಗದಂಗಗಾನಿಜಮಹಿಮೋ ।
ತ್ತುಂಗಗೆಮಂಗಲಕರನಿಗೆ । ಗಂಗಾಖ್ಯಂಶಂಭುಲಿಂಗಗಾಪ್ತಂನಿತ್ಯಂ ॥೪೫॥
ಜನನೀಜನಕರನಗಲದೆ । ಮನುಜಾವನಿಯಲ್ಲಿಗುರುಗೆಪ್ರಭುವೆನಿಸುವಭೂ ।
ವನಿತಾರಮಣಗೆನಿಷ್ಠೆಯೊಳನುದಿನಮತಿಹಿತವಚಿಂತಿಪನೆಬಹುಧನ್ಯ॥೪೬॥
ಉಳಿಮುಟ್ಟದಲಿಂಗಂಗಡ । ಪ್ರಳಯಂತನಗಿಲ್ಲದಿರ್ಪಲಿಂಗಂಜಗದೊಳ್ ।
ಉಳುವೆಯಘನಲಿಂಗಂತಾ । ನಲಸದೆಭಕ್ತರಿಗೆಪಾಲಿಕೆಂದಿಗುಮೆಂಬೆಂ। ೪೭॥

॥ ಚಂಪಕಮಾಲಾವೃತ್ತ ॥

ಸುರಚರಚನ್ನವೀರಸಲೆರಕ್ಷಿಸುರಕ್ಷಿಸುಲೋಕಮೆಲ್ಲಮಂ ।
ಗುರುವರಸಿದ್ಧರಾಮುಮಿಗೆಕೂಡಿಸುಕಾಡಿಸುಭಕ್ತಮೇಳಮಂ ॥
ಪರತರಜೋಗಿಸ್ವಾಮಿನಡೆಮಾಡಿಸುಮಾಡಿಸುಪುಣ್ಯಕಾರ್ಯಮಂ ।
ಪರಶಿವಶಂಭುಪಾಟ್ಟನೆರೆಹೊಂದಿಸುಹೊಂದಿಸುಮೋಕ್ಷಲಕ್ಷ್ಮಿಯಂ ॥ ೪೮ ॥
ಮುಗಿದುದೀಕೃತಿಗುರುಮಹತ್ವವು । ಮುಗಿವುದಲ್ಲವದೆಂದಿಗುಗಡ ।
ಸೊಗಯಿಸೀರ್ಪೀರ್ಮಾರ್ಗಶೀರ್ಷದಶುದ್ಧಷಷ್ಠಿಯಲಿ ॥
ಬಗೆದೊಡಾನಂದಾಬ್ದದಲಿಝುಗ । ಝಗಿಪಶ್ರವಣಸುತಾರೆಯಲಿನ ।
ಮ್ಮಗಣಿತಾದ್ಭುತಮಹಿಮನಲ್ಲಿಮವಿಭುವಿನಾಜ್ಞೆಯಲಿ ॥ ೪೯ ॥
ಶಾಲಿವಾಹನನೃಪನಶಕವ । ನ್ನಾಲಿಸಿರಿಪದಿನೆಂಟುನೂರರ ।
ಮೇಲೆಮೂವತ್ತಾರರಲಿಲೀಲಾವಿನೋದದಲಿ ॥
ಮೇಳಯಿಸಿದೀಗುರುಮಹತ್ವದ । ಮೂಲಕಥೆಮುಗಿದತ್ತುಮುಂದೇ ।
ಚೈಲಿಗಾಟವುಪರಮಕಾಲಜ್ಞಾನಮೇಳವದು ॥ ೫೦ ॥
ನಳನಳಿಪಹೃದಯಾಬ್ಜದಳದಲಿ । ಥಳಥಳಿಪಭಯಭಕ್ತಿರತ್ನದ ।
ಹೊಳಪಿನಾರತಿಯೆತ್ತಿಬೆಳಗಿರಿಶ್ರೀಘಕೀರನಿಗೆ ॥
ಕಳಸಕನ್ನಡಿಮುತ್ತಿನಾರುತಿ । ಬೆಳಗಿರೈಜಗದಾದಿದೇವಿಗೆ ।
ಪೊಳೆವಭಕ್ತಿಯೊಳೆಳ್ದುಬೆಳಗಿರಿಮಂಗಳಾರತಿಯ ॥ ೫೧ ॥

॥ ಚಂಪಕಮಾಲಾವೃತ್ತ ॥

ಗುರುವಿಗೆಮಾಡಿಮಾಡಿಘನಸೇವೆಯನಂಜದೆಯಾರಿಗಾದೊಡಂ ।
ಗುರುವಿಗೆನೀಡಿನೀಡಿನಿಜಭಕ್ತಿಯನುತ್ತಮಸತ್ವಸೀತಿಯಿಂ ॥

ಗುರುವನುನೋಡಿನೋಡಿತಣಿವೊಂದುವಬಂಧುರಭಕ್ತರಿರ್ಪರಾ ।
ಗುರುವನುಪಾಡಿಪಾಡಿಕುಣಿದಾಡುವಭಕ್ತರಪುಣ್ಯವೆಂತುಟೋ ॥ ೫೨ ॥
ಇತಿಶ್ರೀ ಶಿರಃಪುರಸನ್ನುತಶೂನ್ಯಸಿಂಹಾಸನಸ್ಥಾಪನಾಚಾರ್ಯ ಶ್ರೀಫಕೀರಚನ್ನ ವೀರಸ್ವಾಮಿಸಮರ್ಥನಿತ್ಯನಿರಂಜನನಿಗಮಾಗೋಚರಸಚ್ಚಿದಾನಂದಅವಿರಳ ಪರಿಪೂರ್ಣಪರಂಜ್ಯೋತಿ ಆದಿಮೂರ್ತಿ ಅಲ್ಲಮಪ್ರಭು ಆತ್ಮಾರಾಮಶಂಭು ಲೋಕಕರ್ತೃಶಾಪಾದಪಿಶಿರಾದಪಿಅಗಣಿತಗುಣಗಣ ಮಹಿಮಾಅನ್ನದಾತಾಭ ಕ್ತವತ್ಸಲದತ್ತಾವಧೂತದಿಗಂಬರಪಾತಕಹಾ ಶ್ರೀ ಭಗವಾನ್‌ವಿಭುವಾತ್ಮೀಯ ಗಂಗನಿಂ ಪೇಳಿಸಿದ ಪೌರಾಣದೊಳಿಪ್ಪತ್ತೈದನೆಯ ಸಂಧಿಸಮಾಪ್ತಮಿಂತು ೧೮೬೨ ಪದ್ಯಂಗಳಿಗೆ ಮಂಗಲಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ

॥ ಸಂಪೂರ್ಣಂ ॥



